# ದೀವರ ಸಮುದಾಯದ ಕೃಷಿ-ಆಚರಣೆಗಳು

(ಸಾಗರ-ಸೊರಬ ತಾಲೂಕನ್ನು ಅನುಲಕ್ಷಿಸಿ ಒಂದು ಸಮಾಜಶಾಸ್ತ್ರೀಯ ಅಧ್ಯಯನ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್ ಸಂಪ್ರಬಂಧ


ಸಂಶೋಧಕ

ಶಿವಾನಂದ ಎಸ್. ಕೆಂಪಳ್ಳೇರ

ಮಾರ್ಗದರ್ಶಕರು

ಡಾ. ಗಂಗಾಧರ ದೈವಜ್ಞ

ಅಧ್ಯಾಪಕರು





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೪ - ೦೫.

# ದೀವರ ಸಮುದಾಯದ ಕೃಷಿ - ಆಚರಣೆಗಳು

(ಸಾಗರ-ಸೊರಬ ತಾಲೂಕನ್ನು ಅನುಲಕ್ಷಿಸಿ ಒಂದು ಸಮಾಜಶಾಸ್ತ್ರೀಯ ಅಧ್ಯಯನ)

[ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್ ಸಂಪ್ರಬಂಧ]

ಸಂಶೋಧಕ

**ಶಿವಾನಂದ ಎಸ್. ಕೆಂಪಳ್ಳೇರ**

ಮಾರ್ಗದರ್ಶಕರು

**ಡಾ. ಗಂಗಾಧರ ದೈವಜ್ಞ**

ಅಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೪-೦೫



# ಮಾರ್ಗದರ್ಶಕರ ಪ್ರಮಾಣ ಪತ್ರ

ದೀವರ ಸಮುದಾಯದ ಕೃಷಿ - ಆಚರಣೆಗಳು (ಸಾಗರ-ಸೊರಬ ತಾಲೂಕನ್ನು ಅನುಲಕ್ಷಿಸಿ ಒಂದು ಸಮಾಜಶಾಸ್ತ್ರೀಯ ಅಧ್ಯಯನ) ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಎಂ.ಫಿಲ್ ಪದವಿಗಾಗಿ ಶಿವಾನಂದ ಎಸ್. ಕೆಂಪಳ್ಳೇರ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 30-4-2005

ಡಾ. ಗಂಗಾಧರ ದೈವಜ್ಞ
ಮಾರ್ಗದರ್ಶಕರು ಮತ್ತು ಅಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಸಂಶೋಧಕನ ಪ್ರಮಾಣ ಪತ್ರ

ದೀವರ ಸಮುದಾಯದ ಕೃಷಿ - ಆಚರಣೆಗಳು (ಸಾಗರ-ಸೊರಬ ತಾಲೂಕನ್ನು ಅನುಲಕ್ಷಿಸಿ ಒಂದು ಸಮಾಜಶಾಸ್ತ್ರೀಯ ಅಧ್ಯಯನ) ಎಂಬ ಸಂಪ್ರಬಂಧವನ್ನು ಡಾ. ಗಂಗಾಧರ ದೈವಜ್ಞ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

S. S. Kempaller.

ಸ್ಥಳ : ವಿದ್ಯಾರಣ್ಯ
ದಿನಾಂಕ : 30-4-2005.

ಶಿವಾನಂದ ಎಸ್. ಕೆಂಪಳ್ಳೇರ
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪರಿವಿಡಿ

ಸಾಮಾಜಿಕ ವಿಜ್ಞಾನಗಳಲ್ಲಿ ಅನ್ವೇಷಣೆಯ ಬಗ್ಗೆ ಹೇಳಿಕೊಳ್ಳುವಂತಹ ವಿಚಾರಗಳು ಕಡಿಮೆ. ಆದರೂ ಕಳೆದ ಒಂದೆರಡು ದಶಕಗಳಲ್ಲಿ ಗ್ರಾಮೀಣ ಕೃಷಿ ಸಮುದಾಯದ ಒಳನೋಟಗಳು, ಅಧ್ಯಯನಗಳು ಹೆಚ್ಚು ಮನ್ನಣೆ ಗಳಿಸುತ್ತಿವೆ. ಬದಲಾಗುತ್ತಿರುವ ಸಮಕಾಲೀನ ಪ್ರಪಂಚದಲ್ಲಿ ಬಡತನ, ಹಸಿವು ಮತ್ತು ಅಸರಕ್ಷತೆಯಿಂದ ಬಹುಸಂಖ್ಯಾತ ಜನರ ಜೀವನ ಸಮಸ್ಯೆಗಳು ಆಸ್ಫೋಟಗೊಳ್ಳುವ ಸ್ಥಿತಿಯನ್ನು ಮುಟ್ಟುತ್ತಿವೆ. ವಿಶ್ವದ ಎಲ್ಲಾ ಸಮಾಜಗಳ ಬಗ್ಗೆ ವರದಿಯಾಗಿರುವಂತೆ ವ್ಯವಸಾಯದಲ್ಲಿ ತೊಡಗಿಸಿಕೊಂಡಿರುವ ಬಹುಸಂಖ್ಯೆಯ ಜನರು ರಾಜಕೀಯ ವ್ಯಕ್ತಿಗಳ ತಂತ್ರಗಳಿಗೆ ಸಿಕ್ಕಿದ್ದಾರೆ. ''ಆಡಳಿತಶಾಹಿ ತನ್ನ ಭ್ರಷ್ಟವ್ಯವಸ್ಥೆಯಿಂದಾಗಿ ರೈತರ ಶೋಷಣೆ ಮಾಡುತ್ತದೆ. ಕೃಷಿಕರು ಭೂಮಾಲಿಕರ ದೌರ್ಜನ್ಯಕ್ಕೆ ಬಲಿಯಾಗಿದ್ದಾರೆ. ಇಷ್ಟು ಸಾಲದೆಂಬಂತೆ ಕ್ರಾಂತಿಕಾರಿಗಳೆಂದು ಕರೆದುಕೊಳ್ಳುವ ಗುಂಪುಗಳಿಂದ ಕೃಷಿಕರನ್ನು ದಾರಿತಪ್ಪಿಸುವ ಪ್ರಯತ್ನ ಸತತವಾಗಿ ನಡೆದಿದೆ.''[೧] ಇಂತಹ ಪರಿಸ್ಥಿತಿಯು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಸಮಾಜಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತಲಿದೆ.

ವ್ಯವಸಾಯ ಸಮುದಾಯಗಳ ಅಧ್ಯಯನವು ಮಾನವಶಾಸ್ತ್ರದ ಬೆಳವಣಿಗೆಯ ಜೊತೆ ಗುರುತಿಸಿಕೊಂಡಿದೆ. ''ಪಾಶ್ಚಿಮಾತ್ಯ ದೇಶಗಳಲ್ಲಿ ಮಾನವಶಾಸ್ತ್ರಜ್ಞರು ಅಧ್ಯಯನ ನಡೆಸಲು ಬೇಕಾದ ಬುಡಕಟ್ಟು ಸಮುದಾಯಗಳ ಕೊರತೆಯಿಂದಾಗಿ ಅವರು ಗ್ರಾಮಗಳಲ್ಲಿನ ರೈತ ಸಮುದಾಯಗಳ ಕಡೆ ತಮ್ಮ ಗಮನವನ್ನು ಹೆಚ್ಚಾಗಿ ಹರಿಸಬೇಕಾಯಿತು. ಈ ಬಗ್ಗೆ ಮುಖ್ಯವಾಗಿ ಅಮೇರಿಕಾ ಸಂಯುಕ್ತ ಸಂಸ್ಥಾನದ ಮಾನವಶಾಸ್ತ್ರಜ್ಞರು ಹಲವಾರು ಕ್ಷೇತ್ರ ಅಧ್ಯಯನಗಳನ್ನು ಮಾಡಿದರು.''[೨] ಇದರಿಂದಾಗಿ ಪ್ರಪಂಚದ ಎಲ್ಲ ಸಮಾಜಗಳಲ್ಲೂ ರೈತ ಸಮುದಾಯಗಳ ವೈವಿಧ್ಯತೆಯನ್ನು ಗುರುತಿಸಿಲು ಸಾಧ್ಯವಾಯಿತು. ಅಲ್ಲದೆ ಗ್ರಾಮೀಣ ಸಮಾಜಗಳು ಕೈಗಾರೀಕರಣ ಮತ್ತು ನಗರೀಕರಣ ಪ್ರಕ್ರಿಯೆಗಳ ಪರಿಣಾಮವಾಗಿ ತ್ವರಿತಗತಿಯಲ್ಲಿ ಬದಲಾವಣೆ ಹೊಂದುತ್ತಾ ವ್ಯವಸ್ಥಿತ ಅಧ್ಯಯನದಲ್ಲಿ ಅನುವು ಮಾಡಿಕೊಟ್ಟವು. ಅದರಂತೆ ''ರಷ್ಯಾ, ಹಂಗೇರಿ, ಟರ್ಕಿ, ಚೀನಾ, ಜಪಾನ್, ಭಾರತ, ತಾಂಜಾನೀಯ, ಕೊಲಂಬಿಯಾ ಮುಂತಾದ ದೇಶಗಳ ಗ್ರಾಮೀಣ ಸಮುದಾಯಗಳ ಪ್ರಾಕೃತಿಕ ಮತ್ತು ಸಾಮಾನ್ಯ ಸ್ಥಿತಿಗತಿಗಳನ್ನು ಮಾನವಶಾಸ್ತ್ರಜ್ಞರು ಅಧ್ಯಯನ ಮಾಡಿ, ಅವುಗಳಲ್ಲಿನ ಸಾಮಾನ್ಯ ಅಂಶಗಳು ಮತ್ತು ವೈಶಮ್ಯಗಳನ್ನು ಗುರುತಿಸಿದ್ದಾರೆ.''[೩]

ಹದಿನೆಂಟನೆಯ ಶತಮಾನಕ್ಕೂ ಹಿಂದೆ ಭಾರತದಲ್ಲಿ ಗ್ರಾಮೀಣ ಸಮುದಾಯಗಳು ಸ್ವಾವಲಂಬಿಗಳಾಗಿದ್ದವು. ಅಂತಹ ಸನ್ನಿವೇಶಗಳಲ್ಲಿ ವ್ಯವಸಾಯಗಾರರು ಮತ್ತು ಗ್ರಾಮೀಣ ಕುಶಲಕರ್ಮಿಗಳು ಸಾಂಪ್ರದಾಯಿಕ ಪದ್ಧತಿಯಂತೆ ಕೃಷಿ ಉತ್ಪನ್ನಗಳನ್ನು ಮತ್ತು ಗ್ರಾಮೀಣ ಕುಶಲವಸ್ತುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ಪ್ರತಿಯೊಬ್ಬ ವ್ಯವಸಾಯಗಾರನು ತನ್ನ ಕುಟುಂಬದ ಸಹಾಯದಿಂದ ಕೃಷಿ ಕಸುಬನ್ನು ಉಳಿಸಿಕೊಂಡಿದ್ದನು. ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ವ್ಯವಸಾಯದ್ದೇ ಹೆಚ್ಚಿನ ಪಾಲು. ಕೃಷಿಯ ಪಾತ್ರ ಇಲ್ಲಿ ಪ್ರಮುಖವಾದುದು. ಗ್ರಾಮೀಣ ಸಮಾಜದ ರಚನೆಯಲ್ಲಿ ಗಣನೀಯವಾಗಿ ಕೃಷಿ ಸಂಖ್ಯೆ ಸಮನಾಗಿ ಹೆಚ್ಚಳವಾಗಿರುವುದನ್ನು ಗಮನಿಸಿಬೇಕು. ಆದರೆ ಗ್ರಾಮೀಣ

ಪ್ರದೇಶದ ಕೃಷಿಕರ ಜೀವನದ ಸಮಸ್ಯೆಗಳನ್ನು, ಮತ್ತು ಅವರು ಕೃಷಿಯ ಬಗ್ಗೆ ಇಟ್ಟುಕೊಂಡ ಕೃಷಿಯ ಆಚರಣೆಗಳನ್ನು ತಿಳಿಸುವ ಸಂಶೋಧನಾ ಅಧ್ಯಯನಗಳು ಆಗಿಲ್ಲ. ಪ್ರಸ್ತುತ ಅಧ್ಯಯನವು "ದೀವರ ಸಮುದಾಯದ ಕೃಷಿ ಆಚರಣೆಗಳು" ಏನೆಂಬುದನ್ನು ಅಧ್ಯಯನ ಮಾಡುವುದಾಗಿದೆ. ಮತ್ತು ಕೃಷಿಕರ ಮೂಲ ಆರ್ಥಿಕ ಚಟುವಟಿಕೆಗಳ ಸ್ವರೂಪವನ್ನು ಗಮನಿಸುವುದಾಗಿದೆ.

ಆದಾಗ್ಯೂ ಕೃಷಿಕರ ಆದಾಯದ ಮೂಲ ಹಾಗೂ ಉದ್ಯೋಗದ ಸಮಸ್ಯೆಗಳನ್ನು ವಿವರವಾಗಿ ತಿಳಿಯಲು "೧೯೫೦ ರಲ್ಲಿ ಕೃಷಿ ಕಾರ್ಮಿಕರ ವಿಚಾರಣಾ ಆಯೋಗವು ಮೊದಲ ಪ್ರಯತ್ನ ಮಾಡಿತು. ಸ್ವಾತಂತ್ರ್ಯ ಪೂರ್ವದ ಅಧ್ಯಯನಗಳಲ್ಲಿ ಜೀತ ಪದ್ಧತಿಯೇ ಈ ಕ್ಷೇತ್ರದ (ಭೂರಹಿತತೆಯೇ) ಸಮಸ್ಯೆಗಳಿಗೆ ಮುಖ್ಯ ಕಾರಣ ಎಂದು ತಿಳಿಯಲಾಯಿತು. ಈ ಪದ್ಧತಿ ಗ್ರಾಮೀಣ ಬಡಜನರನ್ನು ಶೋಷಿಸುತ್ತದೆ ಎಂಬ ವಿಚಾರ ಮತ್ತು ಅವರ ಸಮಸ್ಯೆಗಳು ರಾಷ್ಟ್ರೀಯ ನಾಯಕರ ಗಮನವನ್ನು ವಿಶೇಷವಾಗಿ ಆಕರ್ಷಿಸಿದ್ದವು."[೪] ಈ ಸಮಸ್ಯೆಗಳನ್ನು ಕುರಿತಾಗಿ ಇತ್ತೀಚಿನ ಸಾಮಾಜಿಕ ಶಾಸ್ತ್ರಗಳ ವಿದ್ವಾಂಸರು ಅಧ್ಯಯನ ಮಾಡುತ್ತಾ ಗ್ರಾಮೀಣ ಸಮಸ್ಯೆಗಳನ್ನು ಕುರಿತು ವಿವರಿಸಿದ್ದರಾದರೂ ಅವರ ಅಧ್ಯಯನಗಳಲ್ಲಿ ವ್ಯವಸ್ಥಿತವಾದ ಅಧ್ಯಯನ ವಿಧಾನಗಳಿಲ್ಲ.

ಅದರಂತೆ ೧೯೪೭ ರ ನಂತರ ನಡೆದ ಅಧ್ಯಯನಗಳು ಕೃಷಿಕರ ಜೀವನ ಮತ್ತು ಕೆಲಸದ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುತ್ತವೆ. ಅವುಗಳಲ್ಲಿ ಕೃಷಿಯ ವಿಚಾರಣೆಗಳು (೧೯೫೦, ೧೯೫೬, ೧೯೬೪ )ಮತ್ತು ಸರ್ವೇಕ್ಷಣೆಯೊಂದಿಗೆ ಬಂದಿರುವ ರಾಷ್ಟ್ರೀಯ ನಮೂನೆಯ ಗ್ರಾಮೀಣ ಕೃಷಿಕ ವಿಚಾರಣೆಗಳು ಪರಿಗಣಿಸುವಂತಹವು. ಸಾಮಾನ್ಯವಾಗಿ ಈ ಅಧ್ಯಯನಗಳಲ್ಲಿ ವಿಶ್ಲೇಷಣೆಗೆ ಒತ್ತು ನೀಡಲಾಗಿದೆ. ಲಭ್ಯವಿದ್ದ ಆಂಶಿಕ ದತ್ತಾಂಶಗಳ ಮಾಹಿತಿಗಳಿಗೆ ಗಮನ ನೀಡಲಾಗಿದೆ. ಕೃಷಿ ಸುಧಾರಣೆಯ ವಿಷಯವು ಭಾರತದ ಪಂಚವಾರ್ಷಿಕ ಯೋಜನೆಗಳಲ್ಲಿ ಆದ್ಯತೆ ಪಡೆದಿದೆ. ಜೊತೆಗೆ ತೆಲಂಗಾಣ ಹೋರಾಟದಂಥ ಚಳುವಳಿಗಳು ಸರಕಾರದ ಮಧ್ಯಪ್ರವೇಶವನ್ನು ಚುರುಕುಗೊಳಿಸಿದವು. ಇದರ ಪರಿಣಾಮವಾಗಿ ದೇಶದ ರಾಜಕೀಯ ಒಲವಿನ ಮೂರು ಮುಖ್ಯ ವಿಚಾರಧಾರೆಗಳು ವ್ಯವಸಾಯದ ಸಮಸ್ಯೆಗಳಿಗೆ ಪರಿಹಾರ ಸೂತ್ರಗಳನ್ನು ರಚಿಸಿದವು. ಅವುಗಳನ್ನು ಹೀಗೆ ವರ್ಗೀಕರಿಸಲಾಗಿದೆ.

೧. ಕಾಂಗ್ರೆಸ್ ಪಕ್ಷದ ಕೃಷಿ ಸುಧಾರಣಾ ಸಮಿತಿಯು ೧೯೪೮ ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಿಂದ ರಚಿಸುತ್ತಿದ್ದು, ಅದು ದೇಶದಲ್ಲಿನ ಕೃಷಿ ಸಮಸ್ಯೆ ಬಗ್ಗೆ ವರದಿ ಸಲ್ಲಿಸಿತು. ಈ ವರದಿಯು ದೇಶದಲ್ಲಿ ಕಾಂಗ್ರೆಸ್ ಸರಕಾರವಿರುವ ರಾಜ್ಯಗಳಲ್ಲಿ ಮಾರ್ಗದರ್ಶಿಸೂತ್ರವಾಯಿತು.

೨. ಭಾರತ ಕಮ್ಯುನಿಸ್ಟ್ ಪಕ್ಷವು ೧೯೪೮ ರಲ್ಲಿ ಕಲ್ಕತ್ತದಲ್ಲಿ ನಡೆದ ತನ್ನ ಎರಡನೇ ಸಮಾವೇಶದಲ್ಲಿ 'ಉಳುವವನೇ ಭೂ ಒಡೆಯ' ಎಂಬ ಘೋಷಣೆಯನ್ನು ಅಳವಡಿಸಿಕೊಂಡಿತು. ಇದು ದೇಶದ ಕೃಷಿ ನೀತಿಗೆ ಸಂಬಂಧಿಸಿದಂತೆ ಬಹುಮುಖ್ಯ ಆಶಯವಾಗಿ ಪರಿಣಮಿಸಿತು.

೩. ಗಾಂಧೀಜಿಯವರ ಅನುಯಾಯಿಗಳಲ್ಲಿ ಒಬ್ಬರಾದ ವಿನೋಬಾ ಭಾವೆಯವರ ನೇತೃತ್ವದಲ್ಲಿ ೧೯೪೮ ರಲ್ಲಿ ಸರ್ವೋದಯ ಚಳುವಳಿಯನ್ನು ಆರಂಭಿಸಿದರು. ಕಾಲಾನುಕ್ರಮದಲ್ಲಿ ಅದು 'ಭೂದಾನ' ಮತ್ತು 'ಗ್ರಾಮದಾನ' ಚಳುವಳಿಯಾಯಿತು.

ಅರ್ಥಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರುಗಳ ಅಧ್ಯಯನಗಳಲ್ಲದೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಹಂತದಲ್ಲಿ ಸಮಾಜ ವಿಜ್ಞಾನಿಗಳು ವಿವಿಧ ಕೃಷಿ ಯೋಜನೆಗಳನ್ನು ರೂಪಿಸಿ ಅವು ಎಷ್ಟರ ಮಟ್ಟಿಗೆ ಜಾರಿಯಾಗಿವೆ ಎಂಬುದನ್ನು ಪರಿಶೀಲಿಸಿದರು. ಯೋಜನಾ ಆಯೋಗವು ವಿವಿಧ ದೇಶಗಳ ಕೃಷಿ ವಿಜ್ಞಾನ ಪರಿಣಿತರನ್ನು ಆಹ್ವಾನಿಸಿದರು. ಕೇಂದ್ರ ಸರಕಾರವು ೧೯೬೯ ರಲ್ಲಿ ರಾಷ್ಟ್ರೀಯ ಕೃಷಿಯ ಆಯೋಗವನ್ನು ರಚಿಸುವ ಮೂಲಕ ಭೂಸುಧಾರಣೆಯೂ ಸೇರಿದಂತೆ ಭಾರತೀಯ ಕೃಷಿಗೆ ಸಂಬಂಧಿಸಿದ ಎಲ್ಲಾ ವಿಚಾರಗಳ ವಿಶ್ಲೇಷಣೆಗಳನ್ನು ಮತ್ತು ನೀತಿ ನಿಯಮಗಳ ಶಿಫಾರಸ್ಸುಗಳನ್ನು ತಿಳಿಯಬಯಸಿತು.

ವ್ಯವಸಾಯದಲ್ಲಿ ಗೇಣಿಯ ವಿಚಾರಗಳು ೧೯೫೦ ರ ನಂತರ ಮಹತ್ವದ ಬೆಳವಣಿಗೆಯನ್ನು ಕಂಡವು. ದೇಶವು ವ್ಯವಸಾಯದಲ್ಲಿ ಹೊಸ ತಂತ್ರಗಳನ್ನು ಅಳವಡಿಸಿಕೊಂಡಿತು. ಉದಾಹರಣೆಗೆ ಹೆಚ್ಚು ಇಳುವರಿ ನೀಡುವ ಸುಧಾರಿತ ಬೀಜಗಳ ಬಳಕೆ, ರಾಸಾಯನಿಕ ಗೊಬ್ಬರಗಳ ಬಳಕೆ, ಕ್ರಿಮಿನಾಶಕಗಳ ಉಪಯೋಗ ಮತ್ತು ಸುಧಾರಿತ ವ್ಯವಸಾಯ ಕ್ರಮಗಳಲ್ಲದೆ, ಪರ್ಯಾಯ ರೀತಿಯ ಬೆಳೆಯ ಕ್ರಮಗಳನ್ನು ಅಳವಡಿಸಿಕೊಂಡಿದ್ದು, ಭಾಗತದ ಕೃಷಿಯ ಮೇಲೆ ಗಣನೀಯ ಪರಿಣಾಮ ಬೀರಿತು. ಹಸಿರು ಕ್ರಾಂತಿಯಂಥ ನೂತನ ಪರಿಕಲ್ಪನೆಯು ಕೃಷಿ ಉತ್ಪಾದನಾ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನು ನೀಡುವುದರೊಂದಿಗೆ ಸಾಮಾಜಿಕ, ಆರ್ಥಿಕ ಬದಲಾವಣೆಯನ್ನು ತಂದಿತು.

**ಕೃಷಿಗೆ ಸಂಬಂಧಿಸಿದ ಅಧ್ಯಯನಗಳು**

ಭಾರತದ ಕೃಷಿ ಸಮಸ್ಯೆಗಳಿಗೆ ಆರ್ಥಿಕ ಸಮಸ್ಯೆಗಳ ಹಿನ್ನಲೆ ಕಾರಣವಾಗಿದ್ದರೂ ಈ ನಿಟ್ಟಿನಲ್ಲಿ ವ್ಯಾಪಕವಾದ ಆಸಕ್ತಿಯನ್ನು ಈ ಕ್ಷೇತ್ರದಲ್ಲಿ ನಿರೀಕ್ಷಿಸಲಾಗಿದ್ದರೂ ಸಮಾಜವಿಜ್ಞಾನಗಳಿಂದ ಕೇವಲ ಸೀಮಿತ ಅಧ್ಯಯನಗಳಾದವು. ಭಾರತೀಯ ವಿಶ್ವವಿದ್ಯಾಲಯಗಳಲ್ಲಿ ೧೯೪೪ ರವರೆಗೆ ಕೃಷಿ ಅರ್ಥಶಾಸ್ತ್ರದಲ್ಲಿ ಪರಿಣಿತಿ ಪಡೆದ ವಿದ್ವಾಂಸರುಗಳಲ್ಲಿ (ಪಿ.ಸಿ.ಜೋಷಿ ೧೯೪೫). ಕೃಷಿ ಸಮಸ್ಯೆಗಳ ಕುರಿತು ಅಧ್ಯಯನ  ಗ್ರಾಮೀಣ ಸಮಾಜ ಶಾಸ್ತ್ರದಲ್ಲಿಯೂ ಇತ್ತು (ನಾನಾವತಿ ಮತ್ತು ಅಂಬಾರಿಯಾ ೧೯೪೫ ). ಆದರೆ "೧೯೪೦ ರ ಮತ್ತು ೧೯೫೦ ರ ದಶಕದಲ್ಲಿ ಸಮಾಜಶಾಸ್ತ್ರಜ್ಞರು ರೈತರ ಹಾಗೂ ಭೂಮಿ ನಡುವಿನ ಸಂಬಂಧದ ಕುರಿತಾಗಿ ಆಕರ್ಷಿತರಾಗಲಿಲ್ಲವೆಂದು, ಪಿ.ಸಿ.ಜೋಷಿಯವರು ಹೇಳಿದ್ದಾರೆ."[೫] ಅವುಗಳಲ್ಲಿ "ಬಹುಪಾಲು ಅಧ್ಯಯನಗಳು ಧರ್ಮ, ಜಾತಿ ಮತ್ತು ಬಂಧುತ್ವಕ್ಕೆ ಸೀಮಿತವಾಗಿವೆ. ಎಂ.ಎನ್.ಶ್ರೀನಿವಾಸ್ (೧೯೫೨ - ೧೯೭೮) ಮತ್ತು ಈಶ್ವರನ್ ೧೯೬೬ - ೬೮ - ೭೮) ಇವರ ಅಧ್ಯಯನಗಳಲ್ಲಿ (ಅವರ ಜೀವನದ ಕಡೆಗೆ ಹೆಚ್ಚು)  ಸಾಮರಸ್ಯದ ಆಸಕ್ತಿಯು ಅಂತರ್ಗತವಾಗಿರುವುದನ್ನು ಮೂಲಕಲ್ಪನೆಯನ್ನಾಗಿ ಕಾಣಬಹುದೇ ವಿನಹ, ಸಮುದಾಯಗಳ ಘರ್ಷಣೆಯ ಆಸಕ್ತಿಯನ್ನು ಉತ್ಸಾಹವನ್ನು ಕಾಣುವುದಿಲ್ಲ. (ಪಾರ್ವತಮ್ಮ ೧೯೮೨)."[೬] ಮುಂದೆ ಜನರ ಆರ್ಥಿಕ ಜೀವನದ ಬಗ್ಗೆ ಅಧ್ಯಯನಗಳು ನಡೆದರೂ, "ಸಾಮಾಜಿಕ ಮಾನವಶಾಸ್ತ್ರದ ವಿಶ್ಲೇಷಣೆಗಳಲ್ಲಿ ದೇಶದ ಹಳ್ಳಿಗಳ ಕೃಷಿ ಅಭಿವೃದ್ಧಿ ಅಧ್ಯಯನಗಳಿಗೆ ಯಾವುದೇ ಉತ್ತೇಜನ ನೀಡಲಿಲ್ಲ."[೭] (ಪಿ.ಸಿ.ಜೋಷಿ ೧೯೭೫). ಗ್ರಾಮೀಣ ಸಮಾಜದ ನೇರ ಸಂಪರ್ಕ ಹೊಂದುವಲ್ಲಿ ವಿಫಲವಾಗಿರುವುದರ ಜೊತೆಗೆ ಅವರು ಸಾಮಾನ್ಯವಾಗಿ ಪಾಶ್ಚಾತ್ಯ ಅಧ್ಯಯನಗಳ ಎರವಲು ವಿಧಾನಗಳ ಮೂಲಕ ಭಾರತೀಯ ಕೃಷಿ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಿದ್ದಾರೆ.

ಭಾರತೀಯ ವಿದ್ವಾಂಸರುಗಳಲ್ಲಿ ಕೃಷಿಗೆ ಸಂಬಂಧಿಸಿದ ಅಧ್ಯಯನಕ್ಕೆ ಉತ್ತಮ ಕೊಡುಗೆ ನೀಡಿದವರಲ್ಲಿ ಮೊದಲಿಗರೆಂದರೆ ರಾಧಾಕಮಲ್ ಮುಖರ್ಜಿಯವರು. ಅವರು ಭಾರತದ ಗ್ರಾಮೀಣ ಅಧ್ಯಯನಗಳಲ್ಲಿ ವಿಶೇಷವಾಗಿ ಜಮೀನಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ಗಮನ ನೀಡಿದ ಪ್ರಮುಖರು. ಮುಖರ್ಜಿಯವರಲ್ಲದೆ ಅನೇಕ ವೃತ್ತಿ ನಿರತ ಸಮಾಜ ವಿಜ್ಞಾನಿಗಳು ಕೃಷಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ಆದ್ಯತೆ ನೀಡಿ ಅಧ್ಯಯನ ಮಾಡಿರುವುದನ್ನು ಇಲ್ಲಿ ಉಲ್ಲೇಖಿಸಬಹುದು. ಉದಾಹರಣೆಗೆ ೧೯೪೨ ಕ್ಕೂ ಹಿಂದೆ ಜಿ.ಎನ್.ಗಂಗೂಲಿ (೧೯೩೮) ನಾನವತಿ ಮತ್ತು ಆಂಬಾರಿಯಾ (೧೯೪೫) ತಾರವೋರ್ ಸಿಂಗ್ (೧೯೪೫) ಮತ್ತು ಎಂ.ಎಂ.ಮೊರಂಜೋ (೧೯೪೭) ಮೊದಲಾದ ವಿದ್ವಾಂಸರು ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಕಾಲ ಕಾಲಕ್ಕೆ ಈ ಸಮಸ್ಯಗಳಿಗೆ ಸಂಬಂಧಿಸಿದಂತೆ ಸಮಾಜ ವಿಜ್ಞಾನಿಗಳ ಸಂಶೋಧನೆಯಲ್ಲಿ ಭಾರತದ ಗ್ರಾಮೀಣ ರಚನೆಯನ್ನು ಮುಖ್ಯ ವಿಷಯ ವಸ್ತುವನ್ನಾಗಿಸಿಕೊಂಡು ಅಧ್ಯಯನಗಳು ನಡೆದಿವೆ.

**ಕೃಷಿಕರ ಕುರಿತು ನಡೆದ ಅಧ್ಯಯನಗಳು**

ಸ್ವಾತಾಂತ್ರ್ಯ ನಂತರ ನಡೆದ ಸಮಾಜವಿಜ್ಞಾನಗಳ ಸಂಶೋಧನೆಯಲ್ಲಿ ಭೂಮಿ ಮತ್ತು ಕೃಷಿಕರ ಪ್ರಶ್ನೆಗಳು ಮಹತ್ವದ ಅಧ್ಯಯನ ಕ್ಷೇತ್ರಗಳಾದವು. ಅನೇಕ ಸಮಾಜ ವಿಜ್ಞಾನಿಗಳು ತಮ್ಮ ಕ್ಷೇತ್ರದಲ್ಲಿ ಮಹತ್ವದ ಕೊಡುಗೆಗಳನ್ನು ನೀಡಿದ್ದಾರೆ. ಅವರುಗಳೆಂದರೆ ರಾಧಾಕಮಲ್ ಮುಖರ್ಜಿ (೧೯೩೯-೪೧) ಎಸ್.ಜೆ.ಪಾಟೀಲ್ (೧೯೫೨) ಎ.ಆರ್.ದೇಸಾಯಿ (೧೯೫೮), ಎ.ಎಸ್.ಅಮೋಕರ್ (೧೯೬೯), ಎಂ.ಎಸ್.ದಂತವಾಲಾ (೧೯೬೧), ಧರ್ಮಕುಮಾರ್ (೧೯೬೫), ಅರವಿಂದ ಎನ್.ದಾಸ್ ಮತ್ತು ನೀಲಕಂಠ್ (೧೯೭೯), ಪಿ.ಸಿ.ಜೋಷಿ (೧೯೫೫) ಬಿತ್‌ಲಬ್‌ದಾಸ್ ಗುಪ್ತಾ (೧೯೭೭), ಜೆ.ಎನ್.ಸಿನ್ಹಾ (೧೯೭೩), ಬಿ.ಎಸ್.ಮಿನ್ಹಾಸ್ (೧೯೭೦), ಜಿ.ಪಾರ್ಥ್‌ಸಾರಥಿ (೧೯೭೨), ಎಸ್.ಸಿ.ದುಬೆ (೧೯೫೬), ಇವರುಗಳೊಂದಿಗೆ ಆಡಳಿತ ಕ್ಷೇತ್ರದಲ್ಲಿದ್ದ ಅಮೀರ್‌ರಾಜಾ (೧೯೪೮), ಪಿ.ಎಸ್.ಅತ್ತು (೧೯೭೧) ಇವರಲ್ಲದೆ ಡೇನಿಯಲ್ ಮತ್ತು ಆಲಿಸ್‌ಥಾರ್ನರ್ (೧೯೬೨), ಜಾನ್ ಬ್ರೆಮಿನ್ (೧೯೭೯), ಆಂಧ್ರಬೀತೆ (೧೯೨೪), ಜೆ.ಎಚ್.ಹಟ್ಟನ್(೧೯೪೬), ಗುನಾರ್ ಮಿರ್ಡಲ್ (೧೯೫೭), ಹೆನ್ರಿಮನ್ (೧೮೭೬) ಇವರು ನಡೆಸಿದ ಭಾರತದ ಕೃಷಿ ಅಧ್ಯಯನಗಳು ಮಹತ್ವದ ಕೊಡುಗೆಗಳಾಗಿವೆ.

ಇವುಗಳಲ್ಲದೆ ಅನೇಕ ಅಧ್ಯಯನಗಳನ್ನು "ಇಂಡಿಯನ್‌ಸೊಸೈಟಿ ಆಫ್ ಅಗ್ರಿಕಲ್ಚರಲ್" ಎಕಾನಾಮಿಕ್ಸ್ ನಡೆಸಿದೆ. ಆದರೆ ಈ ಸಂಸ್ಥೆಗಳ ಬಹುಪಾಲು ವಿದ್ವಾಂಸರು ಅರ್ಥಶಾಸ್ತ್ರದಲ್ಲಿ ತರಬೇತಿ ಹೊಂದಿದವರಾಗಿರುವುದರಿಂದ ಅವರ ಚಿಂತನೆಯ ಮಾರ್ಗವಿಧಾನಗಳು ಅರ್ಥಶಾಸ್ತ್ರದ ದೃಷ್ಟಿಕೋನವನ್ನೇ ಹೊಂದಿವೆ. ಹಾಗಾದರೂ ಮಾನವಶಾಸ್ತ್ರಜ್ಞರಾದ ಮುಜುಮ್‌ದಾರ್ ೧೯೬೧ ಮತ್ತು ಬೋಸ್ ೧೯೬೯ ಇವರ ಅಧ್ಯಯನಗಳಲ್ಲಿ ಭಾರತೀಯ ಪರಿಸ್ಥಿತಿಯ ಅಗತ್ಯಗಳಿಗೆ ಪುನಶ್ಚೇತನ ನೀಡುವ ಶಿಸ್ತನ್ನು ತರಲು ಪ್ರಯತ್ನಿಸಿದ್ದಾರೆ. ಐವತ್ತರ ದಶಕದ ನಂತರ ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರಜ್ಞರ ಜವಾಬ್ದಾರಿಯುತ ಅಧ್ಯಯನಗಳು ಗಣನೀಯವಾಗಿ ಉಲ್ಲೇಖಾರ್ಹವಾಗಿವೆ. ರಾಮಕೃಷ್ಣಮುಖರ್ಜಿ ೧೯೫೭ ಕ್ಯಥಲಿನ್ ಗಾಫ್ ೧೯೬೫-೭೦ ಸ್ಕಾರ್‌ವೆಟ್ ಎಸ್‌ಸ್ಟೀನ್ ೧೯೫೩-೭೫ ಟಿ.ಕೆ.ಊಮನ್ ೧೯೭೧ ಟಿ.ಆಂಧ್ರಬೀತೆ ೧೯೭೩ ಇವರ ಅಧ್ಯಯನಗಳು ಸಮಸ್ಯೆಗಳನ್ನು

ತಿಳಿಸಿಕೊಡುವಲ್ಲಿ ಮಹತ್ವದ ಪಾತ್ರವಹಿಸಿವೆ. ಭಾರತದ ಗ್ರಾಮೀಣ ಸಂರಚನೆಯನ್ನು ವಿಭಿನ್ನ ದೃಷ್ಟಿಕೋನಗಳಿಂದ ಸಂಶೋಧಕರು ಚರ್ಚಿಸಿ ವಿಭಿನ್ನ ರೀತಿಯಲ್ಲಿ ವಿಶ್ಲೇಷಿಸಿದ್ದಾರೆ. ಈ ಅಧ್ಯಯನಗಳು ಗ್ರಾಮೀಣ ಜನತೆಯ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ತುಂಬಾ ಸಹಾಯಕವಾಗಿವೆ.

ಗ್ರಾಮೀಣ ಆರ್ಥಿಕ ರಚನೆಯಲ್ಲಿ ಉದ್ಭವಿಸಿ ಅಸ್ತಿತ್ವದಲ್ಲಿರುವ ಕೆಲವು ವಿಧಾನಗಳನ್ನು ಅಂತರ್ಗತವಾಗಿರುವ ಅಂಶಗಳನ್ನು ವಿಶ್ಲೇಷಿಸಲು ಕೆಲವು ಗ್ರಾಮಗಳನ್ನು ಅಥವಾ ಸ್ಥಳೀಯ ಘಟಕಗಳನ್ನು ಆಯ್ಕೆ ಮಾಡಿಕೊಂಡು ಅನೇಕ ವಿದ್ವಾಂಸರು ಸಂಶೋಧನೆ ಮಾಡಿದ್ದಾರೆ. ಅಲ್ಲದೆ ಕೆಲವು ಅಧಿಕಾರಿಗಳು ಅರೆಸರ್ಕಾರಿ ಸಂಸ್ಥೆಗಳಾದ "ಭಾರತ ರಿಜಿಸ್ಟ್ರಾರ್ ಜನರಲ್, ಪಾಂಡೆ ಸಮಿತಿ, ರಾಷ್ಟ್ರೀಯ ನಮೂನೆ ಸರ್ವೇಕ್ಷಣೆ, ಭಾರತ ರಿಜರ್ವ್‌ಬ್ಯಾಂಕ್‌ನ ಅಖಿಲ ಭಾರತೀಯ ಸಾಲ ಮತ್ತು ನಿಯೋಜಕ ಸರ್ವೇಕ್ಷಣಾ ಸಂಸ್ಥೆ ಮೊದಲಾದವು ಗ್ರಾಮೀಣ ಸಮಾಜದ ವಿಶ್ಲೇಷಣೆಯನ್ನು ಮಾಡಿವೆ."[೮] ಕಳೆದ ಒಂದೂವರೆ ದಶಕಗಳಿಂದ ನಿರ್ಣಾಯಕ ನಿಷ್ಠೆಯಲ್ಲಿ ಭಾರತದ ಕೃಷಿಕರ ಜೀವನದ ಬಗ್ಗೆ ಗಣನೀಯವಾದ ರೀತಿಯಲ್ಲಿ ಸಂಶೋಧನೆಗಳು ನಡೆದಿವೆ. ದೇಶದ ವಿವಿಧ ಭಾಗಗಳಲ್ಲಿ ಅನುಷ್ಠಾನಕ್ಕೆ ಬಂದ ಹಲವು ನೀರಾವರಿ ಯೋಜನೆಗಳು ಅವುಗಳಲ್ಲಿ ಕರ್ನಾಟಕದ ಕಾವೇರಿ, ಭದ್ರ, ತುಂಗಭದ್ರಾ, ಕಬಿನಿ, ಹಾರಂಗಿ, ಹೇಮಾವತಿ, ಘಟಪ್ರಭಾ, ಮಲಪ್ರಭಾ, ಕೃಷ್ಣ ಮೇಲ್ದಂಡೆ ಯೋಜನೆ ಮುಂತಾದವು. ಗ್ರಾಮೀಣ ರಚನೆಯಲ್ಲಿ ಭೂಮಾಲೀಕರ ಮತ್ತು ಗೇಣಿದಾರರ ಸಂಬಂಧಗಳಲ್ಲಿ ಗುರುತರವಾದ ಬದಲಾವಣೆಗಳನ್ನು ತಂದಿದೆ. ಪ್ರಸ್ತುತ ಅಧ್ಯಯನದಲ್ಲಿ ಅಂತಹ ಪ್ರಭಾವವನ್ನು ಗುರುತಿಸಬಹುದಾಗಿದೆ.

**ಸಂಶೋಧನಾ ವಿಧಾನಗಳು**

ಸಂಶೋಧನಾ ವಿಧಾನ: ಪ್ರಸ್ತುತ ಸಂಶೋಧನಾ ವಿನ್ಯಾಸವು, ಆಧಾರ ಕಲ್ಪನೆಯು, ವ್ಯವಕಲನ ಮತ್ತು ವಿವರಣಾತ್ಮಕ ವರ್ಗಕ್ಕೆ ಸೇರಿದ ಅಧ್ಯಯನವಾಗಿದೆ. ಅವುಗಳಲ್ಲಿ ನಿರ್ಧಿಷ್ಠ ಸಂದರ್ಭಗಳನ್ನು, ವ್ಯಕ್ತಿಗಳನ್ನು, ಸಮೂಹಗಳನ್ನು ಸಂಕ್ಷಿಪ್ತವಾಗಿ ವಿಶ್ಲೇಶಿಸುವ ಉದ್ದೇಶ ಹೊಂದಿದ್ದು ಜೊತೆಗೆ ನಿರ್ಧಿಷ್ಠ ಉದ್ದೇಶಗಳ ಸಹಾಯದಿಂದ ಘಟಿಸುವ ಮತ್ತು ಸಹಾಯವಿಲ್ಲದೆ ಘಟಿಸುವ ಅಂಶಗಳನ್ನು ಅಭ್ಯಸಿಸುವುದಾಗಿದೆ.

"ದೀವರ ಸಮುದಾಯದ ಕೃಷಿ ಆಚರಣೆಗಳು" ಎಂಬ ವಿಷಯವನ್ನು ಸಂಪ್ರಬಂಧ ರೂಪದಲ್ಲಿ ಮಂಡಿಸಲು ಈ ಕೆಳಗಿನ ಸಂಶೋಧನಾ ವಿಧಾನವನ್ನು ಅಳವಡಿಸಿಕೊಂಡಿದ್ದೇನೆ.

**ಪ್ರಶ್ನಾವಳಿ ವಿಧಾನ**

ಈ ಅಧ್ಯಯನಕ್ಕೆ ಸಂಬಂಧಿಸದಂತೆ ಸೂಕ್ತವಾದ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿದ್ದೇನೆ.

**ದತ್ತಾಂಶ ಸಂಗ್ರಹಣಾ ವಿಧಾನ**

ಸಂಗ್ರಹಿಸಿದ ಮಾಹಿತಿಗಳನ್ನು ಪ್ರಸ್ತುತಪಡಿಸುವ ವಿಧಾನವು ಸಂಶೋಧನೆಯಲ್ಲಿ ಮಹತ್ವದಾಗಿದ್ದು, ಉತ್ತಮ ಗುಣಮಟ್ಟ ಹೊಂದಿರುವುದನ್ನು, ಸಂಶೋಧನೆಯಲ್ಲಿ ಖಚಿತಪಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಗ್ರಾಮಗಳ ಹಂತದಲ್ಲಿ, ಪ್ರತಿಗ್ರಾಮದಿಂದ ಸುಮಾರು ಆರು ಜನರಂತೆ ಕೃಷಿ ಕುಟುಂಬಗಳನ್ನು ಆಯ್ಕೆ ಮಾಡಲಾಗಿದ್ದು,

ಆಯ್ಕೆ ಮಾಡಿದ ಗ್ರಾಮಕ್ಕೆ ಹೋಗಿ ಪ್ರತಿ ಕುಟುಂಬವನ್ನು ಖುದ್ದಾಗಿ ಕಂಡು, ಮಾತನಾಡಿ, ಕೃಷಿಕರ ಕುಟುಂಬದ ಸದಸ್ಯರನ್ನು ಸಂದರ್ಶಿಸುವ ಮೂಲಕ ಮಾಹಿತಿಯ ದತ್ತಾಂಶಗಳನ್ನು ಸಂಗ್ರಹಿಸಲಾಗಿದೆ. ಜೊತೆಗೆ ಸರಕಾರಿ ಕಛೇರಿಗಳನ್ನು, ಸಂಘಸಂಸ್ಥೆಗಳನ್ನು, ವೃತ್ತಪತ್ರಿಕೆಗಳನ್ನು ಹಾಗೂ ನಿಯತಕಾಲಿಕೆಗಳನ್ನು ಸಂಶೋಧನೆಗೆ ಬಳಸಿಕೊಂಡಿದ್ದೇನೆ. ಈ ರೀತಿ ಸಂಗ್ರಹಿಸಿದ ಮಾಹಿತಿಯನ್ನು ಪರಾಮರ್ಶಿಸಿ ವಿಶ್ಲೇಷಣೆಗೊಳಪಡಿಸಿದ್ದೇನೆ.

**ಸಂದರ್ಶನ ವಿಧಾನ**

ಈ ಸಂಶೋಧನಾ ಅಧ್ಯಯನ ಕೃಷಿಗೆ ಸಂಬಂಧಪಟ್ಟ ವಿಷಯವಾಗಿರುವುದರಿಂದ ದೀವರ ಕೃಷಿಕರಲ್ಲಿ ಸಂದರ್ಶನದ ಮೂಲಕ ಮಾಹಿತಿ ಪಡೆಯಲಾಗಿದೆ.

**ಅಧ್ಯಯನದ ಸಂಶೋಧನಾ ಸಾಧನಗಳು** ಮಾಹಿತಿ ಸಂಗ್ರಹಿಸಲು ಕ್ಯಾಮರಾ ಮತ್ತು ಟೇಪ್‌ರಿಕಾರ್ಡ್ ಬಳಸಿಕೊಂಡು ವಿಷಯವನ್ನು ಸಂಗ್ರಹಿಸಲಾಗಿದೆ.

**ಸಮಕಾಲೀನ ಸಮಸ್ಯಗಳಿಗೆ ಪ್ರಸ್ತುತ ಅಧ್ಯಯನದ ಸಂಬಂಧ**

ಕೃಷಿಗೆ ಸಂಬಂಧಿಸಿದ ಸಂಶೋಧನೆಗಳಲ್ಲಿ ಇಂದು ಪಾರಂಪರಿಕ ಕೃಷಿಗೆ ಹೆಚ್ಚಿನ ಮಹತ್ವ ನೀಡುತ್ತಾ ಬಂದಿದ್ದು, ದೀವರು ತಮ್ಮ ಕೃಷಿ ನೀತಿಯಲ್ಲಿ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ದೀವರ ಈ ಕೃಷಿ ಮಾದರಿ ಉಳಿದ ಕೃಷಿ ಸಮುದಾಯಕ್ಕೆ ಮಾರ್ಗದರ್ಶಿಯಾಗಬಲ್ಲದು ಎಂಬುದು ಈ ಅದ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ಉದ್ದೇಶಗಳು**

೧. ದೀವರು ಮತ್ತು ಭೂಮಿಯ ನಡುವಿನ ಅವಿನಾಭಾವ ಸಂಬಂಧದ ವಿಶ್ಲೆಷಣೆ.

೨. ದೀವರು ಮತ್ತು ಮಳೆಯ ಆಚರಣೆಗಳ ವಿಶ್ಲೇಷಣೆ.

೩. ಕೃಷಿಯೊಂದಿಗೆ ದೀವರ ಸಂಬಂಧವನ್ನು ವಿಶ್ಲೇಷಿಸುವುದಾಗಿದೆ.

೪. ದೀವರು ಮತ್ತು ಪಶುಪಾಲನೆಯ ಸಂಬಂಧದ ವಿಶ್ಲೇಷಣೆ.

೫. ದೀವರಲ್ಲಿಯ ಸುಗ್ಗಿಯ ಸಂಪ್ರದಾಯಗಳ ಆಚರಣೆ.

೬. ಕೃಷಿಉತ್ಪನ್ನಗಳ ಮಾರಾಟ ವ್ಯವಸ್ಥೆಯ ವಿಶ್ಲೇಷಣೆ.

**ಅಧ್ಯಯನ ದ ವ್ಯಾಪ್ತಿ**

ಈ ಸಂಶೋಧನಾ ಅಧ್ಯಯನವು ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ತಾಲೂಕುಗಳಿಗೆ ಸೀಮಿತವಾಗಿದೆ. ಈ ಪ್ರದೇಶಗಳಲ್ಲಿ ಮಳೆಯಾಧಾರಿತ ಕೃಷಿ ವ್ಯವಸ್ಥೆ ಇದ್ದು, ಹಾಗೆಯೇ ಕಡಿಮೆ ನೀರಾವರಿ ಸೌಲಭ್ಯವನ್ನು ಹೊಂದಿದೆ. ಶಿವಮೊಗ್ಗ ಜಿಲ್ಲೆಯು ಐತಿಹಾಸಿಕವಾಗಿ ಹಲವಾರು ಸಾಮಾಜಿಕ ಮತ್ತು ರಾಜಕೀಯ ಚಳುವಳಿಗಳ ಹಿನ್ನೆಲೆಯನ್ನು ಹೊಂದಿದೆ. ಉದಾಹರಣೆಗೆ ರಾಜ್ಯದ ಸಮಾಜವಾದಿ ಚಳುವಳಿಯ ಬೇರುಗಳು ಈ ಜಿಲ್ಲೆಯಲ್ಲಿವೆ. ರೈತ ಚಳುವಳಿಯನ್ನು ಕಾಗೋಡ್ ಸತ್ಯಾಗ್ರಹ ಮತ್ತು ಸ್ವಾತಂತ್ರ್ಯ ಹೋರಾಟದ ಈಸೂರು ಚಳುವಳಿಯನ್ನು ಇಲ್ಲಿ ಉಲ್ಲೇಖಿಸಬಹುದು. ಈ ಜಿಲ್ಲೆಯ ಅನೇಕ ರಾಜಕೀಯ ಮುಖಂಡರು ತಮ್ಮ ನಾಯಕತ್ವದ ಗುಣಗಳಿಂದಲೇ

ಖ್ಯಾತರಾಗಿದ್ದಾರೆ. ಈವರೆಗೆ ಈ ಜಿಲ್ಲೆ ಮೂವರು ಮುಖ್ಯಮಂತ್ರಿಗಳನ್ನು ನೀಡಿದೆ. ಪ್ರಾಸಂಗಿಕವಾಗಿ ಈ ಜಿಲ್ಲೆಯ ರಾಜ್ಯದ ರೈತ ಚಳುವಳಿಯ ಮುಂಚೂಣಿಯಲ್ಲಿದೆ.

**ಅಡಿಟಿಪ್ಪಣಿಗಳು**

೧. ಡಿ. ಮೆಮೋರಿಯಾ., ಅಗ್ರಿಕಲ್ಚರಲ್ ಪ್ರಾಬಲಮ್ಸ್ ಆಫ್ ಇಂಡಿಯಾ. ಪು.೩೯೩

೨. ನಾಗೇಶ್ ಹೆಚ್.ವಿ., (೧೯೮೬), ಭಾರತೀಯ ಗ್ರಾಮ, ಪು.೧೮

೩. ವೆಂಕಟರಾವ್ ಡಿ., (೧೯೮೫), ಕೃಷಿಬೆಳವಣಿಗೆ, ಪು. ೩೬

೪. ಅಶೋಕ್ ಕುಮಾರ್ ಯು.ಬಿ., (೨೦೦೧),ಕೃಷಿ ಕೂಲಿಕಾರರ ಬದುಕು ಬವಣೆ, ಪು. ೭

೫. ಶಂಕರ್‌ರಾವ್ ಚ.ನಾ., (೨೦೦೧), ಸಮಾಜ ಶಾಸ್ತ್ರ ಪರಿಚಯ, ಪು. ೮೭

೬. ಮರುಳಸಿದ್ದಯ್ಯ ಎಚ್.ಎಂ., (೧೯೯೩), ಗ್ರಾಮೋನ್ನತಿ, ಪು. ೪

೭. ಡಿ. ಮೆಮೋರಿಯಾ., ಅಗ್ರಿಕಲ್ಚರಲ್ ಪ್ರಾಬಲಮ್ಸ್ ಆಫ್ ಇಂಡಿಯಾ. ಪು. ೭೮

## ದೀವರ ಮೂಲ

ದೀವರು, ದೀವರ ಮಕ್ಕಳು, ಹಳೆಪೈಕದವರು, ನಾಮಧಾರಿಗಳು ಇವು 'ಈಡಿಗ' ಜನಾಂಗದ ಉಪಜಾತಿಗಳು. ಈ ಜನವರ್ಗ ಹೆಚ್ಚಾಗಿ ಮಲೆನಾಡು ಪ್ರದೇಶದಲ್ಲಿ ನೆಲೆಸಿದ್ದು, ಇವರ ಮೂಲ, ಇತಿಹಾಸ, ಆಚಾರ ವಿಚಾರಗಳ ಬಗ್ಗೆ ವೇದ ಉಪನಿಷತ್ ಹಾಗೂ ಪುರಾಣಗಳಲ್ಲಿ ಇರುವ ದಾಖಲೆಗಳನ್ನು ಆಧರಿಸಿ ಮೂಲದ ಬಗ್ಗೆ ಪ್ರಸ್ತಾಪಿಸಲಾಗಿದೆ.

ಸಮಾಜ ಎಂದರೆ 'ಸಮಷ್ಠಿ'. ಅದರ ಅಂಗವಾದ ವ್ಯಕ್ತಿಯು 'ವ್ಯಷ್ಠಿ' ಮತ ಎಂಬ ಪದವು 'ಮನ್' ಎಂಬ ಧಾತುವಿನಿಂದ ಹುಟ್ಟಿದೆ. ಮನ್ ನುನಸ್ಸು ಮನಸ್ಸಿನಿಂದ 'ಮತ' ಹುಟ್ಟುವುದು. ಮತ ಎಂದರೆ 'ಶ್ರದ್ಧೆ' ವಿಶ್ವಾಸವೆಂದರೆ ಒಂದು ನಂಬಿಕೆಯ ಅನುಸರಣೆ. ವರ್ಣಾಶ್ರಮ ಧರ್ಮಗಳನ್ನು ಪಾಲಿಸಿಕೊಂಡು ಬರಲು 'ರಾಜಾ ಕಾಲಸ್ಯ ಕಾರಣಂ' ಎಂಬ ಧರ್ಮಸೂಕ್ತಿಯನ್ನು ಅನುಸರಿಸಿ ರಾಜನು ಧರ್ಮದ ರಕ್ಷಕ, ಸಾಮಾಜಿಕ ವ್ಯವಸ್ಥೆಯ ಪರಿಪಾಲಕನಾಗಿದ್ದು, ದಕ್ಷಿಣ ಭಾರತದಲ್ಲಿನ ೧೮ ಕುಲಗಳ ವ್ಯಾಪ್ತಿಯಲ್ಲಿ ಕರ್ನಾಟಕದಲ್ಲಿ ಬರುವ ದೀವರನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಪ್ರಾದೇಶಿಕವಾಗಿ ಕರೆಯಲ್ಪಡುತ್ತಿದ್ದ, ಮಲೆನಾಡಿನ ದೀವರು, ಕರಾವಳಿಯ ಬಿಲ್ಲವ, ಉತ್ತರ ಕನ್ನಡದ ನಾಮಧಾರಿ, ಬಯಲುನಾಡಿನ ಈಡಿಗ, ಈ ಎಲ್ಲ ಹೆಸರಿನ ಸಮಾಜದ ಪ್ರಮುಖ ವ್ಯಕ್ತಿಗಳು ಒಗ್ಗೂಡಿ ೧೯೫೮ರಲ್ಲಿ ಬೆಂಗಳೂರು, ಹಾಗೂ ೧೯೬೧ ರಲ್ಲಿ ಮೈಸೂರಿನಲ್ಲಿ ಮಹಾಸಮ್ಮೇಳನಗಳು 'ಆರ್ಯ ಈಡಿಗ' ಎಂಬ ಹೆಸರಲ್ಲಿ ಒಗ್ಗೂಡಿದವು. ಈಡಿಗ, ಈಳವ, ಈಳೀಗರ್, ಬಿಲ್ಲವ, ಪೂಜಾರಿ, ನಾಮದಾರಿ, ನಾಡಾರ್, ತಿಯಾನ್, ದೇವರ ಮಕ್ಕಳು, ಕಲಾಲ್, ಗೌಂಡ್ಲ ಮತ್ತು ದೀವರು ಈ ಎಲ್ಲ ಪ್ರಭೇದಗಳು ಆರ್ಯ ಈಡಿಗ ಎಂಬ ಹೆಸರಿನಲ್ಲಿ ಸಂಘಟನೆಗೊಂಡ ಸಂಗತಿ ಸ್ಮರಣೀಯವಾದದ್ದು. ಶಿವಮೊಗ್ಗ ಜಿಲ್ಲೆಯಲ್ಲಿನ ಮಲೆನಾಡಿನ ದೀವರು ಮೂಲತಃ ಕೃಷಿಕರಾಗಿದ್ದು, ಕೃಷಿಯೆ ಇವರ ಬದುಕಿನ ನೆಲೆಯಾಗಿ ಪ್ರಸ್ತಾಪಿಸಲ್ಪಡುತ್ತದೆ.

ಭಾರತ ಏಷ್ಯಾಖಂಡದಲ್ಲಿ ದಕ್ಷಿಣಕ್ಕೆ ಭೂಮಧ್ಯ ರೇಖೆಯ ಮೇಲೆ ಇರುವ ಒಂದು ಪರ್ಯಾಯ ದ್ವೀಪ. ಭಾರತ ಖಂಡದಲ್ಲಿಯೇ ಹುಟ್ಟಿ ಬೆಳೆದ ಜನಾಂಗವನ್ನು ಆದಿದ್ರಾವಿಡ ಜನರೆಂದೂ, ಈ ಉಪಖಂಡಕ್ಕೆ ವಿವಿಧ ಕಡೆಗಳಿಂದ ವಲಸೆ ಬಂದು ಉತ್ತರದಲ್ಲಿ ನೆಲೆಸಿದ್ದ ಜನಾಂಗವನ್ನು ಆರ್ಯರೆಂದು ಗುರುತಿಸಲಾಗಿದೆ. ಈ ಉಪಖಂಡದಲ್ಲಿನ ಜನಾಂಗ ಮತ್ತು ವಿವಿಧ ಪ್ರದೇಶಗಳಿಂದ ಬಂದ ಜನಾಂಗಗಳು, ಪರಸ್ಪರ ಸಂಕರಗೊಂಡು ಬೇರೆ ಬೇರೆ ಜನಾಂಗೀಯ ಪ್ರಬೇಧಗಳು ಹುಟ್ಟಿಕೊಂಡವು. ಹೀಗೆ ಪ್ರವೇಶಿಸಿದ ಆದಿಯ

ಜನಾಂಗಗಳ ಮೂಲಗಳಲ್ಲಿ ಮೊದಲನೆಯದು ನೀಗ್ರಿಟೋ ಅಥವಾ ಪ್ರೊಟೋ ನಿಗ್ರೀಟೋ. ಅನಂತರ ಕ್ರಮವಾಗಿ ಅಸ್ಟ್ರಲೈಡ್ (ಔಷ್ಟ್ರೇಯು) ಮತ್ತು ಕಾಕೋ ಸಾಯಿಡ್ ಜನಾಂಗಗಳು ಜನಾಂಗೀಯ ಅಂಶಗಳ ಸಮ್ಮಿಶ್ರ ಹೊಂದಿದ ದೀವರು ಈ ಜನಾಂಗೀಯ ಪ್ರಭೇದಕ್ಕೆ ಸೇರಿದವರಾಗಿದ್ದು, ಉತ್ತರದಿಂದ ದಕ್ಷಿಣಕ್ಕೆ ವಲಸೆ ಬಂದವರಾಗಿರುತ್ತಾರೆ. ಕರ್ನಾಟಕದಲ್ಲಿ ತಮ್ಮದೇಯಾದ ಧರ್ಮ ಹಾಗೂ ಸಂಸ್ಕೃತಿ, ನಡೆ ನುಡಿಗಳನ್ನು ಹೊಂದಿ ಇತರರಂತೆ ನಾಡಿಗೆ ಅಮೋಘ ಸೇವೆಯನ್ನು ಸಲ್ಲಿಸಿರುತ್ತಾರೆ.

ಶಿವಮೊಗ್ಗ ಜಿಲ್ಲೆಯಲ್ಲಿ ಸಹ್ಯಾದ್ರಿ ಜಿಲ್ಲೆಗಳ ತಪ್ಪಲು ಮತ್ತು ಮಲೆನಾಡು ಪ್ರದೇಶಗಳಲ್ಲಿ ವಾಸಿಸುವ ಮತ್ತು ಕನ್ನಡವನ್ನೇ ಮಾತನಾಡುವ ಒಂದು ಜನಾಂಗವಾಗಿರುತ್ತದೆ. ತನ್ನದೇ ಆದ ಧರ್ಮ ಸಂಸ್ಕೃತಿ ಮತ್ತು ಆಚರಣೆಯನ್ನು ಹೊಂದಿದ್ದು, ಹೆಚ್ಚಾಗಿ ಅರಣ್ಯ ಪ್ರದೇಶಗಳಲ್ಲಿ ವಾಸಿಸಲು ಇಷ್ಟಪಡುವ ಕೃಷಿಯನ್ನು ಜೀವನೋಪಾಯಕ್ಕೆ ಅವಲಂಬಿಸಿದ ಜನಾಂಗವಾಗಿರುತ್ತಾರೆ. ಇವರಿಗೆ ದೀವರು, ದೀವನಾಯಕರು ಅಥವಾ ಹಳೆಪೈಕ ಎಂದು ಕರೆಯುತ್ತಾರೆ. ಇವರು ವೈದಿಕ ಮತಾಚರಣೆ ಹೊಂದಿದವರು. ಸಮಾಜದ ಚಾತುರ್ವರ್ಣದಲ್ಲಿ ಶೂದ್ರ ಗುಂಪಿಗೆ ಸೇರಿದವರಾಗಿರುತ್ತಾರೆ.

### ದೀವರ ಹೆಸರಿನ ಮೂಲ

ದೀವರು ವ್ಯಾಸ ಮಹರ್ಷಿಯ ಮೂಲದವರೆಂಬ ನಂಬಿಕೆ ಇದೆ. ಇದಕ್ಕೆ ಒಂದು ಐತಿಹ್ಯವನ್ನು ಕೊಡುತ್ತಾರೆ. 'ಅಣ್ಣ ಹೊಳೆದಾಟಿ ಬ್ರಾಹ್ಮಣನಾದ ತಮ್ಮ ಅಲ್ಲಿಯೆ ಉಳಿದು ದೀವನಾದ.' ಅಂದರೆ ವ್ಯಾಸ ಮಹರ್ಷಿಗೆ ದ್ವೈಪಾಯನ, ಕೃಷ್ಣ ದ್ವೈಪಾಯನ ಎಂದು ಕರೆಯುತ್ತಾರೆ.

ವ್ಯಾಸಮಹರ್ಷಿಗಳು ಸತ್ಯವತಿ ಅಥವಾ ಮತ್ಸಗಾಂಧಿ ಎಂಬ ಹೆಸರಿನ ಜಲಗಾರ ಕನ್ಯೆಯಲ್ಲಿ ಪರಾಶರ ಮುನಿಗಳಿಂದ ಜನ್ಮಪಡೆದವರು. ಕಥೆ ಹೀಗಿದೆ, ಸತ್ಯವತಿಯ ತಂದೆಯು ಧರ್ಮಾತ್ಮನೂ ಸತ್ಯ ಪ್ರಿಯನೂ, ಆಗಿದ್ದು ಯಮುನಾ ನದಿಯಲ್ಲಿ ದೋಣಿ ಆಡಿಸುತ್ತಿದ್ದ ಒಬ್ಬ ಜಲಗಾರ. ಅವನಿಗೆ ವೇಳೆ ಇಲ್ಲದಿದ್ದಾಗ ಸತ್ಯವತಿ ದೋಣಿ ನಡೆಸುತ್ತಿದ್ದಳು. ಒಂದು ದಿನ ವಶಿಷ್ಠರ ಮೊಮ್ಮಗ ಶಕ್ತಿಮುನಿಗಳ ಮಗ, ಪರಾಶರ ಮುನಿಗಳು ನದಿ ದಾಟಲು ಬಂದು ದೋಣಿ ನದಿಯ ಮಧ್ಯಭಾಗ ಸೇರಿದಾಗ ಯೌವನ ಶೋಭೆಯಾದ ಸತ್ಯವತಿಯಿಂದ ಆಕರ್ಷಿತರಾಗಿ ಅವಳ ಸಮಾಗಮವನ್ನು ಅಪೇಕ್ಷಿಸಿದರು. ಯಮುನೆಯ ನಡುವೆ ಒಂದು ದ್ವೀಪವನ್ನು ಸೃಷ್ಟಿಸಿ ಮಂಜು ಕವಿದಂತೆ ಮಾಡಿ ತಮ್ಮ ಆಶೆಯನ್ನು ಪೂರೈಸಿಕೊಂಡರು. ಸತ್ಯವತಿಯ ಅಮೋಘವಾದ ವರವನ್ನು ಪಡೆದಳು. ಅವಳ ಮೈ ಮೀನಿನ ವಾಸನೆ ಹೋಗಿ ಸುಗಂಧ ವಾಸನೆ ಬಂದಿದ್ದು ಸುಗಂಧಿನಿಯಾದಳು. ನವಮಾಸ ಗರ್ಭಾಧಾರಣೆ ಇಲ್ಲದೆ ಅದೇ ಕಾಲದಲ್ಲಿ ತೇಜಪುಂಜ ಪೂರ್ಣನಾದ ಮಗ ಹುಟ್ಟಿದ. ನದಿಯ ಮದ್ಯದಲ್ಲಿ ಹುಟ್ಟಿದ್ದರಿಂದ ದ್ವೈಪಾಯನನೆಂದು, ಕಪ್ಪಗಿದ್ದುದರಿಂದ ಕೃಷ್ಣದ್ವೈಪಾಯನನೆಂದೂ ಕರೆಯಲ್ಪಟ್ಟು, ಆಪತ್ಕಾಲದಲ್ಲಿ ಕರೆದಾಗ ಬರುವೆನೆಂದು ತಾಯಿಗೆ ವಚನ ಕೊಟ್ಟು ವಿದ್ಯಾರ್ಜನೆಗೆ ತಂದೆಯೊಡನೆ ತೆರಳಿದ. ವೇದಗಳನ್ನು ಋಜು ಸ್ವಾಮಾರ್ಥರ್ವರ್ಣಗಳಿಂದ ೪ ವಿಭಾಗಗಳಾಗಿ ವಿಂಗಡಿಸಿದುದರಿಂದ ವ್ಯಾಸನೆಂದು ಮಹರ್ಷಿಗಳು ಕರೆದರು. ವ್ಯಾಸರಿಗೆ ಬಾದಾರಾಯಣನೆಂದು ಹೆಸರು

ಇರುವುದು ಐತಿಹ್ಯಗಳಿಂದ ತಿಳಿದುಬರುತ್ತದೆ. ಈ ದ್ವೈಪಾಯನ ಎಂಬುದು ದ್ವೈಪಾಯನರು 'ದೀವರು' ಎಂಬುದಾಗಿ ರೂಪಾಂತರವಾಗಿದೆ.

**ಅರ್ಥ**

ದೀವರು ಎಂಬ ಶಬ್ದಕ್ಕೆ ಈ ಕೆಳಗಿನ ಅರ್ಥವಿರುತ್ತದೆ.

ದೀವ = ಹಗಲು, ಸ್ವರ್ಗ, ಆಕಾಶ

ದೀವ = ದೀಪ, ಜ್ಯೋತಿ

ದೀವರ್ = ಪ್ರಕಾಶಿಶು, ಜ್ಞಾನಿ, ಬೆಳಕನ್ನು ಕೊಡು

ಬೆಳಗುವವನು, ವೀರ ಶೂರ, ಧೀರ

ದೀವರ್ = ದ್ವೀಪ, ದೀಪಕ, ದ್ವೀಪ

ಧೀ = ಜ್ಞಾನ, ಪಾಂಡಿತ್ಯ, ಬುದ್ಧಿಶಾಲಿ, ಪಂಡಿತ, ವಿದ್ವಾಂಸ

ಧೀವರ್ = ಜಾಣ, ಶೌರ್ಯಶಾಲಿ, ಬಲಸಾಲಿ, ಪರಾಕ್ರಮ, ಮೀನು ಹಿಡಿಯುವವನು

**ಮಲೆನಾಡು**

ಸಮುದ್ರ ತೀರದಿಂದ ೧೫೦೦ ರಿಂದ ೧೮೦೦, ಮೀಟರ್ ಉತ್ತರ ಪ್ರದೇಶದಲ್ಲಿರುವ ಮಲೆನಾಡು ಸಾಮಾನ್ಯವಾಗಿ ಘಟ್ಟದೊಡನೆ ಮೇಲು ಸೇತುವೆಯಾಗಿದೆ. ಇಲ್ಲಿನ ಕಣಿವೆಗಳು ३೦ ರಿಂದ ४೦ ಕಿ.ಮೀ. ಅಗಲವಾಗಿವೆ. ನೀಲಗಿರಿ ಪರ್ವತ ಶ್ರೇಣಿಯಿಂದ ಒಂದು ಶ್ರೇಣಿಯು ಎತ್ತರಕ್ಕೆ ಕೊಡಗಿನ ಮಾರ್ಗವಾಗಿ ಶಿಕಾರಿಪುರ ಆಚೆಗೆ ಚಾಚಿಕೊಂಡಿದೆ. ಇದು ವಾಯ್ಯುವೋತ್ತರದಿಂದ ದಕ್ಷಿಣ ಆಗ್ನೆಯದವರಿಗೆ ಅಖಂಡ ಪಟ್ಟಿಯಂತಿರುವ ಪ್ರದೇಶ ಎರಡು ಕಿ.ಮೀ. ನಿಂದ ಕೆಲವೊಮ್ಮೆ ೧೦೦, ಕಿ.ಮೀ. ವರೆಗೂ ಕೂಡಾ ಸಾಗುತ್ತದೆ. ದಕ್ಷಿಣ ಭಾಗ ३೭೦ರಿಂದ ೮೫೦ ಮೀಟರಿನಷ್ಟು ಎತ್ತರವನ್ನು ಪಡೆದುಕೊಳ್ಳುತ್ತಾ ಪಶ್ಚಿಮದತ್ತ ಸಾಗಿದೆ. ಇದು ಇನ್ನಷ್ಟು ವಿಸ್ತರಿಸುತ್ತಾ ಬಾಬಾಬುಡನ್‌ಗಿರಿಯ ಶ್ರೇಣಿಯಲ್ಲಿ ೧३೦ ರಿಂದ ೧೮೯೦ ಮೀಟರ್ ವ್ಯತ್ಯಾಸಗಳವರೆಗೆ ಸಾಗುತ್ತದೆ. ಮಲೆನಾಡಿನ ಪ್ರಮುಖ ಪ್ರಾಕೃತಿಕ ಲಕ್ಷಣವೆಂದರೆ ಉತ್ತರದ ಭಾಗಗಳು ४೫೦ ರಿಂದ ೬೫೦ ಮೀಟರ್ ಎತ್ತರವಾಗಿದ್ದರೆ, ದಕ್ಷಿಣ ಭಾಗವು ತುಲನಾತ್ಮಕವಾಗಿ ೯೦೦ ರಿಂದ ೧೫೦೦ ಮೀಟರ್ ಲಂಬವಾಗಿದೆ. ಆದ್ದರಿಂದಲೇ ಇಲ್ಲಿನ ಶಿಖರಗಳು ಇಳುಕಲ್ಲಾಗಿವೆ. ಜ್ವಾಲಾಮುಖಿ ಪ್ರವಾಹಗಳ ಮೇಲೆ ಜಲಜ ಶಿಲೆಗಳುಳ್ಳ ಪದರು ಶಿಲೆ ಚಿತ್ರದುರ್ಗ ಮಾರ್ಗವೆಂದು ಕರೆಯಲ್ಪಡುತ್ತದೆ. ಹೆಚ್ಚಾಗಿ ಕಬ್ಬಿಣ ಮತ್ತು ಅಲ್ಯುಮಿನಿಯಂ ಹೈಡ್ರೇಟುಗಳಿಂದ ಮಾಡಲ್ಪಟ್ಟ ಲ್ಯಾಟರೈಟ್ ಎಂದು ಕರೆಯಲ್ಪಡುವ ಜಂಬಿಟ್ಟಿಗಿಯ ತಳಹೊದಿಕೆಯನ್ನು ತೀರ್ಥಹಳ್ಳಿ, ಶಿಕಾರಿಪುರ, ಸೊರಬ, ಸಾಗರ ತಾಲ್ಲೂಕುಗಳಲ್ಲಿ ಕಾಣಬಹುದು.

ನೈಋತ್ಯ ಮಾರುತಗಳಿಗೆ ಅಡ್ಡಲಾಗಿ ದಕ್ಷಿಣೋತ್ತರವಾಗಿ ಹಬ್ಬಿಕೊಂಡಿರುವ ಪಶ್ಚಿಮ ಘಟ್ಟಗಳು ಮಲೆನಾಡಿನಲ್ಲಿ ಬಾರಿ ಮಳೆಗೆ ಕಾರಣವಾಗಿವೆ. ಜುಲೈ ತಿಂಗಳಲ್ಲಿ ಮಳೆ ಹೆಚ್ಚಾಗಿದ್ದು, ಪಶ್ಚಿಮದಲ್ಲಿ ೨೫೦೦ ಮಿ.ಮೀ.ನಷ್ಟು ಮಳೆಯಾದರೆ ಪೂರ್ವದಲ್ಲಿ ೧,೦೦೦ ಮಿ.ಮೀ. ಮಳೆಯಾಗುವ ಪ್ರದೇಶಗಳಿವೆ.

ಜೂನ್ ತಿಂಗಳಿಂದ ಆಗಸ್ಟ್ ತಿಂಗಳ ಕೊನೆಯವರೆಗೆ ಕಾರ್ಮೋಡಗಳು ದಟ್ಟೈಸಿ ಗುಡುಗು ಮಿಂಚುಗಳ ಅಬ್ಬರದಿಂದ ಕೂಡಿದ ಧಾರಾಕಾರದ ಮಳೆಯನ್ನು ಕಾಣುತ್ತೇವೆ. ಅನಂತರ ಮಳೆ ಕಡಿಮೆಯಾಗುತ್ತಾ

ಹೋಗುತ್ತದೆ. ಪಂಚಮಿಯ ಸಂದರ್ಭದಲ್ಲಿ ಜಿಟಿಜಿಟಿಯನ್ನುವಂತಹ ಜಿನುಗು ಮಳೆ ಬೀಳುತ್ತಲೆ ಇರುತ್ತದೆ. ರಾತ್ರಿ ಬೆಳಗಿನ ಜಾವದಲ್ಲಿ (ಧಾರಾಕಾರವಾದ ಮಳೆ ಸುರಿಯುತ್ತದೆ.) ಪಶ್ಚಿಮ ಘಟ್ಟಗಳ ವಾರ್ಷಿಕ ಮಳೆ ಪ್ರಮಾಣವು ೪೦೦೦ ದಿಂದ ೮೦೦೦ ಮಿ.ಮೀ. ನಷ್ಟಿದೆ. ಆಗುಂಬೆಯಲ್ಲಿ ವರ್ಷಾವಧಿಯಲ್ಲಿ ೮.೨೭೬ ಮಿ.ಮೀ. ಮಳೆ ಬೀಳುತ್ತದೆ. ಉತ್ತರ ಕನ್ನಡದಲ್ಲಿ ಸಾಮಾನ್ಯವಾಗಿ ೨೭೬೪ ಮಿ.ಮೀ. ಮಳೆ ಬೀಳುತ್ತದೆ. ಶಿವಮೊಗ್ಗದಲ್ಲಿ ೧೫೨೬.೫ ಮಿ.ಮಿ. ತನಕ ಮಳೆಯಾಗುತ್ತದೆ. ಶಿವಮೊಗ್ಗ ಜಿಲ್ಲೆ ೧೦.೫೫೩ ಚದುರ ಕಿ.ಮೀ. ಇದ್ದು ಅದರಲ್ಲಿ ಸೊರಬ, ಸಾಗರ, ಹೊಸನಗರ ತೀರ್ಥಹಳ್ಳಿ ೧೧೩೮.೭, ೧೯೩೮.೪, ೧೪೨೩.೩ ಹಾಗೂ ೧೨೪೭.೧ ಚ.ಕಿ.ಮೀ. ಇದೆ. ಪೂರ್ಣ ಜಿಲ್ಲೆಯು ೧೩.೨೭ ಮತ್ತು ೧೪.೩೯ ಉತ್ತರ ಅಕ್ಷಾಂಶ ಹಾಗೂ ೭೪.೩೮ ಮತ್ತು ೭೬.೦೪ ಪೂರ್ವ ರೇಖಾಂಶದವರಿಗೆ ಬರುತ್ತದೆ.

### ಮಲೆನಾಡಿನ ಭೌಗೋಳಿಕ ಪರಿಸರ

ಭಾರತ ಪರ್ಯಾಯ ದ್ವೀಪದ ಪಶ್ಚಿಮ ಮಧ್ಯಭಾಗದಲ್ಲಿ ಕರ್ನಾಟಕವು ನೆಲೆಗೊಂಡಿದೆ. ೧೧° ೨೧೦ ಮತ್ತು ೧೮° ೪೫° ಉತ್ತರ ಅಕ್ಷಾಂಶಗಳಿಗೂ ೭೪°, ೧೨° ಮತ್ತು ೭೮°, ೪೦° ಪೂರ್ವ ರೇಖಾಂಶಗಳಿಗೂ ಮದ್ಯದಲ್ಲಿದೆ. ಕರ್ನಾಟಕವನ್ನು ಕರಾವಳಿ ಪ್ರದೇಶ ಮತ್ತು ಕರ್ನಾಟಕದ ಪ್ರಸ್ಥಭೂಮಿ ಎಂದು ಎರಡು ಭಾಗವಾಗಿ ವಿಂಗಡಿಸಲಾಗಿದೆ. ಮುಂದೆ ಕರಾವಳಿಯನ್ನು ಸಮುದ್ರ ಪ್ರದೇಶ ಮತ್ತು ಪಶ್ಚಿಮ ಘಟ್ಟವೆಂದು, ಪ್ರಸ್ಥಭೂಮಿಯನ್ನು ಮಲೆನಾಡು ಮತ್ತು ಬಯಲು ಪ್ರದೇಶವೆಂದು ಸ್ಥೂಲವಾಗಿ ವಿಭಾಗಿಸಲಾಗಿದೆ.

ಮಲೆನಾಡಿನೊಳಗೆ ಬರುವ ಈ ಕೆಳಗಿನ ತಾಲೂಕುಗಳ ಭೌಗೋಳಿಕ ಚಿತ್ರಣ ಹೀಗಿದೆ.

| | ಸಾಗರ | ಸೊರಬ |
|---|---|---|
| ೧. ಒಟ್ಟು ಹಳ್ಳಿಗಳು | ೨೨೮ | ೨೬೧ |
| ೨. ಜನಸಂಖ್ಯೆ | ೧೩೩೭೫೨ | ೧೧೯೧೫೩ |
| ೩. ನಾಗರ ಜನಸಂಖ್ಯೆ | ೫೫೫೦೦ | ೮೩೦೦ |
| ೪. ೧೯೯೧ರ ಪ್ರಕಾರ | ೧೭೭೨೦೦ | ೧೬೨೪೦೦ |

**ಪ್ರಮುಖ ಬೆಟ್ಟಗಳು**

| | | |
|---|---|---|
| ಕೊಡಚಾದ್ರಿ ಬೆಟ್ಟ | ೧೩೪೩ ಅಡಿ | ಹೊಸನಗರ ತಾಲೂಕು |
| ಅಗಸ್ತ್ಯ ಪರ್ವತ | ೮೬೪ ಅಡಿ | ತೀರ್ಥಹಳ್ಳಿ ತಾಲೂಕು |
| ಗೋವರ್ಧನಗಿರಿ | ೮೪೮ ಅಡಿ | ತೀರ್ಥಹಳ್ಳಿ ತಾಲೂಕು |
| ಕವಲೆದುರ್ಗ | ೯೬೯ ಅಡಿ | ಹೊಸನಗರ ತಾಲೂಕು |
| ಚಂದ್ರಗುತ್ತಿ ಬೆಟ್ಟ | ೮೪೮ ಅಡಿ | ಸೊರಬ ತಾಲೂಕು |
| ಜೋಗಜಲಪಾತ | | ಸಾಗರ ತಾಲೂಕು |

ಆಗುಂಬೆ ಸೇರಿದಂತೆ ಪಶ್ಚಿಮ ಘಟ್ಟದ ನಿತ್ಯ ಹರಿದ್ವರ್ಣ ಕಾಡುಗಳಿಗೆ ಇಲ್ಲಿ ಬೀಳುವ ೨೦೦೦ ಮಿ.ಮೀ.ನಿಂದ ಮಿ.ಮೀ.ನವರೆಗೆ ಮಳೆಯೇ ಕಾರಣ. ಇಲ್ಲಿಯ ತೇವ ಹಾಗೂ ಹಿತಕಾರವಾದ ಉಷ್ಣತೆಯಿಂದ

ಕಾಡುಗಳು ದಟ್ಟವಾಗಿ ಬೆಳೆದಿವೆ. ಹಾಗಾಗಿ ಅವು ತಮ್ಮ ಮೇಲ್ಪದರಲ್ಲಿ ಸುಮಾರು ೩೭ ಮೀಟರ್ ಎತ್ತರಕ್ಕೆ ಬೆಳೆಯಬಲ್ಲವು. ನಾಗಸಂಪಿಗೆ, ಭೋಗಿ, ಬುರುಗ, ಹೈಗ, ಗಂಧ, ಹಲಸು ಮೊದಲಾದ ವೃಕ್ಷಗಳು ಬೆಳೆಯುತ್ತವೆ. ನಡುವರಾ ಪದರದಲ್ಲಿ ೧೫ ಮಿ.ಮೀ. ಮೀರಿ ಬೆಳೆಯುವ ಬಿಳಿಸಂಪಿಗೆ, ದೇವರಿಗೆ, ಸಂಪಿಗೆ, ಕಾಡುಹಿಪ್ಪೆ, ನೇರಳೆ, ಕೆಳಪದರಲ್ಲಿ ೭.೫ ಮೀಟರ್ ಬೆಳೆಯುವ ಅಶೋಕ, ಲವಂಗ, ಲೋರುಂದಿ, ಗುರಿಗೆ, ಕಾಡು ನೆರಳು, ಬಸವನಪಾದ ಮುಂತಾದ ವೃಕ್ಷಗಳು ಬೆಳೆಯುತ್ತವೆ. ನಡುವಣ ಪದರಲ್ಲಿ ೧೫ ಮಿ.ಮೀ. ಮೀರಿ ಬೆಳೆಯುವ ಬಿಳಿ ಸಂಪಿಗೆ ಅಕ್ಕಪಕ್ಕ ಬೆತ್ತ, ಬಗನಿ, ಕಿರು ಈಚಲು ಮೊದಲಾದವು ಕಂಡುಬರುತ್ತವೆ. ಸುಮಾರು ೨ ಸಾವಿರ ಮೀಟರ್ ಮಳೆಯಾಗುವ ಕೆಲಭಾಗದಲ್ಲಿ ನಿತ್ಯ ಪರಿದ್ವರ್ಣ ಕಾಡುಗಳನ್ನು ಒಳಗೊಂಡಿವೆ. ಬೂರುಗ, ದೂಪ, ಹಲಸು, ಮಾವು, ನಂದಿ, ಲವಂಗಪಟ್ಟೆ, ನಂಜಿನಕೊರಡು, ಬೀಟೆ, ತೇಗ, ಮತ್ತಿ ಹೊನ್ನೆ, ಏಲಕ್ಕಿ, ಮೆಣಸು ಮುಂತಾದವು ಕಾಣುತ್ತವೆ. ಇವುಗಳ ಜೊತೆಗೆ ಎಲೆ ಉದುರುವ ಕಾಡುಗಳು ಬೆಳೆಯುತ್ತವೆ.

**ದೀವರ ಸಂವಾದಿ ರೂಪಗಳು**

ದೀವರ ಮಕ್ಕಳು, ಹಳೆಪೈಕ ಎಂದು ಕರೆಸಿಕೊಳ್ಳುವ ದೀವರು ಅತ್ಯಂತ ಪ್ರಾಚೀನ ನೆಲೆಯನ್ನು ಹೊಂದಿದ್ದು, ಕರ್ನಾಟಕದ ನಾನಾ ಭಾಗದಲ್ಲಿ ಹಂಚಿಹೋಗಿದ್ದಾರೆ. ಒಂದೇ ರೀತಿಯ ಉದ್ಯೋಗ ಮತ್ತು ಜೀವನಾವರ್ತಗಳನ್ನು ಆದರಿಸಿದ್ದು ಇದಕ್ಕೆ ಸಂವಾದಿಯಾಗಿ ಹಲವು ಸಮುದಾಯಗಳನ್ನು ದೀವರ ಜೊತೆ ಕೂಡಿಸಿದ್ದು ಗಮನಾರ್ಹ. ಇಂತಹ ಸಮುದಾಯಗಳನ್ನು ಕರ್ನಾಟಕ ಹಿಂದುಳಿದ ವರ್ಗದ ಆಯೋಗದ ವರದಿಯಲ್ಲಿ ಶ್ರೀ ಎಲ್.ಜಿ.ಹಾವನೂರು ಅವರು (೧೯೭೩) 'ಈಡಿಗ' ಎಂಬ ಹೆಸರಲ್ಲಿ ಉಲ್ಲೇಖಿಸಿದ್ದಾರೆ.

ರಾಜಕೀಯ ಕಾರಣಕ್ಕಾಗಿ ಇಂತಹ ಐಕ್ಯತೆ ಸಾಧಿಸಲಾಯಿತಾದರೂ ಇವರ ಆಚರಣಾ ವಿಧಿಗಳಲ್ಲಿ ಅಗಾಧ ವ್ಯತ್ಯಾಸವಿದೆ. ಪ್ರಾಯಶಃ ಪ್ರಾಕೃತಿಕ ಕಾರಣಗಳಿಗೆ ಇಂತಹ ವ್ಯತ್ಯಾಸ ಉಂಟಾಗಿರಬಹುದು. ಭಾರತ ಸಂವಿಧಾನದ ೧೫ (೪) ೧೬೧ (೪) ನೇ ಅನುಚ್ಛೇದಗಳ ಮೇರೆಗೆ, ಹಿಂದುಳಿದ ಸಮುದಾಯದ ಪಟ್ಟಿಯಲ್ಲಿ ಈಡಿಗ ಹೆಸರನ್ನು ಈ ಕೆಳಗಿನಂತೆ ಸೇರಿಸಲಾಗಿದೆ.

ಈಡಿಗ, ಇಡಿಗ, ಎಲಿಗ, ಈಳಿಗ, ಹಳೆಪೈಕ, ಬಿಲ್ಲವ, ಮಲೆಯಾಳ, ಬಿಲ್ಲವ, ದೇವಾರ್, ದೀವರ ಮಕ್ಕಳು, ನಾಮಧಾರಿ, ಕೂಲ್, ಗೊಂಡ್ಲ, ತಿಯಾನ್, ತಿಯಾರ್, ಈಡಿಗ ಸೇರಿದಂತೆ ೧೮ ಕ್ಕೂ ಹೆಚ್ಚು ಜಾತಿಗಳಿವೆ. ಆದಾಗ್ಯೂ ದೀವರು ಇನ್ನೂ ಕೂಡಿ ಹಲವು ಸಮುದಾಯಗಳ ಜೊತೆ ಕೌಟುಂಬಿಕ ಸಂಬಂಧ ಹೊಂದದೆ ಇರುವಂತದ್ದನ್ನು ಕಾಣಬಹುದು. ಆದರೆ ಇತ್ತೀಚಿನ ಆರ್ಥಿಕ, ರಾಜಕೀಯ, ಶೈಕ್ಷಣಿಕ, ಕಾರಣಗಳಿಗಾಗಿ ಇವರಲ್ಲಿ ವೈವಾಹಿಕ ಸಂಬಂಧಗಳು ಅತ್ಯಂತ ವೇಗವಾಗಿ ಆಗುತ್ತಿರುವುದನ್ನು ಕಾಣಬಹುದಾಗಿದೆ. ಒಟ್ಟಾರೆ ಈಡಿಗರ ಸಂವಾದಿ ರೂಪಗಳನ್ನು ದೀವರ ಹೆಸರಿನೊಂದಿಗೆ ವಿಶ್ಲೇಷಿಸುವ ಪ್ರಯತ್ನ ಇದಾಗಿದೆ.

೧.**ಈಡಿಗ:** ಕರ್ನಾಟಕದಲ್ಲಿ ಪ್ರಮುಖವಾಗಿ ಕಂಡುಬರುವ ಹೆಸರಿದು. ಈಡು + ಇಗ - ಈಡು, ಎಂದರೆ ಹೆಂಡ ಇಳಿಸುವ,(ಇಗ-ಪ್ರತ್ಯಯ) ವನು ಎಂದರ್ಥ. ಈಡಿಗ ಎಂಬ ಪದವು ಇಡಚು ಎಂಬ ತೆಲುಗು ಪದದಿಂದ ಬಂದಿದೆ. ಇಡಲು ಹೆಂಡ ಎಂಬ ತೆಲುಗು ಪದದಿಂದ 'ಇಡಚು' ಪದ ಹುಟ್ಟಿದೆ. ಹಾಗೆಯೆ ಮತ್ತೊಂದು ಪ್ರತ್ಯಯದ ಪ್ರಕಾರ 'ಈಡಿ' ಶಬ್ದವು ತಮಿಳಿನ 'ಈಳಿ' ಮತ್ತು 'ಈಲಿ' ಎಂಬ ಪದಗಳಿಗೂ ತೆಲುಗಿನ ಈಂಡ್ರ ಪದಕ್ಕೂ

ಸರಿಸಮಾನವಾಗಿದೆ. ಕೆಲವೊಮ್ಮೆ ಸಮುದಾಯವನ್ನು ಪ್ರತಿಬಿಂಬಿಸುವ, ಕಥೆಗಳು, ಮತ್ತು ಲೋಕೋಕ್ತಿಗಳು ರೂಢಿಯಲ್ಲಿವೆ. ಅವುಗಳನ್ನು ವಿಶ್ಲೇಷಿಸುವಾಗ ಒಂದಾದ ''ಇರುವೆಯ ಶಕ್ತಿಯನ್ನು ಹೆಂಗಸಿನ ಚಾತುರ್ಯವನ್ನು, ಹುಂಜದ ಶೌರ್ಯವನ್ನು ಪಡೆದಿರುವವನೇ ಈಡಿಗ''[೧]ಎಂಬ ಮಾತಿದೆ. ಇವರು ಹೆಚ್ಚಾಗಿ ಬೆಂಗಳೂರು, ಮಂಡ್ಯ, ಮೈಸೂರು, ಹಾಸನ, ತುಮಕೂರು ಜಿಲ್ಲೆಗಳಲ್ಲಿ ಕಂಡುಬರುವರು.

೨. **ಈಳಿಗರ್:** ಕರ್ನಾಟಕ ಹಾಗೂ ಕೇರಳದಲ್ಲಿ ಹೆಂಡ ಇಳಿಸುವ ಸಮುದಾಯವನ್ನು 'ಈಳಿಗರ್' ಎಂದು ಕರೆಯುತ್ತಾರೆ. ''ತಿರುವಾಂಕೂರ್, ಕೊಚ್ಚಿನ್, ಮಲಬಾರ್ ಪ್ರದೇಶದಲ್ಲಿ ಕಂಡುಬರುವ ಇರಿಸೋರ್ ಎಂಬ ಪದದ ರೂಪಾಂತರವೇ 'ಈಳಿಗರ್' ಎಂದಾಗಿರಬೇಕು.''[೨] ಕೇರಳದಲ್ಲಿ ಹೆಚ್ಚಿನ ಭಾಗವನ್ನು ಉತ್ತರ ಕರ್ನಾಟಕದ ಭಾಗವನ್ನು ವ್ಯಾಪಿಸಿದೆ.

೩. **ತಿಯಾ:** ಈಳಿಗ, ತಿಯಾ, ತೀಯ್ಯ, ಎಂದು ಕರೆಯಲ್ಪಡುವ ಈ ಸಮುದಾಯ ಮಲೆಯಾಳದಲ್ಲಿ ನೆಲೆಸಿರುವ ಈಡಿಗರು ಸಿಂಹಳದಿಂದ ಬಂದವರೆಂಬುದನ್ನು ತಿಳಿಸುವ ಪ್ರಯತ್ನ ಮಾಡುತ್ತದೆ. ''ಜೇವಿಲ್ ತೀಯಾ ತಿಯಾನ್ ಎಂದರೆ ತೆಂಗಿನಕಾಯಿ ಕೆಡುವುವವರು ಹಾಗೂ ಹೆಂಡ ಇಳಿಸುವವರು ಎಂಬ ಅರ್ಥವಿದೆ. ಕೊಡಗು ಪ್ರದೇಶದಲ್ಲಿ 'ತಿಯಾ' ಎಂದು ಬಳಸುತ್ತಾರೆ''.[೩]ಸಿಂಹಳ ದೇಶದ ಹೆಸರು ಬದಲಾಗಿ ಸಿಂಹಲನ್, ಇಹಲಾನ್ ಆಗಿ ಕೊನೆಗೆ 'ಇಲರಸ್' ಆಗಿರುತ್ತದೆ. ಇಲರಸ್ ಎಂದರೆ 'ಹೆಂಡ' ಇಳಿಸುವುದು ಎಂದಾಗುತ್ತದೆ.

೪. **ನಾಡಾರ್:** ಇದನ್ನು ವಿಶೇಷವಾಗಿ ಸಾಗರ ಕೋಯಿಲ್ ಪ್ರದೇಶದಲ್ಲಿ ನಾಡಾರ್ ಎಂದು ಕರೆಯುತ್ತಾರೆ. ಈ ಸಮುದಾಯ ಮಲೆಯಾಳದಲ್ಲಿ ನೆಲೆಸಿದ್ದು ಇವರು ಸಿಂಹಳದಿಂದ ಬಂದ ಈಡಿಗರೆಂದು ಊಹಿಸಲಾಗಿದೆ.

೫. **ಬಿಲ್ಲವರು:** ಬಿಲ್ಲವರು ದಕ್ಷಿಣಕನ್ನಡ ಹಾಗೂ ಉಡುಪಿ, ಕೊಡಗು ಜಿಲ್ಲೆಗಳಲ್ಲಿ ವ್ಯಾಪಕವಾಗಿ ಹರಡಿಕೊಂಡಿದ್ದಾರೆ. ತುಳು ಭಾಷಿಕರಾದ ಇವರು ಕೂಡಾ ಹೆಂಡ ಇಳಿಸುತ್ತಾರೆ.

೬. **ಕಲಾಲ್:** ಹೈದರಾಬಾದ್ ಕರ್ನಾಟಕ ಭಾಗದಲ್ಲಿರುವ ಇವರನ್ನು ಗೌಂಡಾಲ, ಗೊಂಡ್ಲ, ಈಳಿಗ, ಕಲಾಲ್ ಎಂದು ಕರೆಯುತ್ತಾರೆ. ಮೂಲತಃ ಸಾರಾಯಿ ಉದ್ಯೋಗ ಮಾಡುವವರಾದ ಇವರು, ಉದ್ಯಮದ ಗುತ್ತಿಗೆದಾರರಾಗಿ ಪರಿವರ್ತನೆಗೊಂಡಿರುವುದನ್ನು ಕಾಣಬಹುದಾಗಿದೆ.

೭. **ಹಳೆಪೈಕ:** ಹಳೆಪೈಕ ಎಂದರೆ ಹಳೆಯ 'ಯೋಧ' ಎಂದರ್ಥ. ಪೈಕ ಎಂದರೆ 'ಸೈನಿಕ' ಎನ್ನುವಲ್ಲಿ ಹಳೆಪೈಕ ಜನರನ್ನು ತಿರುವಾಂಕೂರಿನಲ್ಲಿ ಗುರುತಿಸಿದ ಬಗೆಯನ್ನು ನೋಡಬಹುದಾಗಿದೆ.

''ಉತ್ತರ ಭಾರತದಲ್ಲಿ ಒರಿಯಾ ಕಾಲಹಂದಿ, ಪಾಟ್ನಾ, ರಾಯಪುರದಲ್ಲಿ 'ಪೈಕ' ಎಂಬ ಹೆಸರಿನ ಜನಾಂಗವಿದೆ.''[೪]ವಿಜಯನಗರ, ಕುಮಾರರಾಮ, ಇಕ್ಕೇರಿ, ಕೆಳದಿ ಅರಸರ ಹತ್ತಿರ ಇವರೆಲ್ಲ ಸೈನಿಕರಾಗಿದ್ದರು ಎಂಬುದಕ್ಕೆ ಹೆಳವರಲ್ಲಿ ಹೇರಳ ದಾಖಲೆ ಸಿಗುತ್ತವೆ. ಇದರ ಜೊತೆಗೆ ಹಾಲ ಕ್ಷತ್ರಿಯ ಎಂಬ ಹೆಸರು ಸೊರಬ-ಸಾಗರ ತಾಲೂಕಿನಲ್ಲಿ ಚಾಲ್ತಿಯಲ್ಲಿ ಇದೆ. ಅಂದರೆ ಇದನ್ನು ವೀರಯೋಧರು ಎಂಬುದಕ್ಕೆ ಸಂವಾದಿಯಾಗಿ ಗುರುತಿಸಿದ್ದಾರೆ.

೮. **ನಾಮಧಾರಿ:** ''೧೯೦೯ ರಲ್ಲಿ ಪ್ರಕಟವಾದ ಥರ್ಸ್ಟನ್‌ರವರ 'Caste Tribes of Southern India'ಎಂಬ ಮಹತ್ವದ ಗ್ರಂಥದಲ್ಲಿ 'ನಾಮಧಾರಿ' ಎಂಬ ಉಲ್ಲೇಖವಿದೆ. ಮತ್ತು ಹಳೆಪೈಕರು ಎಂಬ ಹೆಸರು ಇದೆ.''[೫]ವೈಷ್ಣವ ಮತದವರಾದ ಲೋಕಚಾರ್ಯ, ತಾತಾಚಾರ್ಯರು, ವೀರವೈಷ್ಣವ ಧರ್ಮವನ್ನು ಪ್ರಚಾರಿಸಿ

ದೀವರೆಂಬ ಅನಾರ್ಯರು, ಆರ್ಯರಾಗಿ ಇಂದಿಗೆ ಸುಮಾರು ೩೫೦ ವರ್ಷಗಳ ಹಿಂದೆ ನಾಮಧಾರಿಗಳೆಂದು ಹೆಸರಾಯಿತು.

ಅಂದರೆ ೩೫೦ ವರ್ಷಗಳ ಹಿಂದೆ ಎಂದು ಗುರುತಿಸುವುದಾದರೆ ಅದು ೧೬೦೦ ಕ್ರಿ.ಶ. ಎಂದು ಊಹಿಸಬಹುದು. ಅಂದರೆ ಇದು ರಾಮಾನುಜಾಚಾರ್ಯರ ಭಕ್ತಿಪಂಥ ಕಾಲಘಟ್ಟದ ಪರಿಣಾಮ ಎಂದೇ ಹೇಳಬಹುದು.

೯. **ನಾಯ್ಕರು:** ನಾಯ್ಕ, ನಾಯಕ, ನಾಯ್ಕರು, ನಾಯ್ಕರ ಮಕ್ಕಳು ಎಂದೆಲ್ಲ ದೀವರನ್ನು ಕರೆಯುತ್ತಾರೆ. ಈ ರೀತಿ ಸಂಬೋಧನೆ ದೀವರಲ್ಲದೆ ಹಲವು ಜಾತಿಗಳಲ್ಲಿದೆ. ''ನಾಯ್ಕ ಎಂದರೆ ಗ್ರಾಮದ ಮುಖಂಡ, ಒರಿಯಾ ಭಾಷೆಯಲ್ಲಿ ನಾಯ್ಕ ಎಂದು ಗ್ರಾಮದ ಮುಖಂಡನಿಗೆ ಕರೆಯುವ ರೂಢಿಯಿದೆ.''[೬] ನಾಯಕ ಎಂಬುದು ಮುಂದಾಳು ಎಂಬ ಅರ್ಥದಲ್ಲಿ ಬಳಕೆಯಾಗಿದೆ. ರಾಜರಿಗೆ ಜನಸೇವಾ ಧುರೀಣರಿಗೆ ನೀಡುತ್ತಿದ್ದ ಬಿರುದು ಕೂಡ ಇದಾಗಿದೆ. ಮುಖ್ಯವಾಗಿ ಅನ್ಯರ ದುರಾಕ್ರಮಣದಿಂದ ಜನರನ್ನು ರಕ್ಷಿಸುವ ಕಳ್ಳಕಾಕರು ಮತ್ತು ಕಾಡು ಮೃಗಗಳ ಹಾವಳಿಯಿಂದ ತಪ್ಪಿಸುವ ಗುಂಪಿಗೆ ಈ ಹೆಸರು ಅಂಟಿಕೊಂಡಿದೆ. ''ನಾಯಕ ಎಂಬುದು ಬಹುತೇಕ ಉ.ಕ. ಜಿಲ್ಲೆಯಲ್ಲಿ, ಕೊಪ್ಪ,ಶೃಂಗೇರಿ, ಶಿವಮೊಗ್ಗ ಜಿಲ್ಲೆ ಹೊಸನಗರ, ತೀರ್ಥಹಳ್ಳಿ ತಾಲೂಕುಗಳಲ್ಲಿ ಪ್ರಚಲಿತದಲ್ಲಿರುವ ಉಪನಾಮವಾಗಿದೆ.''[೭]

**ದೀವರು:** ''ದೀವರು ಮಲೆನಾಡಿನಾದ್ಯಂತ ಹಬ್ಬಿರುವ ಸಮುದಾಯ. ಬೇಟೆ, ವ್ಯವಸಾಯ, ಪಶುಪಾಲನೆಯಲ್ಲಿ ಇವರು ತೊಡಗಿದ್ದಾರೆ. ಬೇಟೆಗಾರಿಕೆ ಹಾಗೂ ಕ್ಷಾತ್ರ ಪ್ರವೃತ್ತಿಯಲ್ಲಿ ದೊಡ್ಡ ಹೆಸರು ಮಾಡಿದ ಈ ಜನರು ತಮ್ಮ ಬಿಡುವಿನ ವೇಳೆಯಲ್ಲಿ ಹೆಂಡ ತೆಗೆಯುವ ವೃತ್ತಿ ಮಾಡುತ್ತಾರೆ''. ಇವರಲ್ಲಿ ಕೂಡಾ ಎರಡು ಪಂಗಡಗಳಿದ್ದು ''ತೆಂಗಿನ ಮರದಲ್ಲಿ ಹೆಂಡ ಇಳಿಸುವವರು ತೆಂಗಿನ ದೀವರು, (ಘಟ್ಟದ ಕೆಳಗಿನವರು) ಎಂದು: ಕಾಡಿನ ಬಗನಿ ಮರಗಳಲ್ಲಿ ಹೆಂಡ ಇಳಿಸುವವರು 'ಬಗನಿ ದೀವರು' ಅಥವಾ 'ಕಾನುದೀವರು' ಎಂದು ಪ್ರತ್ಯೇಕಿಸುತ್ತಾರೆ.''[೮]

ದೀವರ ಪದವನ್ನು ಕೆಲ ವಿದ್ವಾಂಸರು ಈ ರೀತಿ ವಿಶ್ಲೇಷಿಸಿದ್ದಾರೆ. ಧಿ ಶ್ರೇಷ್ಠವಾದ, ಬುದ್ಧಿವಂತ, ಬೆಳಕು, ಸೂರ್ಯ,ಶೌರ್ಯ ಇತ್ಯಾದಿ. ದೀವರು ಶೌರ್ಯವಂತರೂ, ಕ್ಷತ್ರಿಯರು, ವೀರಯೋಧರು ಎಂಬುದಾಗಿ ಹೇಳಲಾಗಿದೆ. ''ಕೃಷಿ ವೃತ್ತಿಗಳನ್ನು ಅವಲಂಬಿಸಿದ್ದ ದೀವರು ಬೇಟೆಯಾಡುವುದರಲ್ಲಿ ಚಾಣಾಕ್ಷರಾಗಿದ್ದು 'ದಿವ್' ನನ್ನು ಕಟ್ಟಿ ಬೇಟೆಯಾಡುತ್ತಿದ್ದುದರಿಂದ (ದೀವರು, ದೀವಗಾರ) ದೀವರ ಎಂಬ ಹೆಸರು ಬಂದಿದೆ.''[೯] ಕಾಳಿದಾಸನ ಅಭಿಜ್ಞಾನ ಶಾಕುಂತಲದಲ್ಲಿ ಉಂಗುರ ನುಂಗಿದ ಮೀನನ್ನು ಹಿಡಿಯುವ ಮೀಂಗುಲಿಗನನ್ನು ದೀವರು ಎಂದೇ ಉಲ್ಲೇಖಿಸಲಾಗಿದೆ. ಹೀಗೆ ದೀವರು ಇಂದು ವಿವಿಧ ಹೆಸರಿನಿಂದ ವಿಸ್ತರಿಸಿಕೊಂಡು ರಾಜಾದ್ಯಾಂತ ಹರಡಿಕೊಂಡಿರುವ ಜನಾಂಗವಾಗಿದೆ. ಈಡಿಗರು ಎಂಬ ಪದ ಕೇವಲ ಹೆಂಡ ತೆಗೆಯುವ ಕಾರಣದಿಂದ, ಶ್ರೀ ರೇಣುಕಾಂಬೆಯನ್ನು ಪೂಜಿಸುವ ಕಾರಣದಿಂದ ಒದಗಿಸಬಹುದಾದರೂ ಆಳದಲ್ಲಿ ರಾಜಕೀಯ ಪ್ರಾಬಲ್ಯ ಸಾಧಿಸುವ ಮಹತ್ವಕಾಂಕ್ಷೆಯೂ ಇದೆ ಎಂಬುದನ್ನು ಅಲ್ಲೆಗಳೆಯುವಂತಿಲ್ಲ.

ಒಂದೇ ಕಸುಬನ್ನು ಅವಲಂಬಿಸಿದ ಜಾತಿಯ ಹಲವು ಉಪಪಂಗಡಗಳನ್ನು ಒಂದಾಗಿಸಬೇಕು ಎಂಬ ಉದ್ದೇಶದೊಂದಿಗೆ ''೧೯೫೮ ನವಂಬರ್ ೯ ಮತ್ತು ೧೦ ರಂದು ಬೆಂಗಳೂರಿನ ರೇಸ್‌ಕೋರ್ಸ್ ಮೈದಾನದಲ್ಲಿ ಪ್ರಥಮ 'ಈಡಿಗ ಸಮ್ಮೇಳನ' ನಡೆಸಲಾಯಿತು. ಎರಡನೆಯ ಸಮ್ಮೇಳನ ೨೪.೬.೧೯೬೧ ರಲ್ಲಿ ಮೈಸೂರಿನಲ್ಲಿ

ಜರುಗಿತು. ಈ ಸಮ್ಮೇಳನದಲ್ಲಿ ಈಡಿಗ ಜನಾಂಗವನ್ನು ತೀರಾ ಹಿಂದುಳಿದ ಜನಾಂಗವೆಂದು ಘೋಷಿಸಬೇಕೆಂದು ಸರ್ಕಾರವನ್ನು ಪುನಃ ಒತ್ತಾಯಿಸಲಾಯಿತು.'' ಪಾನನಿಷೇದಿಂದಾಗಿ ಕಸುಬು ಕಳೆದುಕೊಂಡ ಜನಾಂಗದ ಸಹಸ್ರಾರು ಮಂದಿಗೆ ಸಾಗುವಳಿ ಜಮೀನು, ವಸತಿ ಸೌಕರ್ಯ ಅಥವಾ ಧನಸಹಾಯ ನೀಡಬೇಕೆಂದು ಒತ್ತಾಯಿಸಲಾಯಿತು.

``೧೯೯೫ ರಲ್ಲಿ ಸುವರ್ಣ ಮಹೋತ್ಸವ ಮೂರನೇ ರಾಜ್ಯಮಟ್ಟದ ಸಮ್ಮೇಳನ ಬೆಂಗಳೂರಿನ ಅರಮನೆ ಆವರಣದಲ್ಲಿ ನಡೆಯಿತು. ಈ ಎಲ್ಲ ಸಮ್ಮೇಳನ ಹಾಗೂ ಸಂಘಟನೆಯ ಉದ್ದೇಶ ಜನಾಂಗವನ್ನು ಒಂದು ಪ್ರಬಲ ಶಕ್ತಿಯನ್ನಾಗಿಸುವುದು ಆಗಿದೆ.''[೧೦] ಆದರೆ ಈ ಸಂಶೋಧನೆಯ ಸಂದರ್ಭದಲ್ಲಿ ದೀವರನ್ನು ಪ್ರಧಾನವಾಗಿ ಅಧ್ಯಯನ ಮಾಡಲು ನಿರ್ಧರಿಸಲಾಗಿದೆ. ಕೃಷಿ ವ್ಯವಸ್ಥೆಯ ದೃಷ್ಟಿಕೋನದಲ್ಲಿ ಅತ್ಯಂತ ವೈಶಿಷ್ಟ್ಯಪೂರ್ಣವಾದ ಸಮುದಾಯವಾದ ದೀವರನ್ನು ಸಂಶೋಧನೆಯ ಕೇಂದ್ರ ಪ್ರಜ್ಞೆಗೆ ತಂದುಕೊಳ್ಳಲಾಗಿದೆ.

**ಕಾವ್ಯಗಳಲ್ಲಿ ಹಾಗೂ ಶಾಸನಗಳಲ್ಲಿ ದೀವರು**

ಕಾವ್ಯಗಳಲ್ಲಿ ಹಾಗೂ ಶಾಸನಗಳಲ್ಲಿ ಧರ್ಮಸೂಚಿಯಾಗಿ ಮತ್ತು ಉಪಮೆಗಳಾಗಿ ಪ್ರಯೋಗಿಸಿರುವುದನ್ನು ಕಾಣಬಹುದು.

೧. ಹರುಷದಿಂ ತಾನು ಬಸವ ದೀವರನ್ನು ಮಖಿಳ ನಿಯೋಗ ದೋಲಗವೆರಸಿ (ಬ.ಸ.ಪು. ೫-೧೯)

೨. ವರದ ಮಹಿಮಾನ್ವಿತನೆ ಧೀವರನು ರುಜಿತೇಂದ್ರೀಯ ಪರಮ ಚಿದ್ವನ (ಮಡಿ. ಭ ೪) = ಬೆಸ್ತರವನು, ಮೀನುಗಾರ, ಜಾಲಗಾರ, ಕೈವರ್ತಕ್ತ, ದೀವರ; ದಾಶ; ಮತ್ಸಂಭೇಂಧಿ.

೩. ಜಾಳಿಕ - ಈ ಐದು ಜಾಲಗಾರರು (ಹಲಾಯು ೯೭-೪೪೦) ದೀವರ ಜಾಳಿಕ ದಾಶನಾಮ ಮೀಂಗುಗಂ (ವಸ್ತು-ಕೋ ೬೬=೮೪)

೪. ಕರೆಸಿದನು ಧೀವರನಯ್ಯ ನಂಗರಸಿಯಾಗಲಿ ನಿನ್ನ ಮಗಳೆನಲು (ಕುವ್ಯಾ ೨-೨೭)

೫. ಪ್ರಳಯ ಕಾಲದೇಕಾರ್ಣವದೊಳುನ್ಮತ್ತ, ಕಚ್ಛಪ ಮತ್ಸ್ಯಯುಗ ಮಂತೆಗೆವ ದೀವರೋತ್ತಂ ಸರೂಪಂ ಹರಂ (ಪದ್ಮ ರಾ. ೧೦-೧೩೪)

೬. ದೀವರಿಗೆ ಬೇಡಿದುದನಿತ್ತು ಕಳುಹೆ (ಪ್ರೌಢ ರಾ. ೧೧-೩೨) = ಬೇಟೆಗಾರ, ಬೇಡ, ವ್ಯಾಧ.

೭. ಹಸ್ತಮನಾ ಪಾವಿನ ಪಲ್ಲೆ ಕೊಟ್ಟು, ಸತ್ತಾತನ ಪೊಳಿಲೊಳೆ ಮುಖ್ಯನಪ್ಪ ದೀವರ ನಾದಂ (ಪಾರಾಂ = ದೀವರ, ದೀವಳ ಅರ್ಥ, ನೇ ೩-೮೫)

೮. ಪಿಡಿದೊಂದ ಪೆರ್ಬುಲಿಯು ನೊರ್ವಲ ಕಕ್ಷದಿಂದೊತ್ತಿ ತನ್ನ ಗೃಹಕ್ಕೆಳ್ತು ದುರರ್ದನೊಂದೆಡೆಯೊಳುದ್ಯದ್ಧೀವರಂ, ದೀವಂ (ಜಗ.ವಿ. ೧೬-೩೦)

೯. ಬಂದ ಸುಜನ ಮೃಗಧೀವರಂ (ಪಾರಾ - ನಬಿಳಿಮುನಿಪಾವನಂ) ನಖಿಳ ಮುನಿ ಪಾವಕಂ (ದುಭೋದ ಬಾವಕಂ) ಕಪಟಪಟು ಕೌಶಿಕಂ ವಾಶಿಷ್ಠ ಮುನಿ ಹೋದ ಹೊತ್ತನರೆದು(ಹಜಾ ತಾ. ೩-)

೧೦. ಹೇವವಿಲ್ಲದೆ ಕಾದಬೇಹುದು ಧೀವರ ವೋಲ್ ತಡಿಕೆವಲಿಯಲಿಲಾವುಗೆಯ ಹೊಯ್ಪಾಂದ ವಲ್ಲಸುತೆ ತಚ್ಚನಾ ಪಾರ್ಥ (ಕುಟ್ಯಾಕ ೨೨-೨೮)

೧೧. ಗಗನ ಗಹನದೊಳೆ ಗಮಿಯಪ ಖಗಕ್ಕೆ ಪಕ್ಷೀಂದ್ರ ದೀವರಂ ಬೀಸಿದ ರೇಣುಗುಣ ನವಚಾಲಕೊಳಗಾಯ್ತೊ ಗುಮಿಗೆಯಿಂದ ನಿಮಿಷ ಪ್ರತಾಪನಂ ಚಿತ್ರಂ (ರಾಜ ಶೇ. ೬.೪೦ ಸಂ.)

೧೨. ಗೊರವ ಬ್ರಾಹ್ಮಣ ಸ್ರಿತರ್ಬಿಡವರಿಷ್ಪರ್ಪಂಡಿತ ಪಾಠ ಕರ್ತಿರಿ, ಯುರ್ಗ್ಗಾಯಕ ವಾದಕಕ್ಕರ್ಥಕರಂ. ನಾನಾರ್ಥಕ....ಡಿಗಳ ರಣಾಯಾತ ದಿಗಂಬರ್ರ್ಬ ಧಿರರುಂದ್ರ ಷೋಡಷ... ದೆತಾಂಕರೆ ದೀವಂ, ಮಧುಸೂಧನಂ ಸೊಗಯಿಸಂ, ಭೂಲೋಕ ಕಲ್ಪದ್ರುವುಂ: ಶಿವಮೊಗ್ಗ ತಾಲ್ಲೂಕು ಬಸವನಗಂಗೂರ್ ಶಾ. ಸಂ. ೫.)

೧೩. ಮದ್ವಾಚಾರ್ಯ ಮತಾಂಭೋಜ ಮರ್ತಾಂಡಾಯಿತ್, ತೇಜಸೇ, ಬ್ರಾಹ್ಮಣ್ಯ ತೀರ್ಥ ಶಿಷ್ಯಾಯ ಬ್ರಹ್ಮನಿರ್ಮಲ, ಮೂರ್ತಯೇ, ವ್ಯಾಸತೀರ್ಥ ಯತೀಂದ್ರಾಯ ವಿದ್ವದಿಂ ದೀವರೇಂದವೆ. (ಶಿವಮೊಗ್ಗ ತಾ. ಶಾ.ಸಂ. ೫೫ ಕೂಡಲಿ)

ಈ ಉದಾಹರಣೆಗಳಿಂದ ದೀವರ ಎಂಬ ಹೆಸರಿನ ಜನಾಂಗ ಬಹುಕಾಲದ ಹಿಂದೆಯೇ ಇತ್ತೆಂದೂ ಜಲಗಾರರೂ, ಭೇಟಿಯಾಡುವವರು ಆಗಿದ್ದರೆಂದು ತಿಳಿಯಬಹುದು. ದೀವರ ಎಂದರೆ ಜ್ಞಾನಿ, ಪಂಡಿತ ಬ್ರಹ್ಮಜ್ಞಾನಿ ಎಂದೂ, ವೀರ, ಶೂರ, ಯೋಧನೆಂದೂ, ಸಾಹಸಿ ಮತ್ತು ಹಟಮಾರಿ ಛಲಗಾರ ಎಂಬುದೂ ಕಂಡುಬರುತ್ತದೆ.

## ಪುರಾಣಗಳಲ್ಲಿ ದೀವರು

ಪುರಾಣಗಳೆಂದರೆ ಒಂದು ಸಮುದಾಯದ ಆಚಾರ, ವಿಚಾರ ನಂಬಿಕೆ, ಸಂಪ್ರದಾಯಗಳಿಗೆ ಸಮರ್ಥನ ನೀಡುವ ಸ್ವರೂಪವಾಗಿದೆ. ಇದು ಬಹು ಹಿಂದಿನ ಕಾಲದಲ್ಲಿ ನಡೆದು ಹೋದ ನೈಜ ಘಟನೆಗಳ ಫಲಶೃತಿಯನ್ನು ಮರು ಪ್ರತಿಬಿಂಬಿಸುವ ಸಾಂಕೇತಿಕ ಸಮಷ್ಟಿಯಾಗಿದೆ.

ಮನುಷ್ಯ ಎಂದು ತನ್ನನ್ನು ಆವೃತ್ತವಾಗಿರುವ ಪ್ರಕೃತಿಯನ್ನು ಮತ್ತು ಅದರ ವೈಚಿತ್ರ್ಯವನ್ನು ಪ್ರಶ್ನಾತ್ಮಕ ದೃಷ್ಟಿಯಿಂದ ನೋಡತೊಡಗಿದನೋ ಆಗಲೇ ಪುರಾಣಗಳು ಜನಿಸಿದವು. ಅಂದರೆ ಈ ಜಗತ್ತಿನ ಗೂಢತೆಗಳ ಗಾಢ ವಿಸ್ಮಯ ದೃಷ್ಟಿಕೋನವೇ ಪುರಾಣವಾಗಿ ನಿಂತಿದೆ. ಮಾನವ ವಿಕಾಸದ ಚರಿತ್ರೆಯೇ ಪುರಾಣ ಎನ್ನುವ ಆಂಡ್ರ್ಯೂಲಾಂಗ್‌ನ ಮಾತನ್ನು "ಪುರಾಣ ಎನ್ನುವುದು ಚರಿತ್ರೆಯ ಮಾತೃಕೆ ಎನ್ನುವ ಎಲಿಯಡ್ ಅವರ ಮಾತನ್ನು ನಾವು ಒಪ್ಪಬೇಕಾಗುತ್ತದೆ."[೧೨]

ವಿದೇಶಿ ವಿದ್ವಾಂಸರಿಗೆ ದೇವರು ಕಂಡ ಬಗೆ ಇನ್ನಷ್ಟು ವಿಚಿತ್ರವಾಗಿದೆ. "ಪೇಗನ್ ಜಾತಿಯಲ್ಲಿ ಆರು ಜಾತಿಗಳಿವೆ. ಬ್ರಾಹ್ಮಣ ನಾಯರಿ, ತೀವ (ಬಿಲ್ಲವ), ಮುಖವ ಪೋಲಿಯಾರ್, ಹಿರವ (ಇಜವಾ);, ಇವರು ಬ್ರಾಹ್ಮಣರ ಅಡಿಯಲ್ಲಿ ಬಾಳುತ್ತಿರುತ್ತಾರೆ"[೧೩] ಎಂಬ ಮಾತನ್ನು ಪೂರ್ಣ ಪ್ರಮಾಣದಲ್ಲಿ ಒಪ್ಪಲಾಗದು. ಹಿಂದೂ ಧರ್ಮದ ವರ್ಣವನ್ನು ಪ್ರವಾಸಿಗಳು ಹೀಗೆ ವಿಭಾಗಿಸಿಕೊಂಡಿರಬೇಕು. ಸೃಷ್ಟಿಕ್ರಿಯೆಯ ಮೂಲಕ ಮನುಷ್ಯ ಚೈತನ್ಯವನ್ನು ಸೂಚಿಸುವ 'ಸೃಷ್ಟಿ ಸಂಬಂಧಿತ ಪುರಾಣ' ಹಾಗೂ ವಿಶ್ವದ ಸೃಷ್ಟಿ ಪ್ರತಿಕಾಲ ಘಟ್ಟದಲ್ಲೂ ನಾಶವಾಗುತ್ತಲೇ ಇರುತ್ತದೆ. ಮತ್ತು ಪುನರ್ ನಿರ್ಮಾಣಗೊಳ್ಳುತ್ತಲೇ ಇರುತ್ತದೆ ಹಾಗೂ ಅದರ ಮರುಸೃಷ್ಟಿಗೆ ಸಂಬಂಧಿತ ಪುರಾಣಗಳೇ ಜಾಸ್ತಿ ಇವೆ. ಈ ಸೃಷ್ಟಿ ಹಾಗೂ ಲಯ ಇವೆರಡಕ್ಕೂ ಮನುಷ್ಯ ಕಾರಣವಲ್ಲ. ಅನುಭವಾತೀತ, ಸ್ಥಲಸ್ವರೂಪಿ ಮಹಾಶಕ್ತಿಯೊಂದು ಇದಕ್ಕೆ ಕಾರಣವಿರಬೇಕೆಂಬ ವಾದವಿದೆ"[೧೪] ಸಮಷ್ಠಿ ಹಾಗೂ ಇಂಥ ಭಯಕೇಂದ್ರಿತ ನಂಬಿಕೆಗಳು ಜನಪದ ಸಾಹಿತ್ಯದಲ್ಲಿ ಅಪಾರ ಪ್ರಮಾಣದಲ್ಲಿದೆ.

ಸಿಗ್ಮಂಡ್ ಫ್ರಾಯ್ಡ್ ಪುರಾಣಗಳು "ಅದುಮಿಟ್ಟ ಆಸೆಗಳ ವಸ್ತು ಕೂಡಾ ಎಂದು ವಾದಿಸುತ್ತಾರೆ. "ಪುರಾಣದ ಕಲ್ಪನೆ ಸಾಂಸ್ಕೃತಿಕ ಚರಿತ್ರೆಯನ್ನು ಆಧರಿಸಿದ್ದಲ್ಲ. ಮನುಷ್ಯನ ಚಿತ್ತ ಸ್ವಾತಂತ್ರ್ಯ ಇತಿಹಾಸಕ್ಕೆ ಅನೇಕವಾಗಿರುವುದಲ್ಲದೆ, ಅಲ್ಲಿ ಪುರಾಣ ಕಲ್ಪನೆಗಳು ಮೂಡುತ್ತವೆ ಎಂಬುದು ಆತನ ನಿಲುವು."[೧೫] ಈ ಹಿನ್ನೆಲೆಯಲ್ಲಿ ಪುರಾಣಗಳನ್ನು ಹಿಂದೂಪುರಾಣಗಳು, ಜಾನಪದ ಪುರಾಣಗಳು ಎಂದು ಸ್ಥೂಲವಾಗಿ ವಿಭಾಗಿಸಿಕೊಳ್ಳಬಹುದು.

ಹಿಂದೂಪುರಾಣಗಳು ಆಯಾ ಧರ್ಮದ ಸಂಸ್ಥಾಪನೆ ಪ್ರಕಾರ ಸ್ವಸಂರಕ್ಷಣೆಗೆ ಸಂಬಂಧಿಸಿವೆ. ಆದಿಯಿಂದಲೂ ವಿವಿದೋದ್ದೇಶಗಳಿಂದ ಹುಟ್ಟಿಕೊಂಡ ಶಾಸ್ತ್ರ ಗ್ರಂಥಗಳು ಇವು ಧರ್ಮ ರಕ್ಷಕವಚಗಳು, ಧರ್ಮಶ್ಲೋಕ ಕೈಪಿಡಿಗಳು ಹೌದು. ಪುರಾಣಗಳ ಕಥೆಗಳು ಜನಸಮಾನ್ಯರ ಕಥೆಗಳಾಗಿರದೆ, ಋಷಿಮುನಿಗಳಮಯವಾಗಿರುವುದು ಗಮನಾರ್ಹ. ಹಿಂದೂಗಳಲ್ಲಿ ೧೮ ಪುರಾಣಗಳಲ್ಲದೆ, ಇವುಗಳಲ್ಲಿ ಅನೇಕವು ಮತಧರ್ಮಗಳ ಅಂಧಕಾರಕ್ಕೆ ಸಿಕ್ಕು ಸಂಪೂರ್ಣವಾಗಿ ಬದಲಾಯಿಸಿಕೊಂಡಿವೆ. ಇಂತಹ ಹಿಂದೂಪುರಾಣಗಳಲ್ಲಿ ದೀವರು ಉಲ್ಲೇಖ ಕೂಡಾ ಇದೆ.

೧. "ವಿಶ್ವಂಭರ ನಾಭಿಯಲ್ಲಿ ಕಮಲ ಹುಟ್ಟಿತು. ಕಮಲದಲ್ಲಿ ಬ್ರಹ್ಮ ಹುಟ್ಟಿದ. ಬ್ರಾಹ್ಮನ ಮಾನಸಪುತ್ರವಾಗಿ ಅತ್ರಿಯು ಹುಟ್ಟಿದ ಸುರರನ್ನು ಗೆಲ್ಲಬೇಕೆಂಬ ಆಕಾಂಕ್ಷೆಯಿಂದ ಅಸುರರು ಘೋರ ತಪಸ್ಸು ಮಾಡಿದ ಕಾರಣ ಭೂಲೋಕದಲ್ಲಿ ಬಹುಕಾಲ ಮಳೆಯೇ ಆಗಲಿಲ್ಲ. ಅತ್ರಿ ಮಹರ್ಷಿ ತನ್ನ ತಂದೆಯ ಅಣತೆಯಂತೆ ಗೌಡ ಪಂಚಾಕ್ಷರಿ ಮಂತ್ರವನ್ನು ಜಪಿಸಿ ಈಚಲು, ನಾರಿಕೇಳ, ತಾಳೆ, ಖರ್ಜೂರ

ಭಗಿನಿ ಎಂಬ ಪಂಚವೃಕ್ಷವನ್ನು ಸೃಷ್ಟಿಸಿದನು."[೧೬]

೨. ಕೌಂಡಿನ್ಯ ಮಹರ್ಷಿಯು ತನ್ನ ತಂದೆಯ ಆಜ್ಞೆಯ ಪ್ರಕಾರ ಮತ್ತು ಮಂತ್ರಶಕ್ತಿಗಳ ಪ್ರಭಾವದಿಂದ ಭೂಲೋಕದಲ್ಲಿ ಪ್ರಥಮವಾಗಿ ಕಲ್ಪವೃಕ್ಷಗಳ ನಾರಿಕೇಳ ವೃಕ್ಷಗಳು, ಫಲವೃಕ್ಷಗಳು, ಮೂಲಿಕಾ, ಪುಷ್ಪಲತಾ ಎಂಬ ಪಂಚ ಗಿಡಮರಗಳನ್ನು ಸೃಷ್ಠಿಸಿದ. ಇದರಿಂದ ಭೂಲೋಕ ಮತ್ತು ದೇವಲೋಕ ವಾಸಿಗಳಿಗೆ ಆಹಾರ ಒದಗಿಸಿಕೊಟ್ಟಂತಾಯಿತು. ಕೌಂಡಿಣ್ಯ ಮಹರ್ಷಿಯು ಕೆಲವು ಕಾಲವಾದ ಮೇಲೆ ತನ್ನ ತಂದೆಯ ಆಜ್ಞೆಯಂತೆ ಬ್ರಾಹ್ಮಣ ಮನೆತನಕ್ಕೆ ಸೇರಿದ ಸುಮಂತ ಪ್ರದೇವ ಎಂಬ ದಂಪತಿಗಳಿಗೆ ಜನಿಸಿದ. ಮಾಯಾಕನ್ಯೆ ಎಂಬ ಕನ್ಯೆಯನ್ನು ಪ್ರಾಣಿಗ್ರಹಣ ಮಾಡಿಕೊಂಡು ಅನೇಕ ವರ್ಷಗಳ ಕಾಲ ಸುಖಸಂತೋಷಗಳಿಂದ ಕಾಲ ಕಳೆದರು.

ಅನಂತರ ಈ ದಂಪತಿಗಳಿಗೆ ದಿವ್ಯಜ್ಞಾನ ಸಂಪನ್ನರೂ, ತೇಜೋವಂತರು ಆದ ೧೪ ಮಂದಿ ಗಂಡುಮಕ್ಕಳು ಜನಿಸಿದರು. ಇವರೇ ಕ್ರಮವಾಗಿ ಕೌಂಡಿಣ್ಯ, ಆಧರ್ಮ, ವಾಮಕ್ಷ, ದೇವಾಶ್ರಯ ಎಂಬ ಹೆಸರುಗಳಲ್ಲಿ ಈ ನಾಲ್ವರು ಕೌಂಡಿನ್ಯ ಗೋತ್ರದವರಾದರು ಮತ್ತು ಈಡಿಗ ಜನಾಂಗದ ಮೂಲ ಪುರುಷರಾದರು.

ಕೆಲವು ವಿದ್ವಾಂಸರು ಮಹಾಭಾರತದ ರಚನಾಕಾರನಾದ ಮಹರ್ಷಿ ವೇದವ್ಯಾಸನೇ ಈಡಿಗರ ಮೂಲ ಪುರುಷನೆಂದು ಅಭಿಪ್ರಾಯಪಡುತ್ತಾರೆ. "ಗೋದಾವರಿ ಜಿಲ್ಲೆಯ ಬಳಿ ಇರುವ ಈಡಿಗರು ಪ್ರತಿವರ್ಷ ಆರಂಭದಲ್ಲಿ ವ್ಯಾಸನ ವಿಗ್ರಹಕ್ಕೆ ಕೋಳಿಯನ್ನು ಬಲಿಕೊಡುತ್ತಾರೆಂದು ಪ್ರತಿಮರದಲ್ಲಿ ಮೊದಲನೇ ಸೇಂದಿ ಇಳಿಸುವಾಗ ಅದರ ಕೊಂಚ ಭಾಗವನ್ನು ವಿಗ್ರಹಕ್ಕೆ ಅರ್ಪಿಸುತ್ತಾರೆಂದು ಹೇಳಲಾಗಿದೆ."[೧೭]

ವರ್ತಮಾನದ ಸಂಯೋಗದೊಂದಿಗೆ ನಿರಂತರ ವಿಕಾಸಶೀಲ ಪ್ರವೃತ್ತಿಯನ್ನು ರೂಢಿಸಿಕೊಳ್ಳುವ "ಪುರಾಣ ಪ್ರಜ್ಞೆ ೧೨ನೆಯ ಶತಮಾನದ ವಚನ ಕ್ರಾಂತಿಯ ನಂತರ ಮರುಸೃಷ್ಠಿಗೊಂಡಂತೆ ಕಾಣುತ್ತದೆ."[೧೮] ವಚನ ಚಳುವಳಿ ಮಾಡಿದ ಮೊದಲ ಕೆಲಸವೆಂದರೆ ಆದಿವಾಸಿಗಳ ದೈವಗಳನ್ನು ಮೊರ ದೈವ. ಮಡಿಕೆದೇವ ಎಂದೆಲ್ಲ ಮೂಲಧರ್ಮದ ನಿರಾಕರಣೆಯೊಂದಿಗೆ ಹೊಸ ಮೌಲ್ಯ ಕಲ್ಪನೆಯನ್ನು ಜಾರಿಗೆ ತಂದಿತು. ಆದರೆ ಈ ಸಂಘಟಿತ ವಚನ ಚಳುವಳಿ ಇನ್ನೊಂದು ಬಗೆಯಲ್ಲಿ ಸಾಂಸ್ಥಿಕ ಧರ್ಮವಾಗಿ ರೂಪಗೊಳ್ಳುವ ಮೂಲಕ ಈ ರೀತಿಯ ಸೃಷ್ಠಿ ಪುರಾಣಕ್ಕೆ ರೂಪ ಕೊಟ್ಟಿರಬೇಕೆನಿಸುತ್ತದೆ.

ಪಾರ್ವತಿ ಪರಮೇಶ್ವರರು ವಿಹಾರಕ್ಕೆ ಹೊರಟ್ಟಿದ್ದರು. ಅರಣ್ಯವೊಂದರಲ್ಲಿ ಅವರು ಹಾದುಹೋಗುತ್ತಿದ್ದಾಗ ಜಗನ್ಮಾತೆಗೆ ಬಾಯಾರಿಕೆಯಾಯಿತು. ಒಂದು ಹನಿ ನೀರು ದೊರಕುವಂತಹ ಸ್ಥಳವಲ್ಲ ಅದು. ಪಾರ್ವತಿಯ

ಕಣ್ಣಿಗೆ ಒಂದು ಈಚಲು ಮರಬಿತ್ತು. ಆ ಮರದ ನೀರು ಸಿಹಿಯಾಗಿರಬೇಕೆಂದೆನಿಸಿತು. ತನ್ನ ಇಚ್ಛೆಯನ್ನು ತನಗೆ ತಿಳಿಸಿದಳು. "ಬಣಜಿಗನೊಬ್ಬ ಬಳೆಗಳ ಸರಗಳನ್ನು ಹೆಗಲಮೇಲೆ ಹಾಕಿಕೊಂಡು ಹೋಗುತ್ತಿದ್ದನು. ನೋಡಿದ ಪರಮೇಶ್ವರ ಆ ಮರದಿಂದ ದ್ರವ ತೆಗೆಯುವಂತೆ ಸೂಚಿಸಿದ. ಆತ ಮರ ಹತ್ತಿ ಕರಡಿಗೆಯಲ್ಲಿ ದ್ರವವನ್ನು ತುಂಬಿ ತಂದು ಪಾರ್ವತಿಗೆ ಕೊಟ್ಟನು. ಅದರ ರುಚಿ ನೋಡಿ ಸುಪ್ರೀತಳಾದ "ಪಾರ್ವತಿ ಇದನ್ನೇ ಉದ್ಯೋಗವನ್ನಾಗಿ ಮಾಡಿಕೋ ಎಂದು ಹರಿಸಿದಳು."[೧೯] ಎಲ್ಲ ಮತಗಳಿಗೂ ಮೂಲವಾಗಿ ಯಾವುದಾದರೂ ಕಥೆ ಇರುವಂತೆ ಈಡಿಗರ ಮೂಲದ ಬಗೆಗೆ ಹೇಳಲಾಗುತ್ತಿರುವ ಕಥೆಯಿದು.

### ವೇದಗಳ ಕಾಲದಲ್ಲಿ ದೀವರು

ವೇದಗಳಲ್ಲಿ ಉಲ್ಲೇಖಿತರಾದ ಕೌಂಡಿನ್ಯ, ಕಾರುಣ್ಯ, ಕಮಂಡಲ ಮತ್ತು ಇತರ ಋಷಿಗಳು ತಾಳೆಗಿಡದಿಂದ ಸಿಹಿರಸವನ್ನು ಪಡೆಯಲು ಮಂತ್ರಶಕ್ತಿಯನ್ನು ಬಳಸುತ್ತಿದ್ದರು ಎಂದು ಹೇಳಲಾಗಿದೆ. ಆದ್ದರಿಂದ ಇವರೇ ಜನಾಂಗದ ಮೂಲಪುರುಷರು ಎಂದು ಅಭಿಪ್ರಾಯಕ್ಕೆ ಆಸ್ಪತವಾಗಿದೆ. ತಾಳೆಗಿಡದಿಂದ ರಸವನ್ನು ತೆಗೆದು ಸುರರಿಗೆ ಕೊಡುವ ಪದ್ಧತಿ ರೂಢಿಯಲ್ಲಿದ್ದಂತೆ ತೋರುತ್ತದೆ. ಈ ರಸವು ಸಿಹಿಯಾಗಿದ್ದು, ಕುಡಿದ ನಂತರ ಅಮಲು ತರುತ್ತಿತ್ತು ಎಂದು ಹೇಳಲಾಗಿದೆ.

ಅಮಲಿನ ಪೇಯಗಳ ಸೇವೆಗೆ ಪ್ರಾಚೀನ ಸಾಹಿತ್ಯಗಳಲ್ಲ ಕೂಡ ಪ್ರಸ್ತಾಪವಾಗಿದೆ. ಭಾರತೀಯ ಮತ್ತು ಪಾಶ್ಚಾತ್ಯ, ಪ್ರಾಚೀನ ಸಾಹಿತ್ಯಗಳಲ್ಲಿ ಆಗಿರುವ ಉಲ್ಲೇಖಗಳನ್ನು ಗಮನಿಸಿದರೆ ಸಸ್ಯಗಳಿಂದ ಆರೋಗ್ಯಕರವೂ, ಉತ್ತೇಜನಕಾರಿಯೂ ಆದ ಪೇಯವನ್ನು ವಿಶಿಷ್ಟ ಕಲಾವಂತಿಕೆಯ ಮೂಲಕ ತೆಗೆಯುವ "ಈಡಿಗ ಸಮುದಾಯ ಪುರಾಣ, ಇತಿಹಾಸಗಳ ಕಾಲದಲ್ಲಿ ಕೃಷಿ ವೃತ್ತಿವುಳ್ಳವರು ಆಗಿದ್ದರು ಎಂಬುದು ಸ್ಪಷ್ಟವಾಗಿದೆ."[೨೧]

**ಬಿಲ್ಲವರು :** 'ಬಿಲ್ಲವ' ಎಂಬ ಈ ಶಬ್ದದ ಅರ್ಥವ್ಯಾಪ್ತಿಯನ್ನು ಗಮನಿಸಿದಾಗ 'ಬಿಲ್ಲಾಳು' ಎಂಬುದನ್ನು ಧ್ವನಿಸುತ್ತದೆ. ಬಿಲ್ಲಾಳು ಎಂದರೆ ಬಿಲ್ಲನ್ನು ಧರಿಸಿದವ ಬಿಲ್ಲಿನ ಮೂಲಕ ಬಾಣ ಪ್ರಯೋಗ ಮಾಡುವವ. ವೀರ- ಧೀರ-ಶೂರ ಎಂಬುದು ತಾತ್ಪರ್ಯ. ಶ್ರದ್ಧೆ, ನಿಷ್ಠೆ, ಏಕಾಗ್ರತೆಗಳುಳ್ಳ ಒಬ್ಬ 'ವೀರ ಯೋಧ' ಎಂಬುದು ಈ ಪದದ ಸೂಚ್ಯವಾದ ಅರ್ಥ. ವೀರತನವೆಂಬುದು ಪರಾಕ್ರಮದ ಸಂಕೇತ.

ಕೆಚ್ಚು, ಎದೆಗಾರಿಕೆ, ಕಟ್ಟಾಳುತನದ ಪ್ರತೀಕ. ಇವೆಲ್ಲವನ್ನು ಮೈಗೂಡಿಸಿಕೊಂಡವರೇ ಕೋಟಿ ಚನ್ನಯ್ಯರು. ಇವರೇ ಬಿಲ್ಲವರ ಮೂಲಪುರುಷರು ಎಂದು ತಿಳಿಯಬಹುದಾಗಿದೆ.

## ಜನಪದ ಪುರಾಣಗಳಲ್ಲಿ ದೀವರು

ಜನಪದ ಕಥೆಗಳು ಪುರಾಣಗಳಿಗೆ ಪ್ರೇರಕ ಎಂಬುದು ಥಾಮಸ್ಸನ ಅಭಿಪ್ರಾಯ. ಶಿಷ್ಟ ಪುರಾಣಗಳು ಧಾರ್ಮಿಕ ಚೌಕಟ್ಟಿನಲ್ಲಿ ಬಂಧಿತವಾಗಿದ್ದರೆ, ಜಾನಪದ ಪುರಾಣಗಳು ಜನಾಂಗೀಯ ನೆಲೆಗಳನ್ನು ಹೊಂದಿವೆ. ಇವು ಉದ್ದೇಶಪೂರ್ವಕವಾಗಿ ತಿದ್ದುಪಡೆಗೆ ಒಳಗಾಗದ ಮನೋಭಿತ್ತಿಯ ಸ್ಮೃತಿ ಕಥೆಗಳು. ಆದರೆ ಆಯಾ ಕಾಲದ ಸಾರ್ವತ್ರಿಕ ಜೀವನ ಮೌಲ್ಯಕ್ಕೆ ಪುನರ್ ವಿಮರ್ಶೆ ನೀಡುವ ಗುಣವನ್ನು ಅಂತರ್ಗತಗೊಳಿಸಿಕೊಂಡಿರುತ್ತವೆ. ವಾಸ್ತವದಲ್ಲಿ ಈ ರೀತಿಯ ಶಿಷ್ಟ ಹಾಗೂ ಜಾನಪದ ಎಂದು ವಿಭಾಗಿಸಿಕೊಳ್ಳುವುದು ಸಹ ಒಂದು ರೀತಿಯಲ್ಲಿ ಕಷ್ಟವೇ ಇವೆರೆಡು ಒಂದೇ ಪರಂಪರೆಯಲ್ಲಿ ಅಂತರ್ಗತವಾದ ಭಿನ್ನ ತಾತ್ವಿಕ ಧಾರೆಗಳೇ ವಿನಃ ಧೃವಸಮಾನ ದೂರದ ದ್ವೀಪಗಳಲ್ಲ. ಇವು ಒಂದರಿಂದ ಇನ್ನೊಂದು ಅಭಿವೃದ್ಧಿಗೊಂಡದ್ದು ಅಷ್ಟೇ.

"ಒಂದು ದಿನ ಭೂಮಂಡಲದಲ್ಲಿ ಮನುಷ್ಯರ ಪಾಪ ಜಾಸ್ತಿ ಆದಾಗ ಮಳೆ ಬರಲು ಪ್ರಾರಂಭವಾಯಿತು. ಇಡೀ ಜಗವೇ ಧಾರಾಕಾರವಾದ ಮಳೆಯಿಂದ ತುಂಬಿದಾಗ, ಅಣ್ಣ ತಂಗಿಯರಿಬ್ಬರು ಅಳುತ್ತಾ ಕುಳಿತರು. ಮನೆಗಳೆಲ್ಲ ಕುಸಿದು ಬೀಳಲು ಪ್ರಾರಂಭಿಸಿದವು. ಮತ್ತೆ ಸ್ವಲ್ಪ ಸಮಯದ ನಂತರ ಬೆಂಕಿ ಮಳೆ ಬೀಳಲು ಪ್ರಾರಂಭವಾಯಿತು. ಮಳೆಯ ನೀರಿನಲ್ಲಿದ್ದ ಕಾರೇಡಿ ತೇಲಿಕೊಂಡು ಬಂದು ನನ್ನ ಹೊಟ್ಟೆಯೊಳಗೆ ಅವಿತುಕೊಳ್ಳಿರಿ ಅಂತ ಹೇಳಿತು. ಆಗ ಅವರಿಬ್ಬರು ಹಾಗೆ ಮಾಡಿದರು. ಬೆಂಕಿ ಮಳೆ ಸುರಿದು ನಿಂತ ಮೇಲೆ ಕಾರೇಡಿ ಅವರನ್ನು ಹೊರಗೆ ಬಿಟ್ಟಿತು. ಇಡೀ ಜಗತ್ತೆಲ್ಲಾ ಸುಟ್ಟು ಭಸ್ಮವಾಗಿತ್ತು. ಎಲ್ಲಿ ನೋಡಿದರೂ ನೀರೇ ನೀರು. ಆಗ ಶಿವ ಮೇಲಿಂದ ಇಳಿದು ಬಂದು ನೀವಿಬ್ರು ಗಂಡಹೆಂಡತಿಯಾಗಿ ಲೋಕ ಉದ್ಧಾರ ಮಾಡ್ರಿ ಅಂತ ಹರಕೆ ಮಾಡಿದನು. ಆದರೂ ಮನುಷ್ಯ ಕಾರೇಡಿಯನ್ನು ತಿನ್ನುತ್ತಾನೆ. ಈಗ್ಲೂ ಕಾರೇಡಿ ಸುಟ್ಟಾಗ ಸುಯಿ, ಸುಟ್ ಅನ್ನ ಶಬ್ದ ಬರುತ್ತದೆ. ಅಟೆಂದರೆ ಬದುಕಿಸಿದ ನನ್ನನ್ನು ಸುಟ್ಟು ತಿನ್ನುತ್ತಾರಲ್ಲಾ ಅಂತ ಶಾಪ ಹಾಕುತ್ತದೆ. ಈಗಲೂ ಕಾರೇಡಿ ಮೈ ಸುಟ್ಟಂಗೆ ಇರುತ್ತದೆ. ಜಾನಪದ ಸೃಷ್ಟಿ ಪುರಾಣಗಳು ಕೂಡಾ ಇದನ್ನೇ ಸಮರ್ಥಿಸುತ್ತವೆ.

ಪರಿಸರದ ಜೊತೆಗೆ ನಿಕಟಸಂಬಂಧ ಹೊಂದಿದ ಮನುಷ್ಯ ಮಳೆ-ಬೆಂಕಿ ಬಿಸಿಲುಗಳ ಬಗ್ಗೆ ಭಯ ಪ್ರೇರಿತ ಗೌರವ ಮತ್ತು ಅದನ್ನು ದೈವತ್ವಕ್ಕೇರಿಸುವ ಪ್ರಯತ್ನ ಮಾಡಿದ್ದಾನೆ. ಇದು ಮನುಷ್ಯನ ಮಹತ್ವಕಾಂಕ್ಷೆಯ ಅನನ್ಯ ರೂಪವಾಗಿ ಗೋಚರಿಸುತ್ತವೆ. ದೀವರಲ್ಲಿ ಮತ್ತೊಂದು ವಿಶೇಷವೆಂದರೆ ನೀರು

ಹಾಗೂ ನೀರಿನ ಮೇಲೆ ನಿಂತ ಸೃಷ್ಟಿ ಪುರಾಣ ದೀವರನ್ನು ನೀರಿನ ಜೊತೆಗೆ ವಿಕಾಸದ ಮೂಲ ನೆಲೆಗೆ ಕರೆದುಕೊಂಡು ಹೋಗುತ್ತದೆ. ಅಂದರೆ ದೀವರು ಮೀನುಗಾರರು ಅಥವಾ ದ್ವೀಪವಾಸಿಗಳೇ ಆಗಿರಬೇಕು ಎಂಬುದಕ್ಕೆ ಇನ್ನಷ್ಟು ಸಾಕ್ಷಿ ಒದಗಿಸುತ್ತದೆ. ಅಣ್ಣ ತಂಗಿಯಂತಹ ಸಂಬಂಧಗಳು ಸಾಮಾನ್ಯ ಮನುಷ್ಯನ ಸಂಕೀರ್ಣತೆಗಳೆಂದು ಮಾನವ ಶಾಸ್ತ್ರಜ್ಞರು ಗುರುತಿಸಿದ್ದಾರೆ. ಆ ಬ್ರಹ್ಮನೇ ತನ್ನ ಮಗಳ ಜೊತೆ ಸಂಸಾರ ಮಾಡಿರುವಾಗ ಈ ರೀತಿಯ ಯೋಚನೆ ಜನಪದರಿಗೆ ಅಷ್ಟು ಜಟಿಲವಾಗಿರಲಿಕ್ಕಿಲ್ಲ ಅನ್ನಿಸುತ್ತದೆ. ಅಧೀನ ಸಮುದಾಯದೊಳಗೆ ಸೃಷ್ಟಿಯಾಗುವ ಈ ಚೈತನ್ಯಶೀಲ ವಾಗ್ರೂಪಿಗಳ ಧಾರಣತ್ವ ಅತ್ಯಂತ ಗಟ್ಟಿಯಾದುದು ಹಾಗೂ ಇವರ ಜೀವಂತ ಬದುಕಿನ ವಿಶಿಷ್ಟ ಆಯಾಮಗಳ ವಿವೇಚನೆಯೂ ಬರಿ ಒಣ ಪುರಾಣವಾಗಿ ಮಾತ್ರವೇ ಕಂಗೊಳಿಸದೇ ಒಂದು ಸೃಷ್ಟಿಶೀಲ ಸೃಜನಾತ್ಮಕ ಬದುಕಿನ ಅನಾವರಣವಾಗಿ ಕಂಡುಬರುತ್ತದೆ ಎಂದರೆ ತಪ್ಪಾಗಲಿಕ್ಕಿಲ್ಲ.

## ಇತಿಹಾಸದಲ್ಲಿ ದೀವರು

"ಇತಿಹಾಸ ಎಂದರೆ ಮಾನವನ ಆಡಳಿತದ ರೀತಿ-ನೀತಿಗಳ ದಾಖಲೆ"[೨೨] ಎಂದು ಪ್ರಸ್ತಾಪಿಸಲಾಗಿದೆ. ಅಂದರೆ ಆ ಕಾಲಘಟ್ಟದ ಆಡಳಿತ ಪದ್ಧತಿ, ರಾಜರ ವಂಶಾವಳಿ, ರಾಜಾಶ್ರಯದಲ್ಲಿರುವ ಸೈನಿಕರು, ಧೀರರು, ವೀರರ ಹೋರಾಟ ಎಂದೆಲ್ಲ ಕರೆಯಬಹುದೇನೋ, ಆದರೂ ಮತ್ತೊಂದು ನೆಲೆಯಲ್ಲಿ ಚರಿತ್ರೆ ಎಂದರೆ "ಗತಕಾಲದ ಘಟನಾವಳಿಗಳನ್ನು ಮರುಕಳಿಸುವ ಒಂದು ಸ್ಮರಣ ಸಂಚಿಕೆ ಆಗಿದೆ".[೨೩]

ಗತಕಾಲವನ್ನು ಸರಿಯಾಗಿ ಮನವರಿಕೆ ಮಾಡಿಕೊಂಡಾಗ ವರ್ತಮಾನದ ಪ್ರಯೋಜನ ಏನು ಎಂಬುದನ್ನು ಪ್ರಶ್ನಿಸಲು ಸಹಜವಾಗಿರುತ್ತದೆ. "ಗತದ ಶೋಧನೆ ಎಂದರೆ ಮಾನವ ಚರಿತ್ರೆಯಲ್ಲಿ ದುಡಿವ ಮತ್ತು ದುಡಿಸುವವರ ವ್ಯತ್ಯಾಸಗಳ ಸೃಷ್ಟಿ ಆಳುವ ವರ್ಗದ ಹಿತಸಾಧಿಸುವ ಆಧ್ಯಾತ್ಮವಾದ ಹುಟ್ಟುವುದಕ್ಕಿಂತ ಮೊದಲು ಮಾನವ ಹೇಗಿದ್ದ ಹಾಗೇನೇ ಭವಿಷ್ಯದಲ್ಲಿ ಕೂಡಾ ತುಳಿತವಿಲ್ಲದೆ ಹೇಗೆ ಬದುಕಬಹುದು ಎಂಬುದನ್ನು ತಿಳಿಸುತ್ತದೆ."[೨೪] ಆ ಮೂಲಕ ಇಲ್ಲಿ ಮನುಕುಲದ ಚರಿತ್ರೆಯ ಮೂಲ ಹೊಳವುಗಳು ಸಿಂಹಾವಲೋಕನ ನೆಡೆಸುತ್ತದೆ.

ಪ್ರಖ್ಯಾತ ಇತಿಹಾಸಕಾರ್ತಿ ರೊಮಿಲಾಥಾಫರ್ "ಜನ ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಇತರೆ ಲಕ್ಷಣಗಳ ಬೆಳಕಿನಲ್ಲಿ ರಾಜಕೀಯ ಇತಿಹಾಸ ಮತ್ತು ಚಾರಿತ್ರಿಕ ವ್ಯಾಖ್ಯಾನಗಳನ್ನು ಕಂಡುಕೊಳ್ಳಬೇಕಾಗಿದೆ. ರಾಜಕೀಯ ವಿನ್ಯಾಸದಲ್ಲಿ ಆಗುವ ಬದಲಾವಣೆಗಳು ತೀವ್ರ ಸಂಬಂಧವನ್ನು ಪಡೆದಿರುತ್ತವೆ. ಇದರ ಪರಿಣಾಮ ಸಾಮಾಜಿಕ ಸಂಬಂಧಗಳ ಮೇಲೆ ಇರುತ್ತದೆ."[೨೫]

ಬನವಾಸಿಯ ಕದಂಬರರು ದೀವರಿರಬಹುದೆಂದು ಅನುಮಾನಗಳಿವೆ. ಕದಂಬ ಎಂದರೆ ಈಚಲು

ಮರವಾಗಿದ್ದು ಅದರಿಂದ ಅದರ ಉಗಮವಾಯಿತೆಂದು ಐತಿಹ್ಯವಿರುವುದರಿಂದ ಹಾಗೆ ನಂಬಬಹುದು. ಬನವಾಸಿಯ ಸುತ್ತಮುತ್ತ ದೀವರು ಇರುವುದರಿಂದ ಇದು ಸಮರ್ಥನೀಯವಾಗಿದೆ. ಇದು ಇನ್ನೂ ಶೋಧನಾರ್ಹವಾದ ಸಂಗತಿ.

"ಕೆಳದಿ ರಾಜ್ಯ ೧೪೯೭ರಲ್ಲಿ ಚೌಡಪ್ಪ ಹಾಗೂ ಭದ್ರಪ್ಪ ಗೌಡರಿಂದ ಪ್ರಾರಂಭವಾದುದೆಂಬುದು ತಿಳಿದ ವಿಷಯ. ಇವರು ಮೂಲತಃ ರೈತರು. ಈ ರೈತರು ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ಹೊಸಗನರಗಳಲ್ಲಿರುವ ದೀವರ ಜನಾಂಗದವರು ಕೆಳದಿ ರಾಜ್ಯ ಹರಡಿದ್ದು ಹೆಚ್ಚು ಈ ಭಾಗದಲ್ಲಿ ಎಂದು ತಿಳಿಯಲಾಗಿದೆ.[೨೬]

"ದೀವರಲ್ಲಿ ಚಾಡಮಾರ್ಯ, ಮಾಸ್ತ್ಯ ಎಂಬ ಹೆಸರುಗಳು ಸ್ಪಷ್ಟವಾಗಿ ಕಾಣಿಸುತ್ತವೆ."[೨೭] ಕೆಳದಿ ಶಿವಪ್ಪನಾಯಕ ದೀವರನೆಂದು ನಂತರ ವೀರಶೈವ ಧರ್ಮವನ್ನು ಸ್ವೀಕರಿಸಿದನೆಂದು ಇತಿಹಾಸಕಾರರು ಉಲ್ಲೇಖಿಸಿದ ಸಂಗತಿ ವಿವಾದದಲ್ಲಿದೆ. "ವಿಜಯನಗರದ ಪ್ರಖ್ಯಾತ ರಾಜಕೃಷ್ಣದೇವರಾಯನ ತಂದೆ ಹಳೆಪೈಕ ಜಾತಿಗೆ ಸೇರಿದವನೆಂದು ತರ್ಕಿಸಲಾಗಿದೆ.[೨೮] ಕೃಷ್ಣದೇವರಾಯನು ತುಳುವಂಶಕ್ಕೆ ಸೇರಿದವನಾಗಿದ್ದು, ತುಳುವ ಎಂಬುದು ಬಿಲ್ಲವಕ್ಕೆ ಸಂವಾದಿಯಾಗಿರುವ ಸಾಧ್ಯತೆ ಇದೆ.

"ವಿಜಯನಗರವನ್ನು ಗೋಪಾಲಕೃಷ್ಣರಾಯ ಅರಸರು ರಾಜ್ಯವಾಳುತ್ತಿರುವಾಗ ರಾಜಧಾನಿ ಪಕ್ಕ ಕುಮಾರಪಟ್ಟಣವೆಂಬ ಒಂದು ಕ್ಷೇತ್ರವಿದ್ದು, ಅದರಲ್ಲಿ ನಾರಾಯಣನೆಂಬ ಮುಖಂಡನು ಅರಸನ ಸೇನೆಯಲ್ಲಿದ್ದನು. ವಿಜಯನಗರದ ಅರಸರು ಗೋವೆ, ಉತ್ತರ ಕನ್ನಡವನ್ನು ಆವರಿಸುವಾಗ ಅಲ್ಲಿ ನಾರಾಯಣನೇ ನಾಯಕತ್ವ ವಹಿಸಿದ್ದರಿಂದ ಆ ಜನಾಂಗ ನೆಲೆಯೂರಿತು ಎಂದು ಕುಮಾರ ಪೈಕರ ಬಗ್ಗೆ ಪ್ರಸ್ತಾಪಿಸಲಾಗಿದೆ."

"ಕಂಠೀರವ ನರಸರಾಜ ವಿಜಯದಲ್ಲಿ ಹಳೆಪೈಕರು ಭೂತಳ ನಡುಗಿಸಿದವರಾಗಿ ರೋಮಾಂಚನಗೊಳಿಸುತ್ತಾರೆ."[೨೯]

"ಸಿಂಹಳವನ್ನು ಆಳುತ್ತಿದ್ದ ಇಳಾ ಮಹಾರಾಜನ ವಂಶಿಕರೇ ಈಳಿಗರು ಅಥವಾ ಈಡಿಗರು ಕೆಲವು ಸ್ಥಿತ್ಯಂತರಗಳ ಫಲವಾಗಿ ಮುಂದೆ ಅವರು ಮಲಬಾರಾಂಧ್ರ ಕರ್ನಾಟಕಗಳಲ್ಲಿ ಪಸರಿಸಿದರು ಎಂದು ತಮಿಳು ಪುರಾಣವೊಂದರಲ್ಲಿ ಈ ಮಾಹಿತಿ ಸಿಗುತ್ತದೆ."[೩೦]

ಕಾಸರಗೋಡ ತಿಮ್ಮಣ್ಣನಾಯಕ ಕೆಳದಿಯ ಚೆನ್ನಮ್ಮನ ಸೇನೆಯಲ್ಲಿದ್ದ ಐತಿಹಾಸಿಕ ವ್ಯಕ್ತಿ. ತಿಮ್ಮಣ್ಣ ನಾಯಕನು ದೀವತಿಯ ಮಗನಾಗಿದ್ದು, ವಿಜಾಪುರದ ಆದಿಲ್‌ಷಾಹಿ ದಂಡು ಅಂಕೋಲೆಯ ಕೋಟೆಯನ್ನು

ಗೆದ್ದುಕೊಂಡು ಮಿರ್ಜಾನ ಕೋಟೆಗೆ ಮುತ್ತಿಗೆ ಹಾಕಿದಾಗ ಕೆಳದಿಯ ಚನ್ನಮ್ಮಾಜಿಗೆ ಇದು ಗೊತ್ತಾಗಿ, ತಿಮ್ಮಣ್ಣ ನಾಯಕನಿದ್ದಲ್ಲಿಗೆ ಹೋಗಿ ಯುದ್ಧಕ್ಕೆ ಪ್ರೇರೇಪಿಸುತ್ತಾಳೆ. ದಾಸನ ವೇಷ ಧರಿಸಿ ಪಂಚಪಾಲರ ದಂಡಿನ ಕಡೆಗೆ ಹೊರಟ ತಿಮ್ಮಣ್ಣನಾಯಕನು ಅವರ ಮೇಲೆರಗಿ ಅವರ ಚಾವಡಿಯನ್ನೇ ಸುಟ್ಟು ಸೆರೆಹಿಡಿಯುತ್ತಾನೆ. ಈ ಕಾಸರಗೋಡ ತಿಮ್ಮಣ್ಣನಾಯಕನು ಹೆಂಡವನ್ನು ತೆಗೆಯುವ ಮನುಷ್ಯನಾಗಿದ್ದನೆಂದು (Toddy Man) ಡಾ. ಜೋನ್ ಫ್ರಾಯರ್ ಎಂಬ ವಿದ್ವಾಂಸ ಅಭಿಪ್ರಾಯಪಟ್ಟಿದ್ದಾರೆ.

ಪ್ರಾಯಶಃ ಈ ಶ್ರೀಲಂಕಾ ಸಂಬಂಧ, ದ್ವೀಪವಾಸಿಗಳು ಎನ್ನುವುದಕ್ಕೆ ಹೆಚ್ಚಾಗಿ ಹೋಲಿಕೆಯಿದ್ದು, "ದೀವರು ಹಾಗೂ ನೀರಿನ ನಿಕಟ ಸಂಬಂಧವು ಹಬ್ಬಗಳಲ್ಲೆಲ್ಲ ಧ್ವನಿಸಿದ್ದು"[೬೦] ಆ ಕಾರಣದಿಂದಲೇ ನೀರನ್ನು ಪಾವಿತ್ರತೆಯಿಂದ ನೋಡುವುದಕ್ಕೆ ಇದು ಸಾಧ್ಯವಾಗಿದೆ.

ಮಲೆನಾಡಿನ ದೀವರು ವಾಸವಾಗಿರುವ ಬಹುತೇಕ ಹಳ್ಳಿಗಳಲ್ಲಿ ದೀವರ ಚಾರಿತ್ರಿಕ ನೆಲೆಗಳಲ್ಲಿ ಕುಮಾರರಾಮನೊಂದಿಗೆ ಸಂಬಂಧ ತುಂಬಾ ಮುಖ್ಯವಾಗಿದೆ. ವಿಜಯನಗರಪೂರ್ವದಿಂದಲೂ ದೀವರು ಹೊಂದಿರುವ ಪ್ರಾದೇಶಿಕ, ಆಡಳಿತಾತ್ಮಕ, ಸಾಂಸ್ಕೃತಿಕ ಮತ್ತು ಕೌಟುಂಬಿಕ ಸಂಬಂಧಗಳು ಇದರಿಂದ ವೇದ್ಯವಾಗುತ್ತವೆ.

## ಐತಿಹ್ಯಗಳಲ್ಲಿ ದೀವರು

ಇಂಗ್ಲೀಷಿನ Legend ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಐತಿಹ್ಯ' ಪದ ರೂಪಗೊಂಡಿದೆ. ಮದ್ಯಕಾಲೀನದಲ್ಲಿ ಈ ಲ್ಯಾಟಿನ್ ಪದ Leger, Legend ಪಠಿಸುವಂತಹದ್ದು ಎಂದಾಗಿದೆ. ನಂತರ ಇದು ಪರಂಪರೆಯಿಂದ ಬಂದಿದ್ದು ಎಂಬ ವಿಶಾಲ ಅರ್ಥದಲ್ಲಿ ಬಳಕೆಯಾಗತೊಡಗಿತು. ಹಾಗೆಯೇ ಐತಿಹ್ಯಗಳು ಸ್ಮೃತಿ ಚರಿತ್ರೆಯಾಗಿದೆ.

೧. ಉತ್ತರ ಕರ್ನಾಟಕದ ದೋಣಿ ನದಿಯ ದಂಡೆಯ ಮೇಲೆ ಏಳು ಜನ ಅಣ್ಣತಮ್ಮಂದಿರು ಕುಟುಂಬವೊಂದಿರುತ್ತದೆ. ಇದು ದೀವರ ಕುಟುಂಬ ಅವರಿಗೆ ಒಬ್ಬಳೆ ತಂಗಿ ಒಂದು ದಿನ ಹೋರಿ ಕರುವೊಂದು ಕೊಟ್ಟಿಗೆಯಿಂದ ಕಣ್ಣಿ ಕಳಚಿಕೊಂಡು ಓಡತೊಡಗುತ್ತದೆ. ಆ ಹೆಣ್ಣುಮಗಳು ಕಣ್ಣಿಯನ್ನು ಮರೆತು ಹಿಡಿಯಲು ಓಡುತ್ತಾಳೆ, ತನ್ನ ನೀಳ ಕೂದಲಿನಿಂದ ಕರುವನ್ನು ಕಟ್ಟಿಕೊಂಡು ಬರುತ್ತಿರುತ್ತಾಳೆ, ಅದನ್ನು ಅಲ್ಲಿಯ ಪಾಳೆಗಾರನೊಬ್ಬ ನೋಡಿ ಅವಳ ಸೌಂದರ್ಯಕ್ಕೆ ಮಾರಿಹೋಗಿ ತನಗೆ ಮದುವೆ ಮಾಡಿಕೊಡುವಂತೆ, ಒತ್ತಡ ಹೇರುತ್ತಾನೆ. ಆಗ ಅನಿವಾರ್ಯವಾಗಿ ಅಣ್ಣತಮ್ಮಂದಿರು ತಪ್ಪಿಸಿಕೊಂಡು ಮಲೆನಾಡಿನಲ್ಲಿ ನೆಲೆಸಿದರು.

೨. ಎರಡು ಜನ ಅಣ್ಣತಮ್ಮಂದಿರಿದ್ದರು. ಅಣ್ಣ ಅತ್ಯಂತ ಸಂಪನ್ನನಾಗಿದ್ದ ತಮ್ಮ ಸ್ವಲ್ಪ ತುಂಟನಾಗಿದ್ದ ಮತ್ತು ಹುಂಬನಾಗಿದ್ದ, ಜೊತೆಗೆ ಕೆಟ್ಟ ಕೆಲಸಕಾರ್ಯ ಮಾಡುತ್ತಿದ್ದನು. ಅಣ್ಣ ತಮ್ಮನಿಗೆ ಸೂಕ್ಷ್ಮವಾಗಿ ಬುದ್ಧಿ ಹೇಳಿದ. ಆದರೂ ತಮ್ಮ ಕೇಳಲಿಲ್ಲ. ಒಂದು ದಿನ ಒಂದೇ ಬಾಳೆಎಲೆಯಲ್ಲಿ ಇಬ್ಬರು ಊಟಕ್ಕೆ ಕುಂತರು. ಅಣ್ಣ. ತಮ್ಮನಿಗೆ ಗೊತ್ತಿಲ್ಲದಂತೆ ದಿಂಡಿನ ಮೇಲೆ ನೀರು ಬಿಡತೊಡಗಿದ. ತಮ್ಮ ಹುಂಬನಾಗಿದ್ದರಿಂದ ಇದು ಗೊತ್ತಾಗಲಿಲ್ಲ. ನೀರು ಹರಿಯುತ್ತಾ ಹರಿಯುತ್ತಾ ದೊಡ್ಡದಾಗುತ್ತಾ ಹೋಯಿತು. ತಮ್ಮ ಒಂದು ಕಡೆ, ಅಣ್ಣ ಒಂದು ಕಡೆ, ತಮ್ಮ ಭಯದಿಂದ ಅಂಗಲಾಚತೊಡಗಿದ. ಅಣ್ಣನು ಆಗ ತಮ್ಮನಿಗೆ ನನ್ನ ದಾರಿ ಬೇರೆ, ನಿನ್ನ ದಾರಿ ಬೇರೆ ಯಾವಾಗ ನೀನು ನನ್ನಂತಾಗುತ್ತೀಯೋ ಆಗ ನನ್ನ ಜೊತೆಗೆ ಬಾ ಎಂದು ಹೇಳಿ ಓಡಿಹೋಗಿ ಅಡಿಕೆ ಮರವನ್ನು ತಬ್ಬಿಕೊಂಡ. ತಮ್ಮ ಓಡಿಹೋಗಿ ಬಗನೆಮರ ತಬ್ಬಿಕೊಂಡ. ಅಣ್ಣ ಹೊಳೆದಾಟಿ ಬ್ರಾಹ್ಮಣನಾದ ತಮ್ಮ ಇಲ್ಲಿಯೇ ಉಳಿದು ದೀವನಾದ ಎಂಬ ಐತಿಹ್ಯ ಹೊಂದಿದೆ.

**ಅಡಿಟಿಪ್ಪಣಿಗಳು**

೧. ಗಣಪತಿ ಮಡೆನೂರು., ಈಡಿಗ ಸಮಾವೇಶ, ಪು. ೭೮

೨. ಅದೇ., ಪು. ೪೪

೩. ರೋಹಿದಾಸ್., ನಾವುಯಾರು, ಪು. ೪೮

೪. ಬೋರಲಿಂಗಯ್ಯ ಹಿ.ಚಿ., ಹುಚ್ಚಪ್ಪ ಮಾಸ್ತರ್ ಎನ್. ಕಾಗೋಡು ಚಳುವಳಿ ಸುವರ್ಣ ಸಂಪುಟ, ಪು. ೩೮

೫. ವಿಷ್ಣುನಾಯಕ., ಅಂಕೋಲ, ನಾಮಧಾರಿಗಳು, ಪು. ೮೬

೬. ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಪು. ೧೩೯

೭. ಗಣಪತಿ ಮಡೆನೂರು., ಆರ್ಯ ಈಡಿಗ ಸಮಾವೇಶ, ಪು. ೮೪

೮. ಡಿಸೋಜಾ. ನಾ., ಕ್ಷೇತ್ರಕಾರ್ಯ ಮಾಹಿತಿ,

೯. ಮಧುಗಣಪತಿರಾವ್. ಮಡೆನೂರು., ಈಡಿಗ ಜನಾಂಗ ಒಂದು ಅಧ್ಯಯನ, ಪು. ೭೮

೧೦. ರಾಮಯ್ಯ ಎಂ.ಆರ್., ಕರ್ನಾಟಕ ಪ್ರದೇಶ, ಆರ್ಯಈಡಿಗ ಸಂಘ ನಡೆದುಬಂದ ದಾರಿ, ಪು. ೪೪

೧೧. ಹೆಚ್. ಗಣಪತಿಯವರ ಕರಪತ್ರ., ೮.೨.೯೫.

೧೨. ಲಿಡೋವಿಕಾ-ದಿ -ವ್ಯಕ್ತಿಮಾ ಪ್ರವಾಸಿ ಕಂಡ ಇಂಡಿಯಾ ಸಂ.೪. ಪು. ೧೯

೧೩. ಅದೇ., ಪು. ೨೫

೧೪. ಗಂಗಾಧರ ದೈವಜ್ಞ., (೨೦೦೦),ಬುಡಕಟ್ಟು ಸಮಾಜ, ಪು. ೨

೧೫. ಬೋರಲಿಂಗಯ್ಯ ಹಿ.ಚಿ., (೨೦೦೧), ಸ್ಮೃತಿ- ವಿಸ್ಮೃತಿ, ಪು. ೧೪೦

೧೬. ಲಕ್ಷ್ಮಣ ಕೊಡಸೆ., ಈಡಿಗ ಜನಾಂಗ ಇತಿಹಾಸ ಒಂದು ನೋಟ, ಪು. ೨೮

೧೭. ರೋಹಿದಾಸ್ ನಾಯಕ., ನಾವು ಯಾರು, ಪು. ೪೮-೪೯

೧೮. ಪಣೀಂದರ್ ದೇವ್., ದಾರು ಪ್ರತಿಮಾ ನಾಪೂಜ್ಯವೇ ಹಿನ್ನುಡಿ, ಪು. ೧೧೩

೧೯. ಲಕ್ಷ್ಮಣ ಕೊಡಸೆ., ಮೇಲಿನದೇ, ಪು. ೨೬

೨೦. ಮಧುಗಣಪತಿರಾವ್ ಮಡೆನೂರು., ಈಡಿಗ ಜನಾಂಗ ಒಂದು ಅಧ್ಯಯನ., ಪು. ೨೪

೨೧. ಸಂಸ್ಥಾಪಕರ ದಿನಾಚರಣೆ, ಸ್ಮರಣ ಸಂಚಿಕೆ, ಪು. ೩೧

೨೨. ಜಾನಪದ ಮತ್ತು ಪೂರಕ ಕ್ಷೇತ್ರಗಳು (೧೯೯೯) ಪು. ೯೯

೨೩. ಪರಿಣಿತ ಬಿ.ಆರ್., ಇತಿಹಾಸ, ಪು. ೭

೨೪. ದೇವಿ ಪ್ರಸಾದ್ ಚಟ್ಟೋಪಾಧ್ಯಾಯ., ಲೋಕಾಯುತ, ಪು. ೧೯

೨೫. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, (೨೦೦೨) ಪು. ೮೧

೨೬. ಈಡಿಗ ಜನಾಂಗ ಒಂದು ಅಧ್ಯಯನ, ಪು. ೭೯

೨೭. ಈಡಿಗ ಸಮಾವೇಶ, ಪು. ೩೫

೨೮. ಮಧುಗಣಪತಿರಾವ್ ಮಡೆನೂರು., ದೀವರ ಮೂಲ ಯಾವುದು, ಪು. ೮೪

೨೯. ದೇಜಪ್ಪ ಎಂ., ಬಿಲ್ಲವರು ಒಂದು ಹಿನ್ನೋಟ, ಪು. ೬೯

೩೦. ರೋಹಿದಾಸ್ ನಾಯಕ., ನಾವು ಯಾರು, ಪು. ೮೪

೩೧. ವಿಷ್ಣುನಾಯಕ ಅಂಕೋಲ., ನಾಮಧಾರಿಗಳು, ಪು. ೮೬

## ಅಧ್ಯಾಯ ೩

# ದೀವರ ಸಾಮಾಜಿಕ ಬದುಕು

ದೀವರ ಮನೆಗಳ ವಿನ್ಯಾಸ

ಕೌಟುಂಬಿಕ ವ್ಯವಸ್ಥೆ

ದೀವರ ಉಡುಗೆ- ತೊಡುಗೆಗಳು

ಆಹಾರ ಮತ್ತು ಪಾನೀಯಗಳು

ದೀವರ ನ್ಯಾಯಪದ್ಧತಿ

ದೀವರಲ್ಲಿ ರಾಜಕೀಯ ಬೆಳವಣಿಗೆ

ಕರ್ನಾಟಕ ರಾಜ್ಯದ ಪಶ್ಚಿಮ ಘಟ್ಟಗಳ ಉದ್ದಗಲದಲ್ಲಿ ವಿಭಿನ್ನ ಮತ್ತು ವಿಶಿಷ್ಟ ಜನಸಮುದಾಯಗಳು ನೆಲೆಸಿವೆ. ಘಟ್ಟ ಸೀಮೆಯ ಮಲೆನಾಡಿಗೂ ಮತ್ತು ಪಶ್ಚಿಮ ಕರಾವಳಿ ಪ್ರದೇಶಕ್ಕೂ ನಡುವೆ ಪಶ್ಚಿಮ ಘಟ್ಟಗಳು ಗೀರು ಎಳದಂತೆ ಹಬ್ಬಿವೆ. ಇವುಗಳ ನಡುವೆ ಅನೇಕ ನದಿ ತೊರೆಗಳು, ಜಲಪಾತಗಳು ಹರಿಯುತ್ತಿವೆ. ಇಲ್ಲಿಯ ಕಾಡುಗಳು ಅನೇಕ ಮೃಗಪಕ್ಷಿಗಳ ನೆಲೆವೀಡಾಗಿವೆ.

ಶಿವಮೊಗ್ಗ ಜಿಲ್ಲೆಯ ಪಶ್ಚಿಮದಿಕ್ಕಿನಿಂದ ಹುಟ್ಟುವ ಶರಾವತಿ ಮತ್ತು ವರದಾ ನದಿಗಳು ಒಂದು ಅರಬ್ಬೀ ಸಮುದ್ರ ಸೇರಿದಂತೆ ಇನ್ನೊಂದು ಬಂಗಾಳ ಕೊಲ್ಲಿಯನ್ನು ಬಯಲು ಸೀಮೆಯಲ್ಲಿ ಹಾದು ಹೋಗಿ ಸೇರುತ್ತದೆ. ಈ ಎರಡೂ ನದಿಗಳ ತಟಾಕಗಳಲ್ಲಿ ಹಲವು ಜನಾಂಗಗಳು, ಬುಡಕಟ್ಟುಗಳು, ತಮ್ಮದೇ ಆದ ವಾಸಸ್ಥಳದ ವ್ಯವಸ್ಥೆ, ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳು, ಭಾಷೆ, ಉಡುಗೆ ತೊಡುಗೆಗಳು ಸ್ವತಂತ್ರ ನಾಗರಿಕತೆ, ಸಂಸ್ಕೃತಿಗಳನ್ನು ಬೆಳಸಿಕೊಂಡು ನೆಲೆನಿಂತಿರುವುದನ್ನು ಕಾಣಬಹುದು. ಸಹ್ಯಾದ್ರಿಯ ಗುಡ್ಡಗಾಡಿನ ಮಲೆನಾಡಿಗರಾಗಿ ಅಚ್ಚಗನ್ನಡವನ್ನು ಮಾತ್ರ ಮಾತನಾಡುತ್ತಿದ್ದ ದಟ್ಟ ಕಾಡುಗಳ ಆಸುಪಾಸಿನಲ್ಲಿ ಜೀವನ ಸಾಗಿಸುವ ಇವರ ಮುಖ್ಯ ಕಸಬು ವ್ಯವಸಾಯವಾಗಿದೆ. ಉಪಕಸಬುಗಳಾಗಿ ಹಾಗೂ ಹವ್ಯಾಸಿಯಾಗಿ ಈ ಜನ ಹಿಂದೆ ಭಗನಿ ಮಾಡುವವರೂ, ಬೇಟೆಗಾರರೂ ಆಗಿದ್ದರೂ ದನ ಜಾನುವಾರುಗಳನ್ನೂ ಸಾಕುವ ಬೇಸಾಯಗಾರರೂ ಆಗಿ ಬಂದಿದ್ದಾರೆ. ಹಿಂದಿನಿಂದಲೂ ಸಾಮಾಜಿಕವಾಗಿ, ಮೇಲ್ವರ್ಗದವರಿಂದ ಶೂದ್ರಗುಂಪಿಗೆ ಸೇರಿಸಲ್ಪಟ್ಟವರು ಮತ್ತು ಅಸ್ಪೃಶ್ಯತೆಯ ಆಚರಣೆಗೆ ತಳಲ್ಪಟ್ಟವರು ಕೂಡಾ ಆಗಿದ್ದರು. ''ನಾಗಾರಾಧನೆ, ಶಿವಾರಾಧನೆ, ಬಲಿ ಪೂಜೆಗಳನ್ನಿಟ್ಟುಕೊಂಡಿರುವ ದ್ರಾವಿಡ ಮೂಲದ ಪರಂಪರೆಯಗಳನ್ನು ರೂಢಿಸಿಕೊಂಡು ಬಂದಿರುವಂತೆ ಕಾಣುತ್ತದೆ.''[1] ಈ ಸಮುದಾಯದಲ್ಲಿ ಆಚರಣೆಯಲ್ಲಿರುವ ಮೂಲ ಸಂಪ್ರದಾಯಗಳು ಕುತೂಹಲ ಹುಟ್ಟಿಸುತ್ತಿವೆ. ಹಬ್ಬಹರಿದಿನಗಳಲ್ಲಿ ನೀರು ತುಂಬಿದ ಹಂಡೆ, ಮೊಗೆ, ತಂಬಿಗೆ, ಗಿಂಡಿಗಳನ್ನು ಇವರ ಹಿರಿಯರು ದ್ಯೋತಕವಾಗಿ ಪೂಜಿಸುತ್ತಾರೆ. ಅಮ್ಮನ ಎಡೆ, ಶಿವನ ಎಡೆ, ಜೇನು ಎಡೆ, ಎಂಬೆಲ್ಲಾ ಆಚರಣೆಗಳಿವೆ.

**ದೀವರ ಮನೆಗಳ ವಿನ್ಯಾಸ:**

''ಅನ್ವೇಷಣೆ ಹಾಗೂ ಅಲೆದಾಟದಲ್ಲಿದ ಆದಿಮಾನವನಿಗೆ ಮನೆಯಂಬ ಕಲ್ಪನೆ ಹುಟ್ಟಿದ್ದೇ ಕೃಷಿಸಂಸ್ಕೃತಿಯ ಉಗಮದ ಸಂದರ್ಭದಲ್ಲಿ. ಕಲ್ಲು, ಪೊಟರೆ, ಮರದ ಪೊಟರೆ ಮುಂತಾದಡೆ ಬದುಕುತ್ತಿದ್ದ ಆದಿಮಾನವ ಪ್ರದೇಶದಿಂದ ಪ್ರದೇಶಕ್ಕೆ ಪಲಾಯನ ಮಾಡುತ್ತಿದ್ದ ಇದುವೆ ಆದಿಮಾನವನ ಅನ್ವೇಷಣೆಯ ಹಂತ ಆಹಾರ ಸಂಗ್ರಹಿಸುವ ಕಾಲ ಬಂದಾಗ ಬಹಳದಿನಗಳವರೆಗೆ ಒಂದೆಡೆ ನೆಲೆನಿಲ್ಲ ತೊಡಗಿದ.''[2] ಅನಂತರ ಮಹಿಳೆ ಕೃಷಿಯಲ್ಲಿ ತೊಡಗಿದಾಗ ಕುಮ್ರಿಬೇಸಾಯ ಪದ್ಧತಿ ಪ್ರಾರಂಭವಾಯಿತು. ಆಗ ನಿಲ್ಲುವ ನೆಲೆಯಲ್ಲಿ ಸಂಪೂರ್ಣ ಮಾರ್ಪಾಟುಗಳಾದವು. ಪಶುಸಾಕಣೆ ಮುಂತಾದವು ಆರಂಭವಾದವು. ಆಗ ಮನೆಗಳ ಸ್ವರೂಪದಲ್ಲಿ ಸುಧಾರಣೆಗಳು ಕಂಡುಬರತೊಡಗಿದವು.

ದೀವರು ಸಹ ಆರಂಭದಲ್ಲಿ ಮರದ ಸೊಪ್ಪು ಮತ್ತು ತೊಗಟೆಗಳನ್ನು ಮನೆಗೆ ಹಾಕಿಕೊಂಡಿದ್ದರು. ನಂತರ ಚಪ್ಪರ ಹಾಕಿಕೊಂಡು ಸುತ್ತಲೂ ತಟ್ಟಿಕಟ್ಟಿಕೊಳ್ಳುವರೆಗೆ ಮುಂದುವರೆದರು. ಇದಕ್ಕೆ ಕುರುಹು ಎನ್ನುವಂತೆ ಈಗಲೂ ದೀವರು ಕಣದಲ್ಲಿ ಹಾಗೂ ಮನೆಯ ಹಿಂದಿನ ಅಂಗಳದಲ್ಲಿ ತಟ್ಟೆಯ ಚಪ್ಪರವನ್ನು ಹಾಕುತ್ತಾರೆ. ಬೇಟೆ ಸಂಸ್ಕೃತಿಯಿಂದ ಬಂದ ದೀವರು ಗುಂಪು -ಗುಂಪಾಗಿ ವಾಸಿಸದೆ ತಮ್ಮ ಗದ್ದೆಯ ಹಾಳಿಯ ಹತ್ತಿರ ಮನೆಕಟ್ಟಿಕೊಳ್ಳುತ್ತಿದ್ದರು. ಗ್ರಾಮಗಳಾದ ನಂತರ ದೀವರು ಒಗ್ಗಟ್ಟಾಗಿ ಒಂದೇ ಹತ್ತಿರ ಮನೆಕಟ್ಟಿಕೊಳ್ಳತೊಡಗಿದರು. ಇವುಗಳನ್ನು 'ದೀವಗೇರಿ' 'ದೀವಿಗಿ' ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರು.

ದೀವರು ತಮಗೆ ಅನುಕೂಲವಾದ ರೀತಿಯಲ್ಲಿ ಮನೆಗಳ ವಿನ್ಯಾಸವನ್ನು ಮಾಡಿಕೊಂಡಿದ್ದಾರೆ. ಮತ್ತು ಮನೆಗಳಲ್ಲಿ ವಿವಿಧ ರೀತಿಯ ಮನೆಗಳನ್ನು ನಿರ್ಮಾಣ ಮಾಡಿಕೊಡಿರುವುದನ್ನು ಕಾಣಬಹುದಾಗಿದೆ. ಮನೆಯು ತನ್ನ ಮೂಲ ರಚನೆಯಲ್ಲಿ ಏನು ಹೊಂದಿರಬೇಕೋ, ಆಂತಾರ್ಯ ಮತ್ತು ಬಾಹ್ಯಾರ್ಯ ಲಕ್ಷಣಗಳನ್ನು ದೀವರ ಮನೆಗಳು ಹೊಂದಿರುತ್ತವೆ. ದೀವರ ಮನೆಗಳು ವಿವಿಧ ವಿನ್ಯಾಸದ ರೂಪವನ್ನು ಹೊಂದಿರುತ್ತವೆ ಎಂಬುದನ್ನು ಈ ಮೂಲಕ ತಿಳಿಯಲಾಗಿದೆ.

**ಚೌಕಿ ಮನೆ:** ಮನೆಯ ಆಯ ಪೂರ್ವ, ಪಶ್ಚಿಮ ಮೂವತ್ತು ಅಡಿ. ಉತ್ತರ ದಕ್ಷಿಣ ನಲವತ್ತು ಅಡಿ ಇದ್ದರೆ ಅದು 'ಚೌಕಿಮನೆ' ಅಥವಾ 'ನಿಜಮನೆ' ಅದಕ್ಕೆ ಮುಖಮಾಡಿದ ನಾಲ್ಕು ಕೊಠಡಿಗಳಿರುತ್ತವೆ. ಎದುರು ಭಾಗದಲ್ಲಿ ವಿಶಾಲವಾದ ಅಂಗಳವಿದ್ದು, ಅಲ್ಲಿ ಅಡಿಕೆ ಚಪ್ಪರ ವಿರುತ್ತದೆ. ಎಡಭಾಗದ ಚೌಕಿಯಲ್ಲಿ ಭತ್ತದ ಪಣತ, ಬಲಬದಿಯಲ್ಲಿ ಅಕ್ಕಿ ಭತ್ತ ಶೇಖರಿಸಿಡುವ ದೋಣಿಗಳಿರುತ್ತವೆ. ಇನ್ನೊಂದು ಚೌಕಿಯಲ್ಲಿ ವ್ಯವಸಾಯ ಉಪಕರಣ, ಇನ್ನೊಂದರಲ್ಲಿ ಮೀನುಮಾಂಸ ಬೇಯಿಸುವ ಒಲೆ ಇರುತ್ತದೆ.

**ಆನೆಗೋಡೆ:** ಮನೆ ಇದು ಎರಡು ರಾಡಿನ ಮನೆ ಆಗಿದ್ದು, ನೀಳವಾದ ಪಕಾಶಿ ಹೊಂದಿರುತ್ತದೆ. ಇದಕ್ಕೆ ಎಂಟು ಇಂಚು ಎತ್ತರ, ಆರು ಇಂಚು ಅಗಲ ಇದ್ದರೆ ಅಷ್ಟೇ ಎತ್ತರದ ಮೂರು ಅಥವಾ ನಾಲ್ಕು ಇಂಚು ಅಗಲದ ಹಲಗೆಯಂತೆ ಕತ್ತರಿಸಿದ ತೊಲೆಯಿಂದ ತೊಲೆಗೆ ಗೋಡೆ ಹೊಂದಿಸಿ ಕೂಡಿಸುತ್ತಾರೆ. ಇದನ್ನು 'ಬಿಗಿ' ಎನ್ನುತ್ತಾರೆ. ಎರಡು ತೊಲೆಯ ಮೇಲೆ ಕೋಳು ಗುಜ್ಜ ಕೂಡ್ರಿಸಿ ಅದರ ಮೇಲೆ ಕೋಳು ಎಳೆಹಾಕಿ ಮನೆ ಹೊಡೆಯುತ್ತಾರೆ.

**ಕಡಿರಾಡು:** ದೊಡ್ಡ ಮನೆ ಗೋಡೆಗೆ ಸುಮಾರು ಹತ್ತು ಅಡಿ ಎತ್ತರದಲ್ಲಿ ಮರದ ಕೈಗಳನ್ನು ಮಾಡಿ ಮುಚ್ಚಿರುತ್ತಾರೆ. ಗೋಡೆಯಿಂದ ಸುಮಾರು ಒಂಬತ್ತು ಅಥವಾ ಹತ್ತು ಅಡಿ ಅಗಲ ತೆಗೆದುಕೊಂಡು ಕಲ್ಲುಕಂಬವನ್ನು ಅಥವಾ ಮರದ ಕಂಬವನ್ನು ನಿಲ್ಲಿಸಿ ಅವುಗಳ ಮೇಲೆ ವಾಲಪ್ಲೇಟ್ (ಚಳುಕಿ) ಇಟ್ಟು ಪಕಾಸಿ, ರೀಪು ಹೊಡೆದು ಹೆಂಚು ಹಾಕುತ್ತಾರೆ.

**ಅಟ್ಟ:** (ಮುಚ್ಚಿಗೆ) ಅಂಕಣ ಮನೆಗಳಿಗೆ ಆರು ಇಂಚು ದಪ್ಪ ಐದು ಇಂಚು ಅಗಲದ ಮರದ ಅಡ್ಡೆಗಳನ್ನು ಒಂದೂವರೆ ಅಡಿಗೊಂದರಂತೆ ಎರಡುತೊಲೆಗಳನ್ನು ಸೇರಿಸಿ ಒಂದು ಅಂಕಣಕ್ಕೆ ಐದು ಅಥವಾ ಆರು ಅಡ್ಡೆ

ಕೂಡ್ರಿಸಿ ಅದರ ಮೇಲೆ ಸಮಾನಾಗಿ ಹಲಗೆ ಇಟ್ಟು ಮೊಳೆ ಹೊಡೆಯುತ್ತಾರೆ. ಎರಡು ಹಲಗೆ ಜೋಡಿಸಿದ ಭಾಗದಲ್ಲಿ ಬಿರುಕು ಕಾಣದಂತೆ ಮೊದಲು ಸಣ್ಣ ಅಗಲದ ಹಲಗೆ ಹೊಡೆಯುತ್ತಿದ್ದರು. ಈಗ ರೀಪನ್ನು ನಯವಾಗಿಸಿ ಹೊಡೆಯುತ್ತಾರೆ. ಸೊಪ್ಪನ್ನು ಹಾಕಿ ಎರಡು ಇಂಚು ಮಣ್ಣು ಹರಡಿ ಮಣ್ಣು ಮೆತ್ತುತ್ತಾರೆ. ಕೆಲವರು ಸಿಮೆಂಟ್ ಮಾಡಿಸುತ್ತಾರೆ. ಇದಕ್ಕಿಂತ ಮೊದಲು ಬಗನೆ ಮರದ ಕಾಂಡವನ್ನು ಒಡೆದು ತಟ್ಟೆಯ ಆಕಾರದಲ್ಲಿ ಮಾಡಿ ಹರಡುತ್ತಿದ್ದರು. ಅವು ಹೊಲೆಯ ಹೊಗೆಗೆ ಕಪ್ಪಾಗಿ ಗಟ್ಟಿಯಾಗಿರುತ್ತಿದ್ದವು.

**ನೆಲ:** ಮನೆಯ ಒಳಗಡೆ ನೆಲವನ್ನು ಕೊಚ್ಚಿ ನೀರು ಹಾಕಿ ನೆನಸಿ ಪೆಟ್ನೆ ಹೊಡೆಯಯುತ್ತಾರೆ. ಗದ್ದೆ ಮಣ್ಣನ್ನು (ಅಂಟುಮಣ್ಣು) ತಂದು ನೀರಲ್ಲಿ ನೆನಸಿ ಪುಡಿಮಾಡಿ ಅದನ್ನು ತೆಗೆದುಕೊಂಡು ಮಣ್ಣಿಗೆ ಒರೆಸುತ್ತಾ ಕಲ್ಲು ಗುಂಡಿನಲ್ಲಿ ಬರೆಯುತ್ತಾ ಹೋಗುತ್ತಾರೆ. ಎರಡು ಮೂರು ದಿನಗಳಾದ ಮೇಲೆ ಮತ್ತೆ ನೀರು ಹಾಕಿಕೊಳ್ಳುತ್ತಾ, ಅಲ್ಲಲ್ಲಿ ಮಣ್ಣು ಒರೆಸುತ್ತಾ ಮತ್ತೊಮ್ಮೆ ಮೆತ್ತುತ್ತಾರೆ. ಆಗ ಗಟ್ಟಿಯಾಗಿ ನೆಲನಿಲ್ಲುತ್ತದೆ.

**ಧಡಿ:** ಮನೆಯ ಸುತ್ತ ಮೊಳಕಾಲಿನಷ್ಟು ಎತ್ತರದಲ್ಲಿ ಕಟ್ಟೆಯೊಂದನ್ನು ನಿರ್ಮಿಸಿರುತ್ತಾರೆ. ಇದು ಗೋಡೆಗೆ ಭದ್ರತೆಯಲ್ಲದೆ, ಬಂದವರಿಗೆ ಕುಳಿತುಕೊಳ್ಳಲು ಮನೆಯವರಿಗೆ ಮಲಗಿಕೊಳ್ಳಲು ಉಪಯೋಗಿಸುತ್ತಾರೆ. ಬಿಳಗಿ ಸೀಮೆಯ ಕಡೆ ಕಡಿರಾಡಿನಲ್ಲಿಯೇ ಒಂದು ಧಡಿ ಕಟ್ಟುತ್ತಾರೆ.

**ಚೆಲ್ಲ:** ಸುಣ್ಣ ಬೆರಸಿದ ಗಾರೆಯಿಂದ ನೆಲವನ್ನು ಸಿದ್ದಮಾಡಿಟ್ಟುಕೊಳ್ಳುತ್ತಿದ್ದರು. ಸುಣ್ಣ ಕುಟ್ಟಿಕೊಂಡು ಬೆಲ್ಲ ಮರಳು ಸೇರಿಸಿ ಪಾಕಮಾಡಿಕೊಂಡು ನೆಲಕ್ಕೆ ಹಾಕಿ ನಂತರ ಕೆಮ್ಮಣ್ಣು ಅಥವಾ ಕರಿ ಸೇರಿಸಿ ಒರೆಯುತ್ತಾರೆ. ಮುಖ್ಯವಾಗಿ ಪಾಕದ ಮಿಶ್ರಣ ಜೊತೆಗೆ ಕಲ್ಲು ಗುಂಡಿನಲ್ಲಿ ಒರೆಯುವ ಸಾಮರ್ಥ್ಯ ಇಲ್ಲಿ ಅಗತ್ಯವೆನಿಸುತ್ತದೆ. ಗೋಡೆಗೆ ಸಹಾ ಗದ್ದೆ ಮಣ್ಣಿನಿಂದ ಒರೆಯುತ್ತಾರೆ (ತಿಕ್ಕುತ್ತಾರೆ). ಇತ್ತೀಚಿಗೆ ಸಿಮೆಂಟ್ ಲೇಪನ ಆರಂಭವಾಗಿದೆ. ಪಾಟಿಕಲ್ಲು ಕೂರಿಸುವುದು ಕೂಡಾ ಇದೆ. ಶ್ರೀಮಂತರ ಮನೆಗಳಲ್ಲಿ ಮೊಸಾಯಿಕ್ ಹಾಕುವ ಆಧುನಿಕತೆ ಆರಂಭವಾಗಿದೆ. ಆರ್.ಸಿ.ಸಿ. ಮನೆಗಳು ಸಾಗರ, ಸೊರಬ ಭಾಗದಲ್ಲಿ ಹೆಚ್ಚಾಗಿರುವುದು ಕಂಡುಬಂದಿತು.

**ಅಂಗಳ:** ಮನೆಯಲ್ಲಿ ವಾಸ ಆರಂಭಿಸಿದ ಮೇಲೆ ಹಿತ್ತಲಕಡೆ ಅಂಗಳ ಮಾಡಿಕೊಂಡು ಬೇಸಿಗೆಯಲ್ಲಿ ಅಡುಗೆ ಮಾಡುತ್ತಾರೆ. ತೆಂಗಿನಹ್ಯಾಡ, ಅಥವಾ ಬಗನಿ ಅಡಕಿ ಸೋಗೆ ಚಪ್ಪರ ಹಾಕಿಕೊಂಡು ನೆಲವನ್ನು ನೀರಿನಿಂದ ನೆನಸಿ ಸಣ್ಣದಾಗಿ ಕೊಚ್ಚಿ ಪೆಟ್ನೆಯಿಂದ ಎಳೆದು ಕೂರಿಸುತ್ತಾ ಬರುತ್ತಾರೆ. ಗದ್ದೆ ಮಣ್ಣನ್ನು ತಂದು ಒರೆಸೆ ಕಲ್ಲುಗುಂಡಿನಲ್ಲಿ ಬರೆಯುತ್ತಾ ಹೋಗುತ್ತಾರೆ. ಇಲ್ಲಿಯೇ ಎರಡು ಮೂರು ಒಲೆಗಳಿರುತ್ತವೆ. ಕಣಜದ ತಟ್ಟೆ ಅಥವಾ ತೆಂಗಿನ ಮಡಿಲಿನಿಂದ ಹೆಣೆದಿರುತ್ತಾರೆ.

ಆರ್ಥಿಕವಾಗಿ ಪ್ರಬಲರಾಗಿರುವ ದೀವರಲ್ಲಿ ಮಾತ್ರ ಈ ರೀತಿಯ ಮನೆಗಳು ನಿರ್ಮಾಣವಾಗಿವೆ. ಈ ಸಮುದಾಯದಲ್ಲಿ ಇನ್ನೂ ಚಪ್ಪರದ ಮನೆಗಳೇ ಜಾಸ್ತಿಯಾಗಿರುವುದನ್ನು ಕ್ಷೇತ್ರಕಾರ್ಯದ ಮೂಲಕ ತಿಳಿಯಲಾಗಿದೆ. ದೀವರು ಕೃಷಿಕರಾಗಿರುವುದರಿಂದ ತಮ್ಮಲ್ಲಿಯೇ ಹೊಸತನವನ್ನು ಕಂಡುಕೊಳ್ಳುವ ನಿಟ್ಟಿನತ್ತ ಸಾಗುತ್ತಿದ್ದಾರೆ. ಆದರೂ ಕೂಡಾ ಇತ್ತೀಚಿಗೆ ದೀವರ ಸಮುದಾಯದವರು ತಮ್ಮ ಮೂಲಸ್ಥಳವಾದ ಮನೆಗಳನ್ನು ವ್ಯವಸ್ಥಿತವಾಗಿ ನಿರ್ಮಾಣ ಮಾಡಿಕೊಂಡಿದ್ದಾರೆ.

**ಮನೆಗೆ ಸಂಬಂಧಿಸಿದ ನಂಬಿಕೆಗಳು:**

೧. ದೊಡ್ಡಮನೆಯಲ್ಲಿ ಅಡುಗೆ ಮಾಡುವಂತಿಲ್ಲ.

೨. ಮೀನು ಮಾಂಸ ಬೇಯಿಸುವಂತಿಲ್ಲ.

೩. ಹೆಣ್ಣುಮಕ್ಕಳು ಋತುಸ್ರಾವದ ಸಂದರ್ಭದಲ್ಲಿ ದೇವರ ಮನೆಯಲ್ಲಿ ಓಡಾಡುವಂತಿಲ್ಲ.

೪. ಮನೆ ಎದುರು ಗುದ್ದಲಿ, ಪಿಕಾಸಿ ನಿಲ್ಲಿಸಬಾರದು.

೫. ಮೀನು ಮಾಂಸ ಪ್ರಧಾನ ಬಾಗಿಲಲ್ಲಿ ತೆಗೆದುಕೊಂಡು ಹೋಗಬಾರದು.

೬. ನೀರಿನ ಹಂಡೆ ಇಡುವ ಜಾಗದಲ್ಲಿ ಅಣಬೆ ಏರಬಾರದು.

೭. ನಂದಿ ನಿಲ್ಲಿಸಬೇಕು. ಮತ್ತಿ ಹೇರಬೇಕು.

೮. ಹೆಣ್ಣುಮಕ್ಕಳು ತಲೆಬಾಗಿಲ ಮೇಲೆ ಸೀನಬಾರದು.

೯. ರಾತ್ರಿ ಹತ್ತಿಯನ್ನು ಕೊಡಬಾರದು.

೧೦. ಮನೆಯೊಳಗೆ ಸಾಯಬಾರದು, ಸತ್ತರೆ ಮನೆ ಬಿಡಬೇಕು.

೧೧. ತಾರೆ ಮರದ ತೊಲೆ ಅಥವಾ ಪಿಕಾಸಿ ಹಾರಿದರೆ ಶನಿ ಇರುತ್ತದೆ.

೧೨. ಮಕ್ಕಳು ಕಸ ಹೊಡೆದರೆ ನೆಂಟರು ಬರುತ್ತಾರೆ. ಅರ್ಧಕೊಡ ಬಾವಿಯಿಂದ ಬಂದರೆ ನೆಂಟರು ಬರುತ್ತಾರೆ.

೧೩. ತಾಳಿಬಿಚ್ಚಿ ಹೊಸ್ತಿಲು ದಾಟಬಾರದು.

೧೪. ಮದುವೆಯವಾದ ಒಂದು ವರ್ಷ ಅತ್ತೆ, ಸೊಸೆ ಒಂದೇ ಬಾಗಿಲಲ್ಲಿ ತಿರುಗಬಾರದು.

೧೫. ರಾತ್ರಿ ಉಪ್ಪು, ಸುಣ್ಣ, ಮಜ್ಜಿಗೆ, ಎಳ್ಳು. ಅರಿಶಿಣ, ಅಕ್ಕಿ, ಉಪ್ಪಿನಕಾಯಿ ಕೊಡಬಾರದು.

೧೬. ಸುಣ್ಣ ಕೈಗೆ ಹಚ್ಚಬಾರದು. ಉಪ್ಪುಹಾಕಬಾರದು.

೧೭. ಹೊಸ್ತಿಲ ಮೇಲೆ ಸೀನಬಾರದು.

೧೮. ಕೋಳಿ ಮೊದ್ಲು ಮೊಟ್ಟೆ ಹಾಕಿದರೆ ಹೊಸ್ತಿಲ ಮೇಲಿಟ್ಟು ಕೊಯ್ದುಬಿಡುತ್ತಾರೆ.

೧೯. ಮೂರಸಂಜೆ ಮುತ್ತೈದೆಯರು ಅಳಬಾರದು, ಕೇಡು ಬರುತ್ತದೆ.

೨೦. ಸಂಜೆ ದೀಪ ಹತ್ತಿಸಿದ ಮೇಲೆ ಸ್ವಲ್ಪ ಹೊತ್ತು ಬಾಗಿಲು ತೆರೆದಿಡಬೇಕು.

೨೧. ಹೆಂಡತಿ ಗರ್ಭಿಣಿ ಇದ್ದಾಗ ಮನೆ ಕಟ್ಟಬಾರದು.

೨೨. ಮನೆ ಕಟ್ಟುವಾಗ ಸುಣ್ಣದ ಮಡಿಕೆ, ಬೆದರುಗೊಂಬೆ ಇಡಬೇಕು, ದೃಷ್ಟಿ ತಾಗುವುದಿಲ್ಲ.

೨೩. ಮನೆ ನಾಟಿದ ಮರಗಳನ್ನು ಕದ್ದಿಂಗಳಲ್ಲಿ ಕಡಿಯಬೇಕು, ಇಲ್ಲವಾದರೆ ಹುಳು ಬೀಳುತ್ತದೆ.

೨೪. ಊಟಕ್ಕೆ ಕುಳಿತಾಗ ಸೀನಬಾರದು, ಸೀದವರು ಕೈತೊಳೆದು ಕೂತುಕೊಳ್ಳಬೇಕು.

೨೫. ಮುಂದುಗಡೆ ಪ್ರವೇಶಿಸಿ ಹಿಂದುಗಡೆ ಬಾಗಿಲಲ್ಲಿ ನಿರ್ಗಮಿಸಬಾರದು.

೨೬. ಕಾಲು ತೊಳೆಯದೆ ಪ್ರಧಾನ ಬಾಗಿಲು ದಾಟಬಾರದು, ಶನಿಕಾಡುತ್ತದೆ.

೨೭. ಎರಡು ಜನರ ಮಧ್ಯೆ ಬೆಂಕಿ ತೆಗೆದುಕೊಂಡು ಹೋಗಬಾರದು.

೨೮. ಕ್ಯಾಟ ಹದ್ದು ಮನೆ ಮೇಲೆ ಕುಳಿತುಕೊಳ್ಳಬಾರದು.

೨೯. ಹಂದಿ, ಕಾಗೆ, ಎಮ್ಮೆ, ಹೋರಿಗಳು ಮನೆ ಪ್ರವೇಶಿಸಬಾರದು, ಕೇಡು ಖಂಡಿತಾ.

೩೦. ಕೊಳು ಕುಂಬ ನಿಲ್ಲಿಸುವಾಗ ಬೀಳಬಾರದು, ಅಂದರೆ ಯಾರಿಗೋ ಆಪತ್ತು ಎಂದರ್ಥ.

೩೧. ಹೆಣ್ಣುಮಕ್ಕಳು ತಲೆಬಾಗಿಲ ಮೇಲೆ ಸೀನಬಾರದು.

೩೨. ಮದುವೆಯಾದ ಒಂದು ವರ್ಷ ಮನೆ ಮಾರುವಂತಿಲ್ಲ.

**ಗೃಹಪ್ರವೇಶ:**

ಗೃಹಪ್ರವೇಶವನ್ನು ಇತ್ತೀಚಿಗೆ ವೈದೀಕರಣದ ಪ್ರತಿರೂಪವಾಗಿ ಪುರೋಹಿತರನ್ನು ಕರೆಸಿ ಮಾಡುವುದಾದರೂ ಮೂಲರೂಪದ ಬುಡಕಟ್ಟು ಸ್ಥಿತಿಯ ಕೆಲವು ಅಂಶಗಳು ಉಳಿದಿಕೊಂಡಿರುವುದನ್ನು ಗಮನಿಸಬೇಕಾಗುತ್ತದೆ. ಸುಣ್ಣದ ಗಡಿಗೆ, ತೊಟ್ಟಿಲು ಮುಂತಾದ ವಸ್ತುಗಳನ್ನು ಪ್ರಧಾನ ಬಾಗಿಲು ದಾಟಿಸುವುದೇ ಆಗಿದೆ. ಎತ್ತು ಬಂದರೆ ಅಶುಭ ಎಂದು ನಿರ್ಧರಿಸಿ ಆಕಳನ್ನು ಪವಿತ್ರೀಕರಿಸುವ ರಾಜಕರಾಣವೇ ಗೃಹಪ್ರವೇಶವನ್ನು ಕೂಡಾ ಸೃಷ್ಠಿಸಿರುವುದು ಮಾತೃತ್ವದ ಸಂಕೇತವಾಗಿರುವ ಹಾಲುಕ್ಕಿಸುವುದು ಫಲವಂತಿಕೆಯ ತೊಟ್ಟಿಲು, ಬಿಳಿದ್ರವತಾದ ಸುಣ್ಣದ ಗಡಿಗೆ ಜಲ ರೂಪಿಯ ಉದಾಹರಣೆಯಾಗಿದೆ.

"ಪುರೋಹಿತಶಾಹಿ ಮನೋಸ್ಥಿತಿ, ಅಶ್ವತ್ಥ, ಆಲ, ಶಮಿ, ವೃಕ್ಷಗಳನ್ನು ಅತ್ಯಂತ ಪವಿತ್ರವೆಂಬಂತೆ ಸಾರಿ ಯಜ್ಞಕ್ಕೆ ಬಳಸಿಕೊಂಡವು. ತಾರೆ, ಗಂಧ, ಮರವನ್ನು ಶೂದ್ರರು ಬಳಸುವಂತಿಲ್ಲ ಎಂಬ ಕಟ್ಟುಪಾಡು ಹೇರಿದವು. ಅತ್ಯಂತ ಶ್ರೇಷ್ಠವಾದ ಗಂಧದ ಮರವನ್ನು ಕಟುಕರು ತಮ್ಮ ಮನೆಯಲ್ಲಿ ಬಳಸಾಬಾರದೆಂದು ಶಾಸ್ತ್ರ ಪ್ರಮಾಣ ಮಾಡಿದರು."[೬] ಇವೆಲ್ಲವು ಕೂಡಾ ಕಾಲದ ಸಾಂಸ್ಕೃತಿಕ ಸಂಚಲನೆಯ ಕೊಡುಗೆಗಳು.

**ಮನೆಯ ರಕ್ಷಣೆಗಳು:**

**ಬೇಲಿ:** ಮನೆಯ ಸುತ್ತಲೂ ತಮ್ಮ ಜಾಗದ ಭದ್ರತೆಗೆ ಬೇಲಿ ಅನಿವಾರ್ಯ. ಬೇಲಿ ಇಲ್ಲದ ಹೊಲ ಅಂಕೆ ಇಲ್ಲದ ಹೆಣ್ಣು ಎರಡು ಒಂದೇ ಎನ್ನುತ್ತಾರೆ.

ಹಾಲುವಾಣುಗಿಡದ ಬೇಲಿ: ಹಾಲುವಾಣ, ಹಂಗರ್ಕ ಕಳ್ಳಿ, ಗೊಬ್ಬರ, ದಾಸವಾಳ ಗಿಡದ ಬೇಲಿ ನಿರ್ಮಿಸುತ್ತಾರೆ. ಇದನ್ನು ಚಿಗುರು ಗೂಟದ ಬೇಲಿ ಎನ್ನುತ್ತಾರೆ.

**ಹೆಣಿಕೆ ಬೇಲಿ:** ಕಬ್ಬಿನ ಗದ್ದೆಗೆ ಸೂಕ್ತವಾದ ಬೇಲಿ. ಬಿದಿರು ದಬ್ಬೆಗಳನ್ನು ಹೆಣೆದು ರಚಿಸುತ್ತಾರೆ.

**ಕಲ್ಲಿನ ಬೇಲಿ:** ಕಲ್ಲನ್ನು ಒಂದರ ಮೇಲೆ ಒಂದಿಟ್ಟು ರಚಿಸುವ ಬೇಲಿ.

ಹುಲಿ ಮರುಗನ ಬೇಲಿ: ಮುಳ್ಳಿನ ರಕ್ಷಣಾತ್ಮಕ ಬೇಲಿ. ಪ್ರಾಣಿಪಕ್ಷಿಗಳಿಂದ ಅಪಾರ ತೊಂದರೆ ಇದ್ದರೆ ಈ ಮುಳ್ಳನ್ನು ಹಾಕುತ್ತಾರೆ. ಇದು ನಂಜು ಕೂಡ.

ಬಿದಿರುಬೇಲಿ: ಬಿದಿರು ಗೂಟವನ್ನು ನೆಟ್ಟು ಅದಕ್ಕೆ ದೊಡ್ಡ ದೊಡ್ಡ ಬಿದಿರಿನ ಸೆಳವಿಯಿಂದ ಅಂಬಳಜ ಹಾಕಿ ಬಿಗಿಯುತ್ತಾರೆ. ಇದು ನಾಲ್ಕರಿಂದ ಐದು ವರ್ಷ ಬಾಳಿಕೆ ಖಚಿತ.

**ತಂತಿಬೇಲಿ:** ಇತ್ತೀಚಿಗೆ ಕಲ್ಲು ಕಂಬ ನೆಟ್ಟು ತಂತಿಯನ್ನು ಹಾಕುವ ಕ್ರಮ ಆರಂಭವಾಗಿದೆ.

**ಗೊಡ್ಡೆಬೇಲಿ;** ಪರಂಗಿ ಮುಳ್ಳು, ಸೇರಿದಂತೆ ಈತರೆ ಯಾವುದೇ ಮುಳ್ಳಿನ ಪೊದೆಯನ್ನು ಕಡಿದು ರಾಕುತ್ತಾ ಹೋಗುತ್ತಾರೆ. ಇದಕ್ಕೆ ಶ್ರಮಬದ್ಧತೆ ಇರದೆ ಒಟ್ಟು ಬೆಳೆ ರಕ್ಷಣೆಗೆ ಮಾಡಿಕೊಂಡ ಉಪಾಯ.

**ಕೌಟುಂಬಿಕ ವ್ಯವಸ್ಥೆ:**

"ಮಹಿಳೆಯರೆ ಕುಟುಂಬದ ವಹಿವಾಟು ನೆಡೆಸುವವರು. ಹೊಲಗದ್ದೆ ಕೆಲಸ, ಗೃಹಕೃತ್ಯದ ಕೆಲಸ,

ಹೈನುಗಾರಿಕೆ, ಕೋಳಿಸಾಕಾಣಿಕೆ, ಚಾಪೆ ಹೆಣೆಯುವುದು, ತರಕಾರಿ ಬೆಳೆಯುವುದು, ಹಬ್ಬರಗಿ ಹೂವು, ದಂಡೆ ಕಟ್ಟಿ ಮಾರುವುದು, ಕಟ್ಟುವುದು, ಬೀಸುವುದು, ಪೇಟೆಗೆ ಹೋಗಿ ವಸ್ತುಗಳನ್ನು ಮಾರುವುದು, ಕೊಳ್ಳುವುದು ಮುಂತಾಗಿ ಕುಟುಂಬದ ಸಮಸ್ತ ಕೆಲಸಗಳನ್ನು ಹೆಂಗಸರೇ ಮಾಡುತ್ತಾರೆ. ಹಬ್ಬ ಹರಿದಿನಗಳಲ್ಲಿ, ಮದುವೆ ಸಂದರ್ಭಗಳಲ್ಲಿ ಮಹಿಳೆಯರೆ ಮುಖ್ಯಪಾತ್ರವಹಿಸುತ್ತಾರೆ. ಚಿತ್ತಾರ ಹಾಡು ಹಸೆ ಬರೆಯುವುದರಲ್ಲೂ ಮುಂದಿದ್ದಾರೆ.''[೪] ದೀವರ ಮಹಿಳೆಯರು ಅನೇಕ ಜನಪದ ಗೀತೆಗಳು, ಖಂಡಕಾವ್ಯಗಳು, ಕಥನಗೀತೆಗಳು, ಮದುವೆ ಹಾಡುಗಳು, ಸೋಬಾನೆ ಹಾಡುಗಳು, ಜರಿಯುವ ಹಾಡುಗಳು, ಹಬ್ಬಹರಿದಿನದ ಹಾಡುಗಳುನ್ನು ಹಗಲು ರಾತ್ರಿ ತುಂಬಾ ಸೊಗಸಾಗಿ ಹಾಡುತ್ತಾರೆ.

ದೀವರು ಮಾತೃ ಪ್ರಧಾನವಾದ ಸಮಾಜಕ್ಕೆ ಸೇರಿದವರಾದ್ದರಿಂದ ''ಕುಟುಂಬದಲ್ಲಿ ಮಹಿಳೆಯರಿಗೆ ಪ್ರಧಾನಸ್ಥಾನ.''[೫] ಇವರು ಹೆಚ್ಚಾಗಿ ಅವಿಭಕ್ತ ಕುಟುಂಬಗಳಲ್ಲಿ ವಾಸಮಾಡುತ್ತಾರೆ. ಕೆಲವು ಗ್ರಾಮಗಳಲ್ಲಿ ನೂರಾರು ಜನರು ಒಟ್ಟಿಗೆ ವಾಸಮಾಡುವ ಅವಿಭಕ್ತ ಕುಟುಂಬಗಳು ಇದ್ದವು. ಕುಟುಂಬದ ಹಿರಿಯರು ವಹಿವಾಟುಗಳನ್ನು ನೋಡಿಕೊಳ್ಳುತ್ತಿದ್ದರು. ಉಳಿದವರು ಇವರಿಗೆ ವಿಧೇಯರಾಗಿ ಕೃಷಿ ಕೆಲಸದಲ್ಲಿ ತೊಡಗುತ್ತಿದ್ದರು. ತುಂಬಾ ಅನ್ಯೋನ್ಯವಾಗಿ ಪ್ರೀತಿ ವಿಶ್ವಾಸಗಳಿಂದ ಜೀವನ ಸಾಗಿಸುತ್ತಿದ್ದರು. ಆದರೆ ಇಂದು ಬದಲಾಗಿದೆ. ''ಅವಿಭಕ್ತ ಕುಟುಂಬಗಳ ಬದಲಾಗಿ ವಿಭಕ್ತ ಕುಟುಂಬಗಳು ಜಾರಿಯಲ್ಲಿವೆ.''[೬] ಹಾಗಾಗಿ ಇಂದು ಆರ್ಥಿಕವಾಗಿ ಅನುಕೂಲವಿರುವ ಕುಟುಂಬಗಳಿವೆ. ಉಳಿದ ಕುಟುಂಬಗಳು ನೆಮ್ಮದಿಯಿಂದ ಜೀವನಸಾಗಿಸುತ್ತಿವೆ. ವಿದ್ಯೆ ಕಲಿಯದೇ ಇದ್ದರು ಜನರು ಪ್ರಾಮಾಣಿಕರಾಗಿದ್ದಾರೆ. ವಿವೇಚನೆ ವಿವೇಕವಂತರಾಗಿ ನ್ಯಾಯಪರರಾಗಿ ಜೀವನ ಮಾಡುತ್ತಿದ್ದಾರೆ. ಒಟ್ಟಿನಲ್ಲಿ ಇವರ ಕುಟುಂಬ ವ್ಯವಸ್ಥೆ ಸುವ್ಯಸ್ಥಿತ ರೂಪವನ್ನು ಪಡೆದುಕೊಂಡಿದೆ. ಈ ರೀತಿ ಭೂಮಾಲೀಕರಿಂದ ದೌರ್ಜನ್ಯಕ್ಕೊಳಪಟ್ಟ ಗೇಣಿದಾರರಾದ ದೀವರು ತಮ್ಮ ವೃತ್ತಿಯಾದ ಕೃಷಿಯಲ್ಲಿ ಸಡಿಲತೆಯನ್ನು ಕಳೆದುಕೊಳ್ಳಲಿಲ್ಲ. ಜೊತೆಗೆ ತಮ್ಮ ''ಕೌಟುಂಬಿಕ ವ್ಯವಸ್ಥೆಯನ್ನು ಭದ್ರಪಡಿಸಿಕೊಳ್ಳಲು ಕೃಷಿಯಲ್ಲಿ ಹೊಸ ಆರ್ಥಿಕ ಚಿಂತನೆಯ ಬೆಳವಣಿಗೆಯನ್ನು ಕಂಡುಕೊಂಡರು. ಮತ್ತು ಸಾಮಾಜಿಕವಾಗಿ ಸಮಾನತೆಯನ್ನು ಕಂಡುಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.''[೭] ಹೀಗೆ ಪ್ರತಿಯೊಂದು ಹಂತದಲ್ಲಿ ಅಭಿವೃದ್ಧಿ ಹೊಂದುತ್ತಾ ತಮ್ಮನ್ನು ಗುರುತಿಸಿಕೊಳ್ಳುವಷ್ಟು ಸಮಾಜದಲ್ಲಿ ಮುಂದುವರೆದಿದ್ದಾರೆ.

**ಉಡುಗೆ -ತೊಡುಗೆಗಳು:**

**ದೀವರ ಮಹಿಳೆಯರ ಉಡುಗೆ -ತೊಡುಗೆಗಳು:**

ದೀವರ ಮಹಿಳೆಯರು ಉಡುಪು ಅಲಂಕಾರಗಳು ತುಂಬಾ ವೈಶಿಷ್ಟ್ಯಮಯವಾದುವು. ಹಳೆಕಾಲದ ಮಹಿಳೆಯರು ಕರಿ ಮತ್ತು ಕೆಂಪು ದಡಿಯ ಸೀರೆಗಳನ್ನು ಅದಕ್ಕೊಪ್ಪುವ ರವಿಕೆ ಕಣಗಳನ್ನು ವಿಶಿಷ್ಟವಾದ ರೀತಿಯಲ್ಲಿ ತೊಡುತ್ತಾರೆ. ಕೃಷಿಕಾರ್ಯಕ್ಕೆ ಅನುಕೂಲವಾಗುವಂತೆ ಮೊಣಕಾಲದವರೆಗೆ ಸೀರೆ ಉಟ್ಟುಕೊಳ್ಳುತ್ತಾರೆ. ದೀವರ ಮಹಿಳೆಯರು ಒಡವೆ ಹೂಗಳೆಂದರೆ ಪಂಚಪ್ರಾಣ. ಕೈಗೆ ಬೆಳ್ಳಿ ಕೊಲ್ಕಡಗ, ದುಂಡು, ತೋಳಿಗೆ ಬಂದಿ (ತೋಳುಸರಿಗೆ) ಕುತ್ತಿಗೆಗೆ ಚಿನ್ನದ ಸರ, ಪವನ್‌ಸರ, ಏಕದಾನಿ, ಗುಂಡಿನಸರ, ಬೆಳ್ಳಿಯ ಆಳಿಕೆ, ಹವಳದ ಸರ, ಕರೀಮಣಿ, ಸರಕ್ಕೆ ಪೋಣಿಸಿದ ತಾಳಿ, ಕಿವಿಗೆ ಬೆಂಡೋಲೆ, ಬುಗುಡಿ, ಮೂಗಿಗೆ ಮೂಗುತಿ, ಬೇಸರಿ ಮತ್ತು ಚಿನ್ನದ ಬಟ್ಟು, ತಲಗೆ ಚಿನ್ನದ ಕೇದಿಗೆ, ಚಿನ್ನದ ಹೂವು, ನೆತ್ತಿಗೆ ನಾಗರ, ಜಡೆಗೆ ಜಡೆಗೊಂಡೇವು, ಕಾಲಿಗೆ ಕಾಲುಂಗುರ ಮತ್ತು ಪಿಲ್ಲಿ, ಸೊಂಟಕ್ಕೆ ಗೆಜ್ಜೆಪಟ್ಟಿ ಮುಂತಾದ ಆಭರಣಗಳನ್ನು ಧರಿಸುತ್ತಾರೆ. ಹಳೆಕಾಲದ

ಮಹಿಳೆಯರು ಕೈಗೆ ಜೋಗಿಜಡೆ, ರಾಮನತೊಟ್ಟಿಲು, ಕೃಷ್ಣನ ತೊಟ್ಟಿಲು, ಗೊಂಬೆಸಾಲು, ಮಲ್ಲಿಗೆ ದಂಡೆ, ಸೀತೆಮುಡಿ, ಗಲ್ಲಕ್ಕೆ ಗಲ್ಲದ ಬಟ್ಟು, ಹಣೆಯ ಮೇಲೆ ಹಣೆಹಚ್ಚೆ, ಮುಂತಾದ ಹಚ್ಚೆಗಳನ್ನು ಶಿಳ್ಳೆಕ್ಯಾತರ ಮಹಿಳೆಯರಿಂದ ಹೊಯಿಸಿಕೊಳ್ಳುತ್ತಿದ್ದರು. ಮಲ್ಲಿಗೆ ಜಡೆಪತ್ರ (ಅಬ್ಬಲಿಗೆ) ಚೆಂಡು, ಡೇರೆ, ಸಂಪಿಗೆ, ಸುರಗಿ ಗೊಂಡೆ ಮುಂತಾದ ಹೂವುಗಳನ್ನು ಮುಡಿ ತುಂಬಾ ಮುಡಿದುಕೊಳ್ಳುತ್ತಾರೆ. ದುಡಿದುಣ್ಣುವ ಹಳ್ಳಿಯ ಮಹಿಳೆಯರಲ್ಲಿ ವ್ಯವಸ್ಥಿತ ಬದುಕು ಇರುವುದನ್ನು ಕಾಣಬಹುದಾಗಿದೆ.

**ಪುರುಷರ ಉಡುಗೆ -ತೊಡುಗೆಗಳು:**

ಹಿಂದಿನ ಕಾಲದ ದೀವರು ಉಡುಪು ಸಹ ವಿಶಿಷ್ಟವಾಗಿತ್ತು. ಸೊಂಟಕ್ಕೆ ಕುರುಗೋಡು ಪಂಚೆಯನ್ನು ಸುತ್ತಿಕೊಳ್ಳುತ್ತಿದ್ದರು. (ಸೊಂಟ ಸುತ್ತುವುದು) ಬಗಲಂಗಿ, ತಲೆಗೆ ಕೆಂಪು ಅಥವಾ ಬಿಳಿ ಬಣ್ಣದ ರುಮಾಲು, ಹೆಗಲ ಮೇಲೆ ಕರಿಕಂಬಳಿ, ಹಾಕಿಕೊಂಡು ಸೊಂಟಕ್ಕೆ ವಡ್ಯಾಣ, ಕಟ್ಟಿ ಇದಕ್ಕೆ ಕೊಂಡಿಗೆ ಕಂದ್ಲೆ (ಕತ್ತಿ) ತೂಗು ಹಾಕಿಕೊಳ್ಳುತ್ತಿದ್ದರು. ಕೆಲವರು ಕೈಕಾಲುಗಳಿಗೆ ಬೆಳ್ಳಿಸರ ಹಾಕಿಕೊಳ್ಳುತ್ತಿದ್ದರು. ಕಿವಿಗೆ ಚಿನ್ನದ ಒಂಟಿ, ಸೊಂಟಕ್ಕೆ ಬೆಳ್ಳಿ ನ್ಯಾವಳ ಧರಿಸುತ್ತಿದ್ದರು. ಇತ್ತೀಚಿಗೆ ಇವರ ಉಡುಪುಗಳು ಹೊಸತನವನ್ನು ಕಂಡುಕೊಂಡಿವೆ.

**ಕೆಲಸದ ವೇಳೆಯಲ್ಲಿ ಧರಿಸುವ ಉಡುಗೆ -ತೊಡುಗೆಗಳು:**

ಒಂದು ಗೇಣಹಗಲದ ಪಂಚೆಯನ್ನು (ಕಟ್ಟಿ ಅರಿವೆ) ತೆಗೆದುಕೊಂಡು ಎರಡು ಗೇಣು ಬಿಟ್ಟು ಮುಂದಿನ ಉಡುದಾರಕ್ಕೆ ಸಿಕ್ಕಿಸಿಕೊಂಡು ಸ್ವಲ್ಪ ಅಗಲವಾಗಿ ಹಿಂದಕ್ಕ ತಂದು ಸಿಕ್ಕಿಸಿಕೊಳ್ಳುತ್ತಿದ್ದರು. ಮುಂದಿನ ಭಾಗದಲ್ಲಿ ಉಳಿದ ಬಟ್ಟೆಯನ್ನು ಎದುರಿಗೆ ಹರಡಿಕೊಳ್ಳುತ್ತಿದ್ದರು. ಅದರ ಮೇಲೆ ಒಂದು ಟೆವಲ್‌ನ್ನು ಕುರುಗೋಡು ಪಂಚೆಯನ್ನು ಸುತ್ತಿಕೊಳ್ಳುತ್ತಿದ್ದರು. ಈಗ ಮೋಟು ಪಂಚೆಯನ್ನು ಉಟ್ಟು ಅದಕ್ಕೊಂದು ದಟ್ಟಸುತ್ತಿಕೊಂಡು ಉಡಿದಾರಕ್ಕೆ ಸಿಕ್ಕಿಸಿಕೊಳ್ಳುತ್ತಿದ್ದಾರೆ. ಪ್ರಾಯಶಃ ಉಡುದಾರದ ಉಗಮವೇ ಕಚ್ಚೆ ಕಟ್ಟಿಕೊಳ್ಳಲು ಇರಬೇಕು. ದಾರದ ಉಡುದಾರ ಬರುವುದಕ್ಕೆ ಮೊದಲು ಬಳ್ಳಿಯನ್ನು ಕಟ್ಟಿಕೊಳ್ಳುತ್ತಿದ್ದರು. ಆಧುನಿಕತೆಯ ಸಂದರ್ಭದಲ್ಲಿ ಉಡದಾರ ಅನಾವಶ್ಯಕ ಎನಿಸಿದರೆ, ಅದೊಂದು ಧಾರ್ಮಿಕ ವಿಧಿರೂಪವನ್ನು ಪಡೆದುಕೊಂಡಿದೆ. ಆಯಾ ಮನೆದೇವರಿಗೆ ಅನುಗುಣವಾಗಿ ಕೆಂಪು ಹಾಗೂ ಕಪ್ಪು ಬಣ್ಣದ ದಾರ ಬಳಸುತ್ತಾರೆ. ಹುಟ್ಟಿ ಹೆಸರಿಡುವ ಸಂದರ್ಭದಲ್ಲಿ ಹಾಕಿದ ಉಡದಾರವನ್ನು ಮದುವೆಯ ಸಂದರ್ಭದಲ್ಲಿ ಬದಲಾಯಿಸುವುದನ್ನು ಬಿಟ್ಟರೆ ಸಾವಿನ ಸಂಸ್ಕಾರದ ಸಂದರ್ಭದಲ್ಲಿ ಮಾತ್ರ ತೆಗೆದು ಹಾಕಲಾಗುತ್ತದೆ.

ಸೊಂಟಕ್ಕೆ ಹಗ್ಗವನ್ನು ಸುತ್ತಿಕೊಂಡು ಕಬ್ಬಿಣದ ಕೊಕ್ಕೆ ಇರುವ ಸಾಧನವನ್ನು ಧರಿಸುತ್ತಾರೆ. ಅಂಡುಗೊಕ್ಕೆ ಅದಕ್ಕೆ ಕತ್ತಿಯನ್ನು ಯಾವಾಗಲೂ ಸಿಕ್ಕಿಸಿಕೊಂಡಿರುತ್ತಾರೆ. ಮೈಗೆ ತೋಳಿಲ್ಲದ ಅಂಗಿ, ತಲೆಗೆ ಹಾಳಿ ಟೋಪಿ ಇಲ್ಲವೆ ಸಣ್ಣ ಬಟ್ಟೆಯನ್ನು ಸುತ್ತಿಕೊಂಡಿರುತ್ತಾರೆ. ಕೈಗೆ ಬೆಳ್ಳಿ ಪಾಟ್ಲಿ, ಕಾಲಿಗೆ ಕಡಗ ಬೆಳ್ಳಿ ಸರಿಗೆ ಹಾಕಿಕೊಂಡಿರುತ್ತಾರೆ. ಕಂಬಳಿ ಕೊಪ್ಪೆಯನ್ನಂತೂ ಬಿಡುವುದಿಲ್ಲ. ಇವುಗಳ ಜೊತೆಗೆ ಅಡಿಕೆ ಚೀಲ ಯಾವಾಗಲೂ ಇರುತ್ತದೆ. ಮರದ ಚಪ್ಪಲಿಯನ್ನು ಬಳಸುತ್ತಿದ್ದರು. ನಂತರ ಚರ್ಮದ ಚಪ್ಪಲಿ ಬಂದವು.

ಹಬ್ಬ ಹರಿದಿನಗಳಲ್ಲಿ ಮೊಳಕಾಲು ಮುಚ್ಚುವ ಹಾಗೆ ಪಾಣಿಪಂಚೆ ಉಟ್ಟುಕೊಂಡು ನೆಹರು ಜುಬ್ಬದ

ತರಹ ಅಂಗಿ ಧರಿಸುವರು. ಇದಕ್ಕೂ ಮೊದಲು ಕಸಿಯಂಗಿ ಇದ್ದವು. ನೆಂಟರ ಮನೆಗೆ ಹೋಗುವಾಗ ದಬ್ಬೆಯ ಒಳಗಡೆ ಲಂಗೋಟಿ ಕಟ್ಟುತ್ತಾರೆ. ಇದು ದೀವರ ಬದುಕಿನ ವೈಶಿಷ್ಟ್ಯವಾಗಿದೆ. ಇತ್ತೀಚಿಗೆ ಆಧುನಿಕತೆಯ ಪರಿಣಾಮದಿಂದಾಗಿ ದೀವರ ಉಡುಪಿನಲ್ಲಿ ಬದಲಾಗಿರುವುದನ್ನು ಕಾಣಬಹುದಾಗಿದೆ. ಸಾಂಪ್ರದಾಯಿಕ ಉಡುಪುಗಳು ಕಣ್ಮರೆಯಾಗುತ್ತಿವೆ. ಸಾಂಪ್ರದಾಯಿಕ ಉಡುಪುಗಳು ಕೇವಲ ಹಳೆಯ ಜನರ ಉಡುಪುಗಳಾಗಿ ಮಾತ್ರ ಕಾಣಿಸುತ್ತವೆ. ಆದರೂ ಕೂಡಾ ತಮ್ಮ ಮೂಲ ಸಂಸ್ಕೃತಿಯ ನೆಲೆಯಲ್ಲಿ ಸಾಂಪ್ರದಾಯಿಕವಾಗಿ ಬದುಕುವುದನ್ನು ಕಾಣಬಹುದಾಗಿದೆ.

**ದೀವರಲ್ಲಿಯ ಮದುವೆ ಸಂಪ್ರದಾಯ ಮತ್ತು ಬಳಿಗಳು:**

ದೀವರ ಮದುವೆಗಳು ಹಿಂದೆ ಒಂದು ವಾರ ನಡೆಯುತ್ತಿದ್ದವು. ವೀಳ್ಯ ಶಾಸ್ತ್ರದಿಂದ ಪ್ರಾರಂಭಿಸಿ ಎಣ್ಣೆ, ಅರಿಶಿಣ, ಉದಕ, ಕಜ್ಜಾಯ ಇಕ್ಕುವುದು, ದೇವಗುಡದ ನೀರು ತರುವುದು, ಧಾರೆ ನಾಗೋಲೆಶಾಸ್ತ್ರ ಹೀಗೆ ಅನೇಕ ಶಾಸ್ತ್ರಗಳಿಂದ ಕೂಡಿರುತ್ತಿದ್ದವು. ಇಂದಿನ ದಿನ ಎರಡು ಮೂರು ದಿನಕ್ಕೆ ಮಾತ್ರ ಸೀಮಿತವಾಗಿವೆ. ತಿಂಗಳ ಶಾಸ್ತ್ರಕ್ಕೆ ಮದುವೆ ಕಾರ್ಯ ಮುಕ್ತಾಯಗೊಳ್ಳುತ್ತಿತ್ತು. ಈಗ ತಿಂಗಳ ಶಾಸ್ತ್ರದೊಳಗೆ ಎಲ್ಲಾ ಕಾರ್ಯಗಳು ಮುಗಿಯುತ್ತವೆ. ಹಿಂದೆ ದೀವರಲ್ಲಿ ವಧುವಿಗೆ ತೆರಕೊಡುವ ಪದ್ಧತಿ ಇತ್ತು. ವಧುವಿಗೆ ಹನ್ನೆರಡರಿಂದ ಇಪ್ಪತ್ತು ಖಂಡದ ಭತ್ತ (೬೦ಸೇರಿಗೆ ಒಂದು ಖಂಡಗ) ಮತ್ತು ಹನ್ನೆರಡು ವರಾದಿಂದ ಇಪ್ಪತ್ತು ವರಾಹ (ಬೆಳ್ಳಿವರಹ) ಕೊಡಬೇಕಾಗಿತ್ತು. ಆದರೆ ಇವತ್ತಿನ ಸಂದರ್ಭದಲ್ಲಿ ಗಂಡು ವರದಕ್ಷಿಣೆಯ ರೂಪವನ್ನು ಪಡೆದುಕೊಂಡಿದ್ದಾನೆ. ತೆರ ಕೊಡಲು ಆಗದೇ ಇದ್ದವರು ಮದುವೆ ಆಗದೆ ವಯಸ್ಸು ಕಳೆಯುತ್ತಿದ್ದರು. ಇಂತವರಿಗೆ ವಿಧವೆ ಮಹಿಳೆಯರನ್ನು ಹುಡುಕಿ ಮದುವೆ ಮಾಡುತ್ತಿದ್ದರು. ಇವರಲ್ಲಿ ವಿಧವಾ ವಿವಾಹ ಪದ್ಧತಿ ಇತ್ತು. ಈ ಪದ್ದತಿಗೆ 'ಕೂಡಿಕೆ' ಅಥವಾ 'ಸೀರುಡಿಕೆ' ಎನ್ನುತ್ತಿದ್ದರು. ಮದುವೆಗೆ ದೀವರು ತಮ್ಮದೇ ಆದ ಬಳಿಗಳನ್ನು ಇಟ್ಟುಕೊಂಡಿದ್ದಾರೆ. ಅವುಗಳನ್ನು ಈ ಮೂಲಕ ಗುರುತಿಸಲಾಗಿದೆ.

ಹಳೆಪೈಕರಿಗೆ ನಾಮಧಾರಿ ಎಂಬ ಹೆಸರು ಹೇಗೆ ಬಂತು ಎಂಬುದನ್ನು ಗಮನಿಸಿದಾಗ ತ್ರಿಮತಸ್ಥರಲ್ಲಿ ಒಬ್ಬರಾದ ಶ್ರೀರಾಮನುಜಾಚಾರ್ಯರು ಕರ್ನಾಟಕದಲ್ಲಿ ತಮ್ಮ ಬೋಧನೆಯಿಂದ ಅನೇಕ ಹಿಂದುಳಿದ ಸಮೂಹಗಳನ್ನು ತಮ್ಮ ಅನುಯಾಯಿಗಳನ್ನಾಗಿ ಆಕರ್ಷಿಸಿದರು. ಶೂದ್ರರಿಗೂ ಗಾಯತ್ರಿ ಮಂತ್ರವನ್ನು ಉಚ್ಚರಿಸುವ ಹಕ್ಕು ಇದೆ ಎಂದು ಸಾರಿದರು. ಶೂದ್ರ ಸಮುದಾಯದ ಅನೇಕ ಜಾತಿಯವರಿಗೆ ನಾಮಧಾರಣೆ ಮಾಡಿ ವೈಷ್ಣವ ಪಂಥಕ್ಕೆ ಸೇರಿಸಿಕೊಂಡರು. "ಹಳೇ ಪೈಕರಲ್ಲಿ ಬಹುತೇಕ ಜನರು ವೈಷ್ಣವ ಪಂಥಕ್ಕೆ ಸೇರಿ ನಾಮಧಾರಣ ಮಾಡಿಸಿಕೊಂಡರು."[೮]

ಕರಾವಳಿಯ ತೆಂಗಿನ ದೀವರಲ್ಲಿ ಎರಡು (ಪಂಗಡಗಳಾದವು) ಗುಂಪುಗಳಾದವು. ನಾಮಧಾರಿಗಳು, ತ್ರಿನಾಮಧಾರಿಗಳು ಎಂದೂ. ನಾಮಧಾರಿಗಳು ತಮ್ಮ ಹಣೆಯಲ್ಲಿ ಒಂದೇ ನಾಮಹಾಕಿಕೊಳ್ಳುವರು. ತ್ರಿನಾಮಧಾರಿಗಳು ಮೂರುನಾಮಧಾರಣೆ ಮಾಡಿಕೊಳ್ಳುವರು. ಇವೆರಡು ಗುಂಪುಗಳಲ್ಲಿ ಪರಸ್ಪರ ಮದುವೆ ಸಂಬಂಧಗಳು ನೆಡೆಯುತ್ತಿತ್ತು. ಆದರೆ ಎರಡು ಗುಂಪುಗಳ ಹುಡುಗ ಹುಡುಗಿ ಮುದ್ರಾಧಾರಣ ಮಾಡಿಕೊಳ್ಳಬೇಕು. ತ್ರಿನಾಮಧಾರಿಗಳು ಅದೇ ಗುಂಪಿನ ಹುಡುಗಿಯನ್ನು ಮದುವೆಯಾಗುವುದಾದರೆ ಮುದ್ರಾಧಾರಣ ಮಾಡಿಕೊಳ್ಳುವ ಅಗತ್ಯವಿಲ್ಲ.

ಘಟ್ಟದ ಮೇಲಿನ ಹಳೆಸೈನಿಕರಲ್ಲಿ ಹೆಣ್ಣೊಕ್ಕಲು ಮತ್ತು ಗಂಡೊಕ್ಕಲು ಎಂದು ಎರಡು ಗುಂಪುಗಳಿವೆ. ಚಂದ್ರಗುತ್ತಿಯ ರೇಣುಕಾಂಬ ಗುತ್ತಿಕನ್ನಮ್ಮ, ಗುತ್ತೆಮ್ಮ ದೇವಿಗೆ ನಡೆದುಕೊಳ್ಳುವವರು ಹೆಣ್ಣೊಕ್ಕಲು, ವೈಷ್ಣವ

ಪಂಥವನ್ನು ಸೇರಿ ನಾಮಧಾರಣೆ ಮಾಡಿಸಿಕೊಂಡವರು. ಗಂಡೊಕ್ಕಲು ಇವರು ತಿರುಪತಿ ವೆಂಕಟರಮಣ, ಶಿಕಾರಿಪುರದ ಹುಚ್ಚರಾಯಸ್ವಾಮಿಯ ಒಕ್ಕಲು ಇವರಿಗೆ ದೊಡ್ಡ ದೇವರ ಒಕ್ಕಲು ಎಂದು ಹೇಳುವರು. ಇವರು ಜನನ, ಮರಣಗಳ ಕಾಲದಲ್ಲಿ ಸೂತಕ ಕಳೆದುಕೊಳ್ಳಲು ತಿರುಪತಿಯಲ್ಲಿ ಮುದ್ರಾಧಾರಣೆ ಮಾಡಿಸಿಕೊಳ್ಳಲು ದಾಸಯ್ಯನನ್ನು ಕರೆಸುತ್ತಾರೆ. ದಾಸಯ್ಯ ಬಂದು ತೀರ್ಥ ಪ್ರೋಕ್ಷಣೆ ಮಾಡಿ ನಾಮಧಾರಣೆ ಮಾಡಿ ಸೂತಕಗಳ ಶುದ್ಧಗೊಳಿಸಿ, ಸೂತಕ ಕಳೆಯುತ್ತಾನೆ. ಎಂಬ ನಂಬಿಕೆಯನ್ನು ಹೊಂದಿದ್ದಾರೆ.

ದೀವರಲ್ಲಿ ಕುಲ-ಬಳ್ಳಿ

ದೀವರಲ್ಲಿ (ಹಳೆಪೈಕ) ಭಿನ್ನಗೋತ್ರಗಳ ಸಾಮಾಜಿಕ ಗುಂಪುಗಳಿವೆ. ಇದೊಂದು ಕುಟುಂಬ ಪದ್ಧತಿ. ಇವರು ಬಳಿಯ ಮೂಲಕ ಒಂದು ಸಾಮಾಜಿಕ ಸಮೂಹವನ್ನು ಹೊಂದಿದ್ದಾರೆ. ಬಳಿಗಳ ವಿಶೇಷತೆ ಎಂದರೆ ಅವುಗಳ ಮೂಲ ಹಿಡಿಯುವುದು. ಈ ಪದ್ಧತಿಯಿಂದ ಬಹುಪತಿತ್ವ ರೂಢಿಯಲ್ಲಿದ್ದ ದಕ್ಷಿಣ ಭಾರತದಲ್ಲಿ ಈ ಜಾತಿಯ ಮೂಲವಿದೆ. ಎಂದು ತೋರುತ್ತದೆ. ಬಗನೆ ದೀವರು, ತೆಂಗಿನ ದೀವರು, ಬಿಲ್ಲವರು ಮತ್ತು ತೀಯಾನರಲ್ಲಿ ಇರುವ ಬಳಿಗಳು ಒಂದೇ ರೀತಿಯ ಬಳಿಗಳಾಗಿವೆ.

"ದಿ ಮೈಸೂರು ಟ್ರೈಬ್ಸ್ ಅಂಡ್ ಕಾಸ್ಟ್" ಎಂಬ ಗ್ರಂಥದ ಸಂಪುಟ ೩ರಲ್ಲಿ ಎಲ್.ಕೆ. ಅನಂತಕೃಷ್ಣ ಅಯ್ಯಂಗಾರ್‌ರವರು ತೆಂಗಿನ ದೀವರಲ್ಲಿ ಇಪ್ಪತ್ತು ಬಳಿಗಳನ್ನು ಹಾಗೂ ದೀವರಲ್ಲಿ ನಾಲ್ಕು ಬಳಿಗಳನ್ನು ಗುರುತಿಸಿದ್ದಾರೆ. ಆರ್.ಇ. ಎಂಥೋವನ್‌ರವರು, ತಮ್ಮ "ದಿ ಟ್ರೈಬ್ಸ್ ಅಂಡ್ ಕಾಸ್ಟ್ ಆಫ್ ಬಾಂಬೆ" ಎಂಬ ಗ್ರಂಥದ ಸಂಪುಟ ಎರಡರಲ್ಲಿ ಬಗನೆ ದೀವರಲ್ಲಿ ಹತ್ತು ಬಳಿಗಳನ್ನು ಗುರುತಿಸಿದ್ದಾರೆ. ಆ ಬಳಿಗಳು ಈ ಕೆಳಗಿನಂತಿವೆ.

| | |
|---|---|
| ೧. ಮಹಾರ್‌ಬಳಿ | ತಾಳೇಮರ, ಮಹಾರ್ ಕೀಳುಜಾತಿ |
| ೨. ಬಂಗಾರ | ಬಂಗಾರ ಚಿನ್ನ ಲೋಹ |
| ೩. ಕಡವೆ | ಕಡೆ ಪ್ರಾಣಿ |
| ೪. ಸರ್ಪನ | ಸರ್ಪ, ಹಾವು. |
| ೫. ಶೆಟ್ಟಿ | ಮೀನ. |
| ೬. ಹೊನ್ನೆ | ಹೊನ್ನೆಮರ. |
| ೭. ಚೆಂಡಿಬಳಿ | ಚಂಡಿಮರ. |
| ೮. ತೋಳನ | ತೋಳ ಪ್ರಾಣಿ |
| ೯. ದೇವನ | ದೇವನ ಬಳಿ. |
| ೧೦. ಹೇಳೇ | ಹೇಳೆ ನದಿ. |

ಘಟ್ಟದ ಮೇಲಿನ ದೀವರಲ್ಲಿ ಪ್ರಚಲಿತವಾಗಿರುವ ಬಳಿಗಳು:

| | |
|---|---|
| ೧. ಶಿವನ ಬಳಿ | ಶಿವನ ಮರ. |
| ೨. ಗಂಗೆ | ನೀರು. |
| ೩. ಹೇನ್ನೆ | ಹೇನ್ನೆಮರ. |
| ೪. ಹೊಳೆ | ನದಿ. |
| ೫. ತೋಳನ | ತೋಳ ಪ್ರಾಣಿ. |
| ೬. ಶೆಟ್ಟಿ | ಮೀನು. |

'ಬಳಿ' ಎಂದರೆ 'ಬಳ್ಳಿ' ಎಂದು (ಹಬ್ಬುವುದು) ಅದು ಯಾವುದಾದರು ಮರ, ಹೂವು, ನದಿ ಅಥವಾ ಪ್ರಾಣಿಯ ಹೆಸರಿನ ಮೇಲೆ ಆಧರಿಸಿರುತ್ತದೆ. ಈ ಮರ ಹೂವು, ಪ್ರಾಣಿ, ಆಯಾ, ಬಳಿಯವರ ಪೂರ್ವಿಕರ ಸಂಕೇತಗಳಾಗಿವೆ. ಅವುಗಳಿಗೆ ಯಾವುದೇ ರೀತಿಯ ಗಾಯ, ನೋವು ಮಾಡುವ ಹಾಗಿಲ್ಲ ಎಂಬ ನಂಬಿಕೆ ಅವರದಾಗಿದೆ.

**ದೀವರ ಆಹಾರ ಪದ್ಧತಿ ಮತ್ತು ಪಾನೀಯಗಳು:**

ಮಲೆನಾಡಿನ ದೀವರ ಸಾಂಸ್ಕೃತಿಕ ಜಗತ್ತನ್ನು ಅತ್ಯಂತ ಶ್ರೀಮಂತಗೊಳಿಸಿರುವುದು ಅವರ ಆಹಾರ ಪದ್ಧತಿ. ಪ್ರಾಕೃತಿಕ ಜಗತ್ತಿನೊಡನೆ ಹೊಂದಿರುವ ನಿಕಟ ಬಾಂಧವ್ಯ ಆಹಾರದ ಮೇಲೂ ಪ್ರಭಾವ ಬೀರಿರುವುದನ್ನು ಕಾಣಬಹುದು. ದೀವರ ಸಂಸ್ಕೃತಿಯನ್ನು ಗುರುತಿಸುವುದೇ ಅವರ ಕೋಳಿ ಕಜ್ಜಾಯದಿಂದ, ಹಬ್ಬಗಳಲ್ಲಿ ನೆಂಟರ ಮನೆಗೆ ಹೋಗುವಾಗ ನೆಂಟರು ಮನೆಗೆ ಬಂದಾಗ ಕೋಳಿ ಕಜ್ಜಾಯವಿಲ್ಲದೆ ಹೋದರೆ ಅದೊಂದು ಸಂಸ್ಕೃತಿವಿಲ್ಲದರ ಮನೆಯಂದೇ ಭಾವಿಸಲಾಗುತ್ತಿತ್ತು.

ಕೋಳಿಸಾಕಾಣಿಕೆ ದೀವರ ಆರ್ಥಿಕತೆ ಮತ್ತು ಔದ್ಯೋಗಿಕತೆ ಮೂಲವು ಆಗಿರುವುದರಿಂದ ಬದುಕಿನ ಒಳಾವರಣದಲ್ಲಿಯೇ ಅದನ್ನು ಗ್ರಹಿಸಲಾಗುತ್ತದೆ. ಗೌರಿಹಬ್ಬ ಮುಗಿಸಿ ತವರು ಮನೆಗೆ ಹೊರಡುವ ಹೆಣ್ಣು ಕಜಾಯದ ಸರವನ್ನೇ ತೆಗೆದುಕೊಂಡು ಹೋಗುವುದು ಮಹತ್ವಪೂರ್ಣವಾದ ಅಂಶವಾಗಿದೆ. ರೊಟ್ಟಿ, ಕರಿಮೀನು, ಸಾರು, ಕುರಿಸಾರು, ಕಡುಬು ಇದು ಸಹ ದೀವರ ಆಹಾರ ಪದ್ಧತಿಯ ರೂಪವಾಗಿದೆ. ಅಣಬೆ, ಏಡಿ, ಮೀನು, ಮಾಂಸ, ದೀವರಿಗೆ ಬೇಕೆ ಬೇಕು. ಆಧುನಿಕ ಜಗತ್ತಿನ ವಿಪ್ಲವದೊಳಗೆ ದೀವರ ಕೋಳಿಕಜ್ಜಾಯ ಮರೆಯಾಗುತ್ತಿದ್ದು, ಒಂದು ಸಂಸ್ಕೃತಿಯ ಅಧಃಪತನದಂತೆ ಗೋಚರಿಸುತ್ತಿದೆ. ಜಾಗತೀಕರಣದ ದಾಳಿಯಿಂದಾಗಿ ಕೋಳಿಸಾಕಾಣಿಕೆ ಉದ್ಯಮವಾಗಿ ಬದಲಾಗಿದ್ದು, ದೀವರ ಆರ್ಥಿಕತೆಯ ಮೇಲೆ ಬಂದೆರಗಿದ ಬರ್ಬರ ದಾಳಿ ಎನ್ನಬಹುದು.

ಇವಲ್ಲದೆ ವಿವಿಧ ಹಬ್ಬಗಳ ಸಂದರ್ಭಕ್ಕೆ ಭಿನ್ನ ರೀತಿಯ ಆಹಾರ ಪರಿಕ್ರಮವನ್ನು ಹೊಂದಿರುವುದು ದೀವರ ವಿಶಿಷ್ಟತೆ. ಆರಿದ್ರ ಮಳೆಹಬ್ಬದಲ್ಲಿ ಹಲಸಿನ ಹಣ್ಣಿನ ಕಡುಬು ಉಂಡೆ ಕಡುಬು, ಪಾಯಸ ಇದರ ಜೊತೆಗೆ ಕೋಳಿ ಮತ್ತು ಕುರಿಯ ಅಡುಗೆಯು ಇರುತ್ತದೆ. ಪಂಚಮಿ ಹಬ್ಬದಲ್ಲಿ ಪೂರ್ಣವಾಗಿ ಕಾಡಿನ ಪರಿಕರಗಳೇ ಆಹಾರ ಪದ್ಧತಿಯಲ್ಲಿ ಕಂಡುಬರುತ್ತದೆ. ಚಕ್ಕಲಿ, ಕರ್ಜಿಕಾಯಿ, ಹೊಸಕಜ್ಜಾಯ, ಕಡಲೆಬೇಳೆ, ಉಂಡೆ, ಬಾಳೆಹಣ್ಣಿನ ಕಜ್ಜಾಯ, ನೀರುದೋಸೆ, ಕಾಯಿಚಟ್ನಿ, ಕಿಚಡಿ, ಇಡ್ಲಿ, ಚಿತ್ರಾನ್ನ, ಪಾಯಸ, ಶ್ಯಾವಿಗೆ ಇವಿಷ್ಟು ಪ್ರತಿದಿನ ಊಟದ ಪರಿಕರಗಳಾಗಿವೆ. ಮಾರ್ನವಮಿ ಹಬ್ಬದಲ್ಲಿ ರೊಟ್ಟಿ ಬುತ್ತಿ, ಪಾಯಸ ಮತ್ತು ಕಜಾಯ ಮಾಡುತ್ತಾರೆ. ಭೂಮಣ್ಣಿ ಹಬ್ಬದಲ್ಲಿ ಕೊಟ್ಟೆಕಡುಬು, ಮೊಸರು ಬುತ್ತಿ, ಚಿತ್ರಾನ್ನ, ಸೌತೆಕಾಯಿ, ಪಚಡಿ, ಹೀರೇಕಾಯಿಪಲ್ಯ, ಚೌಳಿಕಾಯಿ ಪಲ್ಯ, ಹೋಳಿಗೆ ಮತ್ತು ಪಾಯಸ, ದೊಡ್ಡಹಬ್ಬದ ಸಂದರ್ಭದಲ್ಲಿ ಹೊಸತರೆ ಕಜ್ಜಾಯ, ಮಾಂಸದ ಅಡುಗೆ ಪ್ರಧಾನವಾಗಿರುತ್ತವೆ.

ಇಷ್ಟೇ ಅಲ್ಲದೆ ತೊಡೇರ್ ಹೋಳಿಗೆ, ಸ್ವಾರ್ಲಮೀನು, ಸಾದೇಮೀನು ಮುಂತಾದವುಗಳ ಬಳಕೆಯೂ ಇದೆ. ಬಹುಮುಖ್ಯವೆಂದರೆ ತಂಬ್ಳಿಸಾರು, ಮೀನು ಚಬ್ಬಿನ ಊಟ ಜನಪ್ರಿಯವಾದುದು. ಗದ್ದೆ ಕೆಲಸದ ಸಂದರ್ಭದಲ್ಲಿ ತಂಬ್ಳಿಸಾರಿನ ಜೊತೆದೆ ಒಣತಾರ್ಲೆ ಮೀನನ್ನು ಸುಟ್ಟಿಟ್ಟು ಬಿಡುತ್ತಾರೆ. ಹಾಗೆಯೇ ಮತ್ತೊಂದು ಪ್ರಕಾರದ ಹೆಂಡವನ್ನು ತಯಾರಿಸುವರು ಅದೇ ಅಕ್ಕಿ ಹೆಂಡ. ಒಮ್ಮೆ ಮಾಡಿದ ಸಾರು ಎರಡು, ಮೂರು ದಿನಗಳವರೆಗೆ

ಬಳಕೆಯಾಗುತ್ತದೆ. ಮೀನು, ಮಾಂಸ ಮತ್ತು ತಂಬ್ಳಿಸಾರಿಗೆಂದೇ ಪ್ರತ್ಯೇಕವಾದ ಗಡಿಗೆಗಳನ್ನು ತಯಾರಿಸಿಕೊಂಡಿರುತ್ತಾರೆ. ಅಣಬೆ ಹಾಗೂ ಗೇರುಬೀಜ ಜಬ್ಬುಮೀನುಗಳ ಮುಂಡಯು ದೀವರ ಅಚ್ಚುಮೆಚ್ಚಿನ ಆಹಾರವಾಗಿದೆ.

ದೀವರಿಗೂ ಮತ್ತು ಮದ್ಯಕ್ಕೂ ಅತ್ಯಂತ ನಿಕಟಸಂಬಂಧವಿದೆ. ಒಂದು ಕಾಲಕ್ಕೆ ಮದ್ಯ ತಯಾರಿಕೆಯಲ್ಲಿಯೇ ತಮ್ಮನ್ನು ತಾವು ಗುರುತಿಸಿಕೊಂಡವರಾಗಿದ್ದರು. ಕಾಡಿನ ನಡುವೆ ಬಾಳಿಬದುಕಿದ ಇವರು ಶ್ರಮಕೇಂದ್ರಿತ ವ್ಯವಸಾಯದಲ್ಲಿ ಭಾಗಿಯಾದ ಜನ ಹೀಗಾಗಿ ದೀವರಲ್ಲಿ ಹೆಂಡ ಪ್ರವೃತ್ತಿ ಮತ್ತು ವೃತ್ತಿಯ ನಿಕಟ ಸಂಬಂಧ ಹೊಂದಿದೆ. ಕಾಡಿನಲ್ಲಿದ್ದ ಬಗನೆ ಮರದ ಹೊಟ್ಟಿನಿಂದ ರೊಟ್ಟಿ ಮಾಡಿ ಬದುಕಿದವರು. ಅದೇ ಕಳ್ಳಿನಿಂದ ದೇಹಾರೋಗ್ಯ ಪಡೆದುಕೊಂಡರು. ಕೃಷಿಸಂಸ್ಕೃತಿಗೆ ಇಳಿದ ನಂತರ ತೆಂಗು, ಅಕ್ಕಿ, ಬೆಲ್ಲದ ಹೊಳೆಯಿಂದ ಹೆಂಡತಯಾರಿಸಿ ತಮ್ಮ ಸಂಶೋಧನಾ ಜಗತ್ತಿನ ವೈಜ್ಞಾನಿಕ ಪ್ರಯೋಗಗಳಿಗೆ ತೆರೆದುಕೊಂಡವರು. ಆ ಕಾರಣದಿಂದಲೇ ಹೆಂಡ ತೆಗೆಯುವ ವಿಧಾನಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಹೆಂಡ ತೆಗೆಯಲು ಉಪಯೋಗಿಸುವ ಸಲಕರಣೆಗಳು:**

೧. ಉಡಿದೇಗುಲ ಬತ್ತಳಿಕೆ ಆಕಾರದಲ್ಲಿರುತ್ತದೆ. ಪರಿತಕತ್ತಿ, ಉಳಿ, ಎರಡು ಸಣ್ಣಉಳಿ, ಬಳ್ಳಿ ಇಟ್ಟುಕೊಳ್ಳಲು ಅನುಕೂಲವಾಗಿರುತ್ತದೆ.

೨. ಮಿಣಿಮುಟ್ಟು ಚರ್ಮದಿಂದ ತಯಾರಿಸಿದ ಹಗ್ಗ, ಮರಹತ್ತುವನು, ಸೊಂಟಕ್ಕೆ, ಮರಕ್ಕೂ ಕಟ್ಟಿಕೊಂಡು ಸುರಕ್ಷಿತವಾಗಿ ಏರಲು ಸಹಾಯ ಮಾಡುತ್ತದೆ.

೩. ಮಸೆಗೋಲು ಉಳಿಯನ್ನು ಮಸೆದುಕೊಳ್ಳಲು ಬಳಸುತ್ತಾರೆ.

೪. ಏಣಿ, ಮಡಕೆ, ಕುಂಬ, ಶೀಶೆ, ಸೋರೆಬುರುಡೆ ಮತ್ತು ಇತರೆ ವಸ್ತುಗಳು

**ಈಚಲು ಮರದ ಹೆಂಡ:** ಮರದ ಒಂದು ಭಾಗವನ್ನು ಹೆರೆಯ ತೊಗಟೆ ತೆಗೆದು ಹಾಕಿ ಆಯಕಟ್ಟಿನ ಜಾಗದಲ್ಲಿ ರಂಧ್ರ ಮಾಡಿ, ಕೆಲವು ದಿನ ಬಿಡುತ್ತಾರೆ. ಒಂದು ಗಡಿಗೆಯಲ್ಲಿ ಪುಳಿಬರುವ ಪಾದರ್ಥ ಹಾಕಿಕೊಂಡು ಬೆನ್ನಹಿಂದೆ ಕಟ್ಟಿಕೊಂಡು ಮಣ್ಣಿಮಟ್ಟಿನ ಸಹಾಯದಿಂದ ಮರ ಹತ್ತಿ ರಂಧ್ರದ ಬಳಿ ಗಡಿಗೆಯನ್ನು ನೆಲೆಗೊಳಿಸುತ್ತಿದ್ದರು. ಈಚಲು ಮುಳ್ಳನ್ನು ಉಪಯೋಗಿಸಿಕೊಂಡು ತೊಟ್ಟು ತೊಟ್ಟಾಗಿ ಮಡಿಕೆಗೆ ಬೀಳುವಂತೆ ಮಾಡುತ್ತಿದ್ದರು. ಇದು ಹೆಂಡ ಇಳಿಸುವ ಕ್ರಮವಾದರೆ ಸೂರ್ಯೋದಯಕ್ಕೆ ಮೊದಲೇ ಇಳಿಸುವ ರಸಕ್ಕೆ ನೀರಾ ಎನ್ನುತ್ತಾರೆ. ಮರದ ತುದಿಯ ಒಂದು ಭಾಗದಲ್ಲಿ ತೊಗಟೆಯನ್ನು ನಾಲ್ಕುವರೆ ಸೆ.ಮೀ. ಅಗಲದಷ್ಟು ತೆಗೆದು ಬಿಳಿಭಾಗ ಕಾಣದಂತೆ ಮಾಡುತ್ತಾರೆ. ಅದು ಕಂದುಬಣ್ಣಕ್ಕೆ ತಿರುಗುತ್ತದೆ. ಕೆಲವು ದಿನದ ನಂತರ 'ವಿ' ಆಕಾರದಲ್ಲಿ ಗಾಯಮಾಡಿ ರಸ ಸುರಿಯುವಂತೆ ಮಾಡುತ್ತಾರೆ. ಬೊಂಬಿನ ನಳಿಕೆಯ ಮುಖಾಂತರ ಅದನ್ನು ಗಡಿಗೆಗೆ ಸುರಿಯುವಂತೆ ಮಾಡುತ್ತಾರೆ. ಸಂಜೆ ಗಡಿಗೆಯನ್ನು ಕಟ್ಟಿ ಬೆಳಗಿನ ಜಾವ ಹೊರತೆಗೆದು ಮತ್ತೆ ಕಟ್ಟುತ್ತಾರೆ. ಇದೇ ರೀತಿ ತೆಂಗಿನ ಮರದ ಹೆಂಡತೆಗೆಯುತ್ತಾರೆ.

**ತೆಂಗಿನ ಮರದ ಹೆಂಡ:** ಮರದ ಎಳೆನೀರು ಕಾಯಿ ಉದಿರಿಸಿ 'ಹೊಡೆ' ಒಡೆಯರಿರುವ ಚೂಪಾದ ಹೊಂಬಾಳೆಯ ತುದಿಯನ್ನು ನಾಜುಕಾಗಿ ಹೆರೆದು ಗಡಿಗೆಯನ್ನು ತೆಂಗಿನ ಮಟ್ಟೆಯ ಮೇಲೆ ಕೂರಿಸಿ ಹೊಂಬಾಳೆಯ ಬಾಯಿಗೆ ಸರಿಯಾಗಿರುವಂತೆ ಅಳವಡಿಸುತ್ತಾರೆ. ದಿನಕ್ಕೆ ಒಮ್ಮೆ ಹೊಂಬಾಳೆಯಿಂದ ಹೆಂಡ ಇಳಿಸಿಕೊಳ್ಳುತ್ತಾರೆ.

**ಬಗನೆಹೆಂಡ:**

ಅಕ್ಟೋಬರ್‌ನಿಂದ ಜುಲೈ ತಿಂಗಳವರೆಗೆ ಈ ಕೆಲಸ ಆರಂಭವಾಗುತ್ತದೆ. ಮಳೆಗಾಲ ಕಳೆದ ಮೇಲೆ ಮರದಲ್ಲಿ ಕೈ ಮೂಡಿದ ನಂತರ ಇತರೆ ಕೈಗಳನ್ನೆಲ್ಲ ಕತ್ತರಿಸಿ ಮರಕ್ಕೆ ಏಣಿ ಕಟ್ಟಿ ಅಥವಾ ಒಂದು ಅಟ್ಟನ್ನು ಹಾಕಿ, ಬಗನೆ ಹ್ಯಾಡಗಳನ್ನು ಕತ್ತರಿಸಿ ತೆಗೆಯುತ್ತಾರೆ. ನಂತರ 'ಕೈ' ಮೇಲುಭಾಗದ ತೊಟ್ಟುಗಳನ್ನು ತೆಗೆದು ಬಗನೆ ಕತ್ತದಿಂದ ಚೆನ್ನಾಗಿ ಉಜ್ಜುತ್ತಾರೆ. ಮಣಿಗಳನ್ನು ಉದುರಿಸುತ್ತಾರೆ. ಭೌರಿಗೆಗಳನ್ನು ಒಟ್ಟಿಗೆ ಸೇರಿಸಿ ನಾರಿನಿಂದ ಕಟ್ಟಿ ಕೈಯನ್ನು ಬೇಕಾದ ಅಳತೆಗೆ ಬಗ್ಗಿಸಿ 'ಒಡ್ಡುಗೋಲನ್ನು' ಅಳವಡಿಸಿ 'ಖಾರ' ಹಾಕುತ್ತಾರೆ. ಎಲ್ಲ ಭಾಗಕ್ಕೂ ಮರದ ಕಡ್ಡಿಯಂದ ಚುಚ್ಚಿ ತುಂಬುತ್ತಾರೆ. 'ಕೈ' ಸದಾ ಬಾಗಿರಲು ದಪ್ಪ ಕಲ್ಲು ಕಟ್ಟುತ್ತಾರೆ. ಮೂರು ದಿನದ ನಂತರ ಹನಿ ಸುರಿಯಲು ಆರಂಭಿಸಿದಾಗ ಮಡಿಕೆ ಕಟ್ಟುತ್ತಾರೆ. ಜೇನುಹುಳು, ಮಂಗ, ಹದ್ದು, ಹಕ್ಕಿಗಳನ್ನು ತಡೆಯಲು ಮಡಿಕೆ ಮರ ಮಾಡಿಟ್ಟು ಸಂಜೆ, ಬೆಳಗ್ಗೆ ಗಡಿಗೆಯನ್ನು ಬಿಚ್ಚುತ್ತಾರೆ. ನೊರೆಯನ್ನು ತೆಗೆದುಹಾಕಿ ಗಂಟೆಯ ಸಹಾಯದಿಂದ ಸೋರೆ ಬುರುಡೆಗೆ ತುಂಬಿಕೊಳ್ಳುತ್ತಾರೆ. ಮತ್ತೆ ಗಡಿಗೆ ಕಟ್ಟುತ್ತಾರೆ.

**ತಾಳೆ ಮರದ ಹೆಂಡ:**

ಮರಗಳಲ್ಲಿ ಹಿಂಗಾರು ಒಡೆದು ಚಾರಿಗಳು ಹೊರ ಹೊರಟ ಮೇಲೆ, ತಾಳೆ ಹ್ಯಾಡಗಳನ್ನು ಕತ್ತರಿಸಿ ತೊಟ್ಟಿಲು ಕಳಚಿ, ಹಿಂಗಾರದ ಹೂಗಳನ್ನು ಉದುರಿಸಿ, ಚಾರಿಯ ತುದಿಯನ್ನು ಸ್ವಲ್ಪ ಸ್ವಲ್ಪವೇ ಕತ್ತರಿಸುತ್ತಾರೆ. ಹಾಗೂ ಬುಡದಿಂದ ತುದಿಯವರೆಗೆ ಸ್ವಲ್ಪವೇ ಹೆರೆಯುತ್ತಾರೆ. ಒಂದು ವಾರದ ನಂತರ ಚಾರಿಗಳನ್ನು ಒಟ್ಟಾಗಿ ಸೇರಿಸಿ ನಾರಿನಿಂದ ಬಿಗಿದು ಕಟ್ಟುತ್ತಾರೆ. ಅದಕ್ಕೆ ಮಡಕೆ ನೇತು ಬಿಡುತ್ತಾರೆ. ದಿನಕ್ಕೆ ಎರಡು ಬಾರಿ ಮರದಿಂದ ಹೆಂಡ ಇಳಿಸುತ್ತಾರೆ. ಮೇಲಿನ ಹೆಂಡಕ್ಕಿಂತ ಅತೀ ಹೆಚ್ಚು ಜನಪ್ರಿಯ ಹಾಗೂ ರುಚಿಕಟ್ಟಾದುದ್ದು 'ನೀರಾ' ಈಚಲು ನೀರಾ ಇಳಿಸುವಾಗ ಗಡಿಗೆಯ ಒಳಗೆ ಕಲ್ಲು ಸಕ್ಕರೆ, ಏಲಕ್ಕಿ, ಕಾಳು ಮೆಣಸು, ಜೀರಿಗೆ, ಒಣದ್ರಾಕ್ಷಿ, ಪುಡಿಮಾಡಿ ಹಾಕಿ ಬೆಳೆಗೆ ಕಟ್ಟಿ ಸೂರ್ಯೋದಯಕ್ಕೆ ಪೂರ್ವದಲ್ಲಿ ಬಿಚ್ಚುತ್ತಾರೆ. ತೆಂಗಿನ ನೀರಾಕ್ಕೆ ಸತ್ಪಾನಿಲಾ ಮೈಡ್ ಎಂಬ ರಾಸಾಯನಿಕ ಬೆರಸಿದರೆ ಐದರಿಂದ ಇಪ್ಪತ್ತು ದಿನಗಳವರೆಗೆ ಹುಳಿಯಾಗದಂತೆ ಇಡಬಹುದು. ನೀರಾವು ಕೆಮ್ಮು, ಗೋರಲು, ಕಫವನ್ನು ನಿವಾರಿಸುತ್ತದೆ. ಆರೋಗ್ಯವರ್ಧಕ ಪೌಷ್ಠಿಕಾಂಶಗಳನ್ನು ಇದು ಹೊಂದಿರುತ್ತದೆ.

**ಅಕ್ಕಿಹೆಂಡ:**

ಅತ್ಯಂತ ಕಡಿಮೆ ಖರ್ಚಿನಲ್ಲಿ ಸುಲಭವಾಗಿ ತಯಾರಿಸುವ ಹೆಂಡವಿದು, ಕಡಿಮೆ ಅಪಾಯಕಾರಿಯೂ, ಹೆಚ್ಚಿನ ಆಹಾರಾಂಶಗಳು ಇರುವುದಲ್ಲದೆ ಬಹುಮುಖ್ಯನಾಗಿ ಇದನ್ನು ತಯಾರಿಸುವರು ಹೆಂಗಸ್ಸರು. ಉಳಿದೆಲ್ಲ ಹೆಂಡಗಳ ತಯಾರಿಕೆಯಲ್ಲಿ ಗಂಡಸರದೆ ಪ್ರಾಬಲ್ಯವಾದರೆ ಇದರಲ್ಲಿ ಹೆಂಗಸರು ಪ್ರವೀಣರು. ಪ್ರಾಯಶಃ ಅಮಲನ್ನು ಕೊಡದೆ ಆರೋಗ್ಯ ಕಾಪಾಡುವುದರಿಂದ ಹೆಂಗಸ್ಸರು ತಯಾರಿಸುತ್ತಿರಬಹುದು. ಈ ಮೇಲಿನ ಎಲ್ಲ ಮರಗಳಿಂದ ಅವುಗಳ ಎಲೆಗಳಿಂದ, ಹ್ಯಾಡಗಳಿಂದ ನಾನಾ ತರಹದ ವಸ್ತುಗಳನ್ನು ತಯಾರಿಸುತ್ತಾರೆ. ಚಾಪೆ, ಬೀಸಣಿಗೆ, ಬುಟ್ಟಿ,

ಪೊರಕೆ, ಮನೆಗೆ ಹೊದೆಸಲು ಹಾಗೂ ಹ್ಯಾಡವನ್ನು ಹೇಡಿದು ತಡಿಕೆಯ ರೂಪದಲ್ಲಿ ಉಪಯೋಗಿಸುತ್ತಾರೆ. ಈ ಹೆಂಡ ಇಳಿಸುವ ಕೆಲಸದ ಕಾರಣದಿಂದಲೇ ಈಡಿಗರು ಬಿಲ್ಲವರ ಜೊತೆ ದೀವರನ್ನು ಏಕೀಕೃತಗೊಳಿಸಿ ನೋಡಲಾಗುತ್ತಿದೆ.

**ದೀವರ ನ್ಯಾಯ ಪದ್ಧತಿ:**

ಕಾಡು ಮೇಡುಗಳಲ್ಲಿ ಸ್ವತಂತ್ರವಾಗಿ ಅಲೆದಾಡುತ್ತ ಬಾಳುತ್ತಿದ್ದ ದೀವರು ಒಂದೆಡೆ ನೆಲೆಸಲಾರಂಭಿಸಿದಾಗ ಅನಿವಾರ್ಯವಾದ ಕಟ್ಟುಪಾಡುಗಳನ್ನು ರೂಪಿಸಿಕೊಂಡರು. ವ್ಯಕ್ತಿಗತ ನಿಲುವುಗಳಿಂದ ಸಮೂಹದೊಳಗೆ ವಿಲೀನಗೊಂಡ ಸಂದರ್ಭದಲ್ಲಿ ಇಂತಹ ವಿಧಿ ನಿಷೇದಗಳಿಗೆ ಒಳಗಾಗಿರಬೇಕಾಗುತ್ತದೆ. ತಪ್ಪು-ಒಪ್ಪುಗಳಿಗೆ ಹಿರಿಯರೆನಿಸಿಕೊಂಡವರು ಪ್ರತಿಕ್ರಿಯೆಸಿರಬೇಕು ಆಗಲೇ ನ್ಯಾಯಪದ್ಧತಿ ಉಗಮವಾಯಿತೆನ್ನಬಹುದು. ಇದಕ್ಕೆ ಪ್ರಾಚೀನ ಹಿರಿಮೆ ಇದ್ದೂ ಬುಡಕಟ್ಟುನ್ನು ಒಗ್ಗೂಡಿಸಲು ಸಹಾಯಕವಾಯಿತೆನ್ನಬಹುದು. ಮಾತೃಮೂಲೀಕಯ ಸಂದರ್ಭದಲ್ಲಿ ತಾಯಿಯೇ ಇಂತಹ ಕೆಲವು ನೀತಿ- ನಿಯಮಗಳನ್ನು ಕಲಿಸುತ್ತಾಳೆ.

ದೀವರು ಕೂಡಾ ಬುಡಕಟ್ಟು ಸಮಾಜವಾಗಿದ್ದಾಗಿನಿಂದ ಈವರೆಗೂ ತಮ್ಮದೇ ಆದ ನ್ಯಾಯಪದ್ಧತಿಯನ್ನು ರೂಪಿಸಿಕೊಂಡಿದ್ದಾರೆ. ಗುರುಮಠ ಪರಂಪರೆಯಲ್ಲಿ ಈ ನ್ಯಾಯ ಪದ್ಧತಿ ಅತ್ಯಂತ ಪ್ರಸಿದ್ಧವಾಯಿತು. ನಂಬಿದ ದೇವರು ಪ್ರಮಾಣ ಮಾಡುವುದು,ನಿರ್ಣಯ ತೆಗೆದುಕೊಳ್ಳುವರು, ವಾದ ಒಪ್ಪಿಸುವುದು ಮುಂತಾದವು ನಡೆದು ಬಂದ ನಡವಳಿಕೆ. ದೇವರಿಗೆ ಮುಡುಪು ಕಟ್ಟುವುದು, ದುಡ್ಡು ಇಟ್ಟು ಆಣೆ ಮಾಡುವುದು, ದೇವರನ್ನು ಮುಟ್ಟಿ ನ್ಯಾಯಅನ್ಯಾಯ ಹೇಳಿಕೊಳ್ಳುವುದು ಇವುಗಳಲ್ಲಿ ಒಂದು.

ಬುಡಕಟ್ಟಿನ ಹಿರಿಯರು ದೇವರ ಹೆಸರನಲ್ಲಿ ನ್ಯಾಯ ನಿರ್ಣಯಿಸುತ್ತಿದ್ದರು. ದಂಡ, ಕಾಣಿಕೆ, ಕಟ್ಟಿಕೊಡುವುದರ ಮುಖಾಂತರ ನ್ಯಾಯ ದಂಡನೆ ಸಿದ್ಧವಾಗುತ್ತಿತ್ತು. ದೇವಸ್ಥಾನಗಳೇ ನ್ಯಾಯಾಲಯಗಳಾಗಿ ಕಾರ್ಯನಿರ್ವಹಿಸಿದ ದಾಖಲೆಗಳಿವೆ. ಬುಡಕಟ್ಟುಗಳು ಜಾತಿಗಳಾಗಿ ಬದಲಾದಾಗ ನ್ಯಾಯಪದ್ಧತಿ ಗಟ್ಟಿಯಾಗಿ ತಳವೂರಿತು. 'ಪಂಚರ' ರೂಪದಲ್ಲಿ ನ್ಯಾಯದಾನ ಬದಲಾಯಿತು. ದಂಡೆ, ಆಣೆ ಮುಂತಾದವುಗಳ ಜೊತೆಗೆ ನಾಲಿಗೆಯು ಪ್ರಮುಖ ಪಾತ್ರವಹಿಸಿತು. ಭಾಷೆ ಕೊಟ್ಟ ಮಾತು ಇದು ಹೆಚ್ಚು ಪ್ರಚಲಿತದಲ್ಲಿತ್ತು. ಪ್ರಾಣಕ್ಕಿಂತ ಕೊಟ್ಟ ಮಾತಿಗೆ ಹೆಚ್ಚು ಆದ್ಯತೆ ಲಭಿಸಿತು. ಈ ಹಿನ್ನೆಲೆಯಲ್ಲಿ ಮಲೆನಾಡಿನ ದೀವರ ನ್ಯಾಯಪರಂಪರೆ ಮೂರು ಹಂತಗಳಲ್ಲಿ ರೂಪಗೊಂಡಿದೆ. ಅವುಗಳನ್ನು ಈ ರೀತಿ ವಿಭಾಗಿಸಬಹುದು.

**ಕಟ್ಟೆ:** ಇದು ಸ್ಥಳೀಯ ಪಂಚಾಯಿತಿಯ ಹೆಸರು. ಊರ ದೇವಸ್ಥಾನ, ಅರಳಿಮರದ ಕಟ್ಟೆ ಮುಂತಾದ ಕಡೆ ನೆಡೆಯುತ್ತದೆ. ಇದಕ್ಕೊಬ್ಬ ಗೌಡ ಅಥವಾ ಪಟೇಲ ಇರುತ್ತಾನೆ. ಈತನಿಗೆ ಸಹಾಯ ಮಾಡಲು ಮೂರರಿಂದ ಐದು ಜನ ಬುದ್ಧಿವಂತರು ಇರುತ್ತಾರೆ. ಸಭೆಯ ಬಗ್ಗೆ ತಿಳಿಸಲು ಅಥವಾ ಶಿಕ್ಷೆಯ ಜಾರಿಗೆ ತಳವಾರ ಇರುತ್ತಿದ್ದ. ಬುದ್ಧಿವಂತರಿಗೆ ಮತ್ತು ಊರಗೌಡನಿಗೆ ಗುರುಮಠದ ಅಂಕಿತವಿದ್ದು ವಂಶ ಪಾರಂಪರ್ಯ ಹಕ್ಕಾಗಿತ್ತು. ಅನುಕೂಲವಾಗುವಂತೆ ಕಂಚಿನ ಮುದ್ರೆ ಕೊಡಲಾಗುತ್ತಿತ್ತು.

**ಕಸವೆ:** ಎಂಟು ಹತ್ತು ಹಳ್ಳಿಗಳ ಸಮುದಾಯವನ್ನು ಕಸವೆ ಎನ್ನುತ್ತಿದ್ದರು. ಇದಕ್ಕೆ ಒಬ್ಬ ಯಜಮಾನ ಇರುತ್ತಿದ್ದನು. ಅವನಿಗೆ ಸಹಾಯ ಮಾಡಲು ಪ್ರತಿ ಊರಿನ ಬುದ್ಧಿವಂತರು ಇರುತ್ತಿದ್ದರು. ಈ ಯಜಮಾನನ್ನು ತೋಪುಕಟ್ಟೆ, ಯಜಮಾನ ಎನ್ನುತ್ತಿದ್ದರು. ಕಟ್ಟೆಯಲ್ಲಿ ಇತ್ಯರ್ಥವಾಗದ ತೀರ್ಮಾನಗಳಿಗೆ ಕಸವೆ ಉತ್ತರ ನೀಡುತ್ತಿತ್ತು.

**ಸೀಮೆ:** ಹಲವು ಕಸವೆಗಳು ಸೇರಿ 'ಸೀಮೆ' ಎಂದು ಕರೆಯಲಾಗುತ್ತಿತ್ತು. ವರ್ಷಕ್ಕೆ ಎರಡು ಬಾರಿ ಸೀಮೆ ಸೇರುತ್ತಿತ್ತು. ಪ್ರತಿಯೊಂದು ಊರಿನ ಬುದ್ಧಿವಂತರಿಗೆ ಕರೆ ಕಳಿಸಲಾಗುತ್ತಿತ್ತು. ಕಸವೆಯಲ್ಲೂ ತೀರ್ಮಾನವಾಗದ ವಿಷಯಗಳನ್ನು ಇಲ್ಲಿಗೆ ಒಪ್ಪಿಸಲಾಗುತ್ತಿತ್ತು. ಆಗ ಮಾತ್ರ ಎಲ್ಲರಿಗೂ ಕರೆಯುತ್ತಿರಲಿಲ್ಲ. ವಾದಿ, ಪ್ರತಿವಾದಿಗಳು ನ್ಯಾಯವನ್ನು ಉಲ್ಲಂಘಿಸಿದ, ನಿರಾಕರಿಸಿದ ಪ್ರಶ್ನಿಸಿದ ಎರಡು ಮೂರು ಊರುಗಳ ಬುದ್ಧಿವಂತರು ಸೇರುತ್ತಿದ್ದರು. ಅಥವಾ ಮಠವೇ ತೀರ್ಮಾನಿಸಿದ ಕೆಲವು ಹಳ್ಳಿಗಳ ಕಟ್ಟೆಗಳು ಸೇರಿಕೊಳ್ಳುತ್ತವೆ. ಆಯ್ಕೆ ಮಾಡಿದ ತೀಕ್ಷ್ಣ ಬುದ್ಧಿವಂತರನ್ನು ಕರೆಸಲಾಗುತ್ತಿತ್ತು.

ಸೀಮೆಗೆ ಬರುವ ಬುದ್ಧಿವಂತರಿಗೆ ಗುರುಮಠದ ಮುದ್ರೆ ಇರುವ ಹಿತ್ತಾಳೆ ತಾಮ್ರದ ಅಣಸುಗಳನ್ನು ಹಾಕಿರುವ ಬಗನಿ ದೊಣ್ಣೆ (ಊರುಗೋಲಿನ ತರಹ) ನೀಡಲಾಗುತ್ತಿತ್ತು. ಅದರಲ್ಲಿ ಶ್ರೀ-ಶ್ರೀ ಷಣ್ಮುಕ ಸ್ಥಾಪನಾಚಾರ್ಯ ವಿಷ್ಣುಭಕ್ತ ನಾಮಧಾರಿ ಮಠಾಧೀಶ ಶ್ರೀ-ಶ್ರೀ ತಾತಾಚಾರ್ಯ ಗುರುಗಳು ಎಂದು ಇರುತ್ತಿದ್ದರು. ಸೀಮೆ ಸೇರುವ ದಿನವನ್ನು ನಿಗದಿ ಪಡಿಸುವವರು ಮೂರು ಜನ ಸೀಮೆಯ ಯಜಮಾನರಾಗಿದ್ದು, ಇವರು ಪ್ರತಿಯೊಬ್ಬ ಬುದ್ಧಿವಂತನಿಗೆ ಕೋಲು ಕಾರನ ಮುಖಾಂತರ ಬಣ್ಣದ ಬಾಳೆಯ ಪಟ ಸುತ್ತಿದ ಉತ್ರಾಣಿ ಕಡ್ಡಿಯನ್ನು ಕಳಿಸುತ್ತಿದ್ದರು.

ಕಡ್ಡಿ ತಲುಪಿದ ಮೇಲೆ ತಪ್ಪದೇ ಸೀಮೆಗೆ ಹಾಜರಾಗಿ ಕಡ್ಡಿಯನ್ನು ಗುರುಗಳಿಗೆ ಒಪ್ಪಿಸುವುದು ಬುದ್ಧಿವಂತರಿಗೆ ಸೇರಿದ ಕೆಲಸವಾಗಿತ್ತು. ಪ್ರತಿಯೊಂದು ಮನೆಯಿಂದ ನಿಗದಿತವಾದ ಹಾಗೂ ಮದುವೆಯ ಸಂದರ್ಭದಲ್ಲಿಟ್ಟು ಗುರುಕಾಣಿಕೆಯನ್ನು ಸಂಗ್ರಹಿಸಿ ಗುರುಗಳಿಗೆ ಒಪ್ಪಿಸುತ್ತಿದ್ದರು. ಇದರ ಜೊತೆಗೆ ಕಟ್ಟೆ, ಕಸವೆಗಳಲ್ಲಿ ಹಾಕಿದ್ದ ದಂಡ ಕಾಣಿಕೆ ಹಾಗೂ ತೀರ್ಥ ಕಾಣಿಕೆಯನ್ನು ಸಹ ಗುರುಮಠಕ್ಕೆ ಸಲ್ಲಿಸಲಾಗುತ್ತಿತ್ತು.

ಬುದ್ಧಿವಂತರು ಸೀಮೆಗೆ ಹೋಗುವಾಗ ಕರಿಕಂಬಳಿ, ದೊಣ್ಣೆ, ತಲೆಗೆ ರುಮಾಲು, ಕಚ್ಚೆಪಂಚೆ, ಕಸೆ ಅಂಗಿ ಹಾಕಿಕೊಂಡು ಕಾಲಿಗೆ ಜೀರ್ ಜೀರ್ ಎನ್ನುವ ಚಡಾವು ಮೆಟ್ಟಿಕೊಂಡು ಹೋಗುತ್ತಿದ್ದರು. ತಲೆಗೆ ರುಮಾಲು, ಕಚ್ಚೆ ಪಂಚೆ, ಪೇಟ ಇಲ್ಲದೆ ಯಾವ ಕಾರ್ಯಕ್ರಮವು ನೆಡೆಯುತ್ತಿರಲಿಲ್ಲ. ನ್ಯಾಯಪರಿಪಾಲನೆ ಹಾಗೂ ಆಡಳಿತದ ಜವಾಬ್ದಾರಿಯಂತೆ ದೀವರಲ್ಲಿ ಆಯಾ ಪ್ರದೇಶಕ್ಕನುಗುಣವಾಗಿ ಸೀಮೆಗಳನ್ನು ರಚಿಸಲಾಗಿತ್ತು.

**ರಾಜಕೀಯ ಬೆಳವಣಿಗೆ:**

ದೀವರ ರಾಜಕೀಯ ಬೆಳವಣಿಗೆಗೂ ಅವರ ಸಾಮಾಜಿಕ ಅಭಿವೃದ್ಧಿಗೂ ಒಳಾವರಣದಲ್ಲಿಯೇ ಒಂದು ಬಗೆಯ ನಿಕಟ ಸಂಬಂಧವಿರುವುದನ್ನು ಗಮನಿಸಬಹುದಾಗಿದೆ. ಸಮುದಾಯವೊಂದು ತನ್ನ ಸ್ಥಿತ್ಯಂತರದ ಆಧುನಿಕತೆಯ ಮುಖಾಮುಖಿಯ ಕಾಲದಲ್ಲಿ ಈ ರೀತಿಯ ಅಪೂರ್ವ ಮೈತ್ರಿಯೇ ಸೋಜಿಗವಾದುದು. ಅನಾದಿ ಕಾಲದಿಂದ ದೀವರು ಹೊಂದಿದ ಪ್ರಭುತ್ವ ಹಾಗೂ ಪಾಳೆಪಟ್ಟಿನ ಅವಿನಾಭಾವ ಸಂಬಂಧವೇ ಆಧುನಿಕ ಜಗತ್ತಿನ ಪ್ರಭುತ್ವವೆನಿಸಿಕೊಂಡ ರಾಜಕಾರಣದತ್ತ ವಾಲಿರುವುದು ಪ್ರಭುತ್ವದೊಡನೆ ಸಂಬಂಧ ಹಾಗೂ ಸಂಘರ್ಷಗಳನ್ನು ಸಾಧಿಸಿಕೊಂಡು ಬಂದ ದೀವರಿಗೆ ಈ ರೀತಿಯ ಒಡನಾಟದಲ್ಲಿಯೇ ಅವರ ಸ್ಥಿತ್ಯಂತರದ ಬೇರುಗಳು ಸಹ ಇವೆ. ಆದ್ದರಿಂದಲೇ ದೀವ ಸಮುದಾಯದ ಆಳದಲ್ಲಿನ ರಾಜಕೀಯ ಪ್ರಜ್ಞೆಯ ಪ್ರಭಾವದಿಂದಾಗಿ ಉಳಿದೆಲ್ಲ ರಂಗಗಳಲ್ಲಿ ರಾಜಕೀಯದ ಮಾದರಿಗಳೇ ರೂಪಗೊಂಡ ಅಪಾಯಗಳು ಕೂಡಾ ಘಟಿಸಿವೆ. ''ರಾಜಕೀಯ ಎಂದರೆ ಸಂಘಜೀವಿಯಾದ ವ್ಯಕ್ತಿ ಸಫಲಗೊಳಿಸಲು ಸಮುದಾಯದ ಜೊತೆಗೆ ತೊಡಗುವ ಎಲ್ಲಾ ವ್ಯಾಪರಗಳು, ಅವುಗಳ

ಹಿಂದಿರುವ ಎಲ್ಲಾ ಕಟ್ಟುಕಟ್ಟಳೆಗಳು ವಿಶಾಲವಾದ ಅರ್ಥದಲ್ಲಿ ವಾಗ್ವಾದಕ್ಕೆ ಅರ್ಹವಾದ ರಾಜಕೀಯವಾಗಬಹುದು.''[೯]

ಒಂದು ಸಮುದಾಯದ ರಾಜಕೀಯ ಪ್ರಜ್ಞೆಗೂ, ಆ ಸಮುದಾಯದ ಸಾಮಾಜಿಕ ಸ್ಥಿತ್ಯಂತರದ ಆಲೋಚನೆಗೂ ನಿಕಟ ಸಂಬಂಧವಿರುತ್ತದೆ ಎಂಬುದು ಗಮನಾರ್ಹ. ಪ್ಲೇಟೋ, ಅರಿಸ್ಟಾಟಲ್‌ರಂಥ ಕಾಲದಲ್ಲಿ ರಾಜಕೀಯ ಪ್ರಜ್ಞೆಗೆ ನೆಲದ ಸಂಸ್ಕೃತಿಯ ವಿವೇಕವಿತ್ತು. ಆದರೆ ಆಧುನಿಕ ಜಗತ್ತಿನ ರಾಜಕಾರಣಕ್ಕೆ ಜಾಗತೀಕರಣದ ಹಸಿವು ದಾಹದ ಪ್ರಭಾವಿದೆ. ಆದ್ದರಿಂದಲೇ ರಾಜಕಾರಣ ತನ್ನ ಸಮುದಾಯದ ಸಾಂಸ್ಕೃತಿಕ ವೈಲಕ್ಷಣದ ಅಡಿಯಲ್ಲಿ ಆಡಳಿತಾತ್ಮಕ ನೆಲೆಯನ್ನು ತೊಡಗಿಸಿಕೊಂಡಿರಬೇಕಾಗುತ್ತದೆ.

ಸಮುದಾಯವೊಂದು ಚಾರಿತ್ರಿಕ ಹಸಿವು ಹಾಗೂ ರಾಜಕೀಯ ಪ್ರಜ್ಞೆ ಎರಡನ್ನು ಹೊಂದಬೇಕಾದ್ದು ಸಹಜವೇ ಆಗಿದೆ. ಆದರೆ ಅದು ಆಯಾ ಸಮುದಾಯಗಳು ಅನುಭವಿಸಿದ ಶೋಷಣೆಯನ್ನು ಸ್ಥಿರೀಕರಿಸುವ ಮತ್ತು ನೈತಿಕ ವಿವೇಕವನ್ನು ನಾಶಪಡಿಸಿಕೊಳ್ಳುವ ಮೂಲಕ ಆಳರಸರ ಅವಿವೇಕ ಕೃತಿಗಳಿಗೆಲ್ಲಾ ಸಾಕ್ಷಿಭೂತದಂತೆ ಬಲಿಯಾಗುವುದರ ಮೂಲಕ ವಲ್ಲ. ಅದಕ್ಕೆ ಬದಲಾಗಿ ತನ್ನ ಸಮುದಾಯದ ಮೇಲೆ ನಡೆದ ''ದೌರ್ಜನ್ಯ ಹಾಗೂ ಶೋಷಣೆಯ ವಿಕಾರ ಜಗತ್ತನ್ನು ಬಯಲು ಮಾಡಲು ಚಾರಿತ್ರಿಕ ಪ್ರಜ್ಞೆ ಪ್ರಯತ್ನಿಸಿದರೆ, ರಾಜಕೀಯ ಪ್ರಜ್ಞೆ ಆಧುನಿಕ ಕಾಲಘಟ್ಟದಲ್ಲಿ ಈ ಶೋಷಣೆ, ದೌರ್ಜನ್ಯಗಳಿಂದ ಹೊರಬರುವ ಪ್ರಬಲ ನಾಯಕತ್ವ ರೂಪಿಸುತ್ತದೆ.''[೧೦] ಜೊತೆಗೆ ಅಧಿಕಾರವನ್ನು ಪಡೆದು ಸಮಾನತಾ ಸಂವೇದನೆಯುಳ್ಳ ಮಾನವೀಯ ವ್ಯವಸ್ಥೆಯೊಂದನ್ನು ಸೃಷ್ಟಿಸುತ್ತದೆ.

ಒಟ್ಟಾರೆ ಈ ದಿಸೆಯಲ್ಲಿ ದೀವರ ಸಮಗ್ರ ರಾಜಕೀಯ ಪ್ರಜ್ಞೆ ಹಾಗೂ ನಿಲುವುಗಳನ್ನು ವಿವೇಚಿಸಬಹುದಾಗಿದೆ. ಅನಾದಿಕಾಲದಿಂದ ಈ ವರೆಗೂ ಪ್ರಭುತ್ವ ಸ್ಥಾಪನೆ, ವಿಘಟನೆ, ಹೋರಾಟ, ಸಂಘರ್ಷ, ಬಲಿದಾನ, ನಂಬಿಕೆ, ನಿಯತ್ತು, ತಪ್ಪಿದರೆ ಬಂಡಾಯ ಎಲ್ಲವನ್ನು ಒಳಗೊಂಡೇ ಬಂದ ದೀವರ ರಾಜಕೀಯ ಚರಿತ್ರೆ ವಿಶಾಲವಾದುದು.

ಕತ್ತಿ ಹಾಗೂ ರಕ್ತಕ್ಕೆ ತಲೆಕೊಟ್ಟಿದ್ದು, ಹೋರಾಟ ಹಾಗೂ ನಂಬಿಕೆಗಳಿಗೆ ಮನಸ್ಸು ಕೊಟ್ಟಿದ್ದು, ವಿದ್ರೋಹಕ್ಕೆ ಬೆನ್ನುಕೊಟ್ಟಿದ್ದು, ನಿಯತ್ತಿಗೆ ನಾಲಿಗೆ ಕೊಟ್ಟಿದ್ದು, ದೀವರ ಪರಂಪರೆಯ ಪ್ರಧಾನ ಆಶಯಗಳು, ಕೆಳದಿಯ ಅರಸರ ಉತ್ಕರ್ಷ ಹಾಗೂ ಆಕರ್ಷಕದಲ್ಲಿ ತಿಮ್ಮಣ್ಣನಾಯಕ ಹಾಗೂ ದೀವರ ಪಾತ್ರ. ಕುಮಾರರಾಮನ ಬಗ್ಗೆ ಹೊಂದಿದ ಅಭಿಮಾನ, ಮೈಸೂರು, ಇಕ್ಕೇರಿಯ ಅರಸರ ಜೊತೆ ಕಂಡುಕೊಂಡ ಸಂಬಂಧಗಳು ಕೂಡಾ ಇಲ್ಲಿ ಗಮನಾರ್ಹವೆನಿಸುತ್ತವೆ.

ಕೆಳದಿ, ಮೈಸೂರು ರಾಜಸತ್ತೆಯ ಪತನಾನಂತರ ದೀವ ಸಮುದಾಯ ಪ್ರಭುತ್ವಗಳ ವಿರೋಧದೊಂದಿಗೆ ಕಾಡು ಹಾಗೂ ವ್ಯವಸಾಯದೆಡೆಗೆ ಮುಖಮಾಡಿತು. ''ವಸಾಹತುಶಾಹಿಯ ಆಡಳಿತ ಸಂದರ್ಭದಲ್ಲಿ ದೀವರನ್ನು ವಿದ್ರೋಹಿ ಜನಾಂಗವೆಂದು, ಊಳಿಗಮಾನ್ಯ ಆಳುಗಳೆಂದು ತೀವ್ರ ನಿರ್ಲಕ್ಷ್ಯಕ್ಕೆ ಒಳಪಡಿಸಲಾಯಿತು.''[೧೧] ನೈಜ ಒಡೆಯರಾಗಿದ್ದಂಥವರು ಗೇಣಿದಾರರಾಗಿ ಬಾಳುವಂತಾಯ್ತು. ಆದರೆ ಶತಶತಮಾನದ ವನವಾಸದ ಆಳದಲ್ಲಿಯೇ ಪ್ರತಿಭಟನೆಯ ಬೀಜ ಅಂತರ್ಯದಲ್ಲಿ ಮೊಳೆಯುತ್ತಿತ್ತು.

ಕಾಗೋಡಿನ ರೈತ ಚಳುವಳಿ ಇದಕ್ಕೆ ಸ್ಪಷ್ಟ ಆಯಾಮ ನೀಡಿತು. ಅದಕ್ಕೂ ಮುನ್ನ ಸ್ವಾತಂತ್ರ್ಯದ ಚಳುವಳಿಯಲ್ಲಿ ದೀವರ ನಾಯಕರು ಭಾಗವಹಿಸಿದ್ದರೂ ಕೂಡ. ನೈಜ ಸ್ವಾತಂತ್ರ್ಯದ ಅರಿವು ಮೂಡಿಸಿದ್ದೂ ಕಾಗೋಡ್ ಚಳುವಳಿಯೇ. ''ಈ ಚಳುವಳಿ ಕೊಳಗವನ್ನು ಪ್ರಧಾನ ಆಶಯವಾಗಿಟ್ಟುಕೊಂಡರೂ ಒಡಲಾಳದಲ್ಲಿ

ಬೇಯುತ್ತಿದ್ದುದು ಬಿಡುಗಡೆಯ ಹಂಬಲ. ಈ ಹಂಬಲಕ್ಕೆ ಆಳದಲ್ಲಿನ ಪರಂಪರೆಯ ಬೇರುಗಳು ಹಾಗೂ ಚರಿತ್ರೆಯ ಟಿಸಿಲುಗಳು ಪರೋಕ್ಷವಾಗಿ ಚೈತನ್ಯ ನೀಡುತ್ತಲೇ ಬಂದವು.''[೧೩] ವಸಾಹತ್ತೋತ್ತರ ಕಾಲದ ರಾಜಕೀಯ ಬೆಳವಣಿಗೆಯನ್ನು ಇಲ್ಲಿ ಗುರುತಿಸಲಾಗದಿದ್ದರೂ ರಾಜಕೀಯ ಪ್ರಭುತ್ವವು ಸ್ವಾತಂತ್ರ್ಯ ನಂತರದಲ್ಲಿ ದೀವರ ಪಾತ್ರವನ್ನು ಹೇಗೆ ಸ್ವೀಕರಿಸಿತು ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

**ರಾಜಕೀಯ ಪ್ರಭಾವ:** ಶಾಂತವೇರಿ ಗೋಪಾಲಗೌಡರು ಕಾಗೋಡ್ ಚಳುವಳಿಗೆ ಬಂದ ನಂತರ ದೀವರಲ್ಲಿ ರಾಜಕೀಯ ಪ್ರಜ್ಞೆಗೆ ವಿಶೇಷ ಆಯಾಮ ದೊರಕಿತು. ಎಸ್. ಬಂಗಾರಪ್ಪ ಹಾಗೂ ಕಾಗೋಡ್ ತಿಮ್ಮಪ್ಪನವರು ನಾಯಕತ್ವ ವಹಿಸಿದ ಮೇಲೆ ಅದರ ಪ್ರಭಾವ ಮತ್ತಷ್ಟು ವಿಸ್ತರಿಸಿತು. ಆದಾಗ್ಯೂ ಇಲ್ಲಿಂದಲೇ ದೀವರ ರಾಜಕೀಯ ನಾಯಕತ್ವ ಆರಂಭವಾಯಿತೆಂದರೆ ತಪ್ಪಾಗಲಾರದು. ದೀವರಿಗೆ ರಾಜಕೀಯ ಪ್ರಬುದ್ಧ ನಾಯಕತ್ವ ಲಭಿಸಲು ೧೯೬೭ರವರೆಗೆ ಕಾಯಬೇಕಾಯ್ತು. ಸತತ ಎರಡು ಸೋಲುಗಳು ಸಂಭವಿಸಿದ್ದರಿಂದ ಸೊರಬ ಕ್ಷೇತ್ರದಲ್ಲಿ ಯುವನಾಯಕರಾದ ಬಂಗಾರಪ್ಪನವರಿಗೆ ಟಿಕೇಟು ಕೊಡಬೇಕೆಂದು ತಿಮ್ಮಪ್ಪನವನರು, ಜೆ.ಎಚ್. ಪಟೇಲರು ಗೋಪಾಲಗೌಡರ ಮೇಲೆ ಒತ್ತಡ ತಂದು ಯಶಸ್ವಿಯಾದರು. ಸಾಗರದಲ್ಲಿ ಕಾಗೋಡ್ ತಿಮ್ಮಪ್ಪನವರದೇ ಅಭ್ಯರ್ಥಿಯಾದರು. ಬಂಗಾರಪ್ಪನವರು ಗೆಲುವಿನ ದಡ ಹತ್ತಿದರೆ ತಿಮ್ಮಪ್ಪನವರು ಸೋಲು ಅನುಭವಿಸಿದರು. ಬಂಗಾರಪ್ಪನವರ ಗೆಲುವು ದೀವರ ಸಮಗ್ರ ಒಕ್ಕೂಟದ ಕಾರಣಕ್ಕೆ ಸಂಭವಿಸಿದರೆ, ಸಾಗರದಲ್ಲಿ ಬಹುಸಂಖ್ಯಾತ ದೀವರು ಹೆಚ್ಚಿನ ಪ್ರಮಾಣದಲ್ಲಿ ಓಟು ಚಲಾಯಿಸದಿರುವುದೇ ತಿಮ್ಮಪ್ಪನವರ ಸೋಲಿಗೆ ಕಾರಣವಾಯಿತು. ಆದರೆ ೧೯೬೭ರ ತಿಮ್ಮಪ್ಪನವರ ಸೋಲು ೧೯೭೨ರ ಗೆಲುವಿಗೆ ನೈತಿಕ ಸ್ಥೈರ್ಯ ಒದಗಿಸಿತು.

೧೯೬೭ರಿಂದ ಎಂಟು ಬಾರಿ ಬಂಗಾರಪ್ಪನವರು ಸತತ ವಿಜಯ ಸಾಧಿಸುತ್ತಲೇ ಬಂದರು. ನಾಡಿನ ರಾಜಕೀಯದ ಏರಿಳಿತ ಹಾಗೂ ಆಯಾ ಕಾಲದ ಸಂದರ್ಭಕ್ಕೆ ಅನುಗುಣವಾಗಿ ಬಂಗಾರಪ್ಪನವರು ಬಹುಮುಖ್ಯ ಪಾತ್ರವಹಿಸುತ್ತಲೇ ಬಂದಿದ್ದಾರೆ. 'ಕ್ರಾಂತಿರಂಗ' ಸೇರಿ ಆ ಪಕ್ಷವನ್ನು ಅಧಿಕಾರಕ್ಕೆ ತಂದರೆ ಮುಖ್ಯಮಂತ್ರಿತ್ವ ರಾಮಕೃಷ್ಣ ಹೆಗಡೆಯವರ ಕಾಲಾವಧಿಯಲ್ಲಿ ೧೯೯೪ರಲ್ಲಿ ಕರ್ನಾಟಕ ಕಾಂಗ್ರೆಸ್ ಕಟ್ಟಿದಾಗಲೂ ಕಾಂಗ್ರೆ ಸೋತಿತು. ಈಗ ೨೦೦೪ ರಲ್ಲಿ ಬಿ.ಜೆ.ಪಿ. ಸೇರಿದಾಗಲೂ ಕಾಂಗ್ರೆ ಹಿನಾಯ ಸೋಲು ಕಂಡಿದೆ. ಒಟ್ಟಾರೆ ಬಂಗಾರಪ್ಪ ಶಕ್ತಿ ಕೇಂದ್ರಿತ್ವದ ರಾಜಕೀಯ ನಾಯಕ ಎಂಬುದರಲ್ಲಿ ಎರಡು ಮಾತಿಲ್ಲ. ಹಠ ಹಾಗೂ ಛಲ ಎರಡು ಬಂಗಾರಪ್ಪನವರ ಹುಟ್ಟುಗುಣ. ರಾಜ್ಯದ ಮುಖ್ಯಮಂತ್ರಿ ಹಾದಿಯವರೆಗೆ ಒಬ್ಬ ಗೇಣಿದಾರನ ಮಗ ನೆಡೆದ ದಾರಿಯೇ ಬಹು ವೈಶಿಷ್ಟ್ಯಪೂರ್ಣವಾದುದು. ರಾಜಕೀಯ ಪಂಡಿತರ ಪ್ರಕಾರ ರಾಜ್ಯದ ಸರಿಸುಮಾರು ಶೇ. ೧೪ರಷ್ಟು ಜನ ಬಂಗಾರಪ್ಪನವರ ರಾಜಕೀಯ ದಾರಿಯನ್ನು ತುಳಿಯುತ್ತಾರೆ. ಎಂಬುದಂತೂ ಸತ್ಯ. ಏನಿಲ್ಲವೆಂದರೂ ಕನಿಷ್ಠ ೩೦ರಿಂದ೩೫ ಕ್ಷೇತ್ರಗಳಲ್ಲಿ ಯಾವ ಅಭ್ಯರ್ಥಿಯನ್ನಾದರೂ ಸೋಲಿಸುವ ಸ್ಥೈರ್ಯ ಬಂಗಾರಪ್ಪನವರಿಗಿದೆ.

ಕಾಗೋಡ್ ತಿಮ್ಮಪ್ಪನವರು ಶಕ್ತಿ ಕೇಂದ್ರದ ರಾಜಕೀಯ ವೀರರಲ್ಲ. ಬದಲಿಗೆ ಸಾಮಾಜಿಕ ಅಭ್ಯುದಯದ ಹರಿಕಾರ. ತಲೆಯೊಳಗೆ ಅಭಿವೃದ್ಧಿಯ ನಕ್ಷೆಯನ್ನಿಟ್ಟು ಕೊಂಡಂತವರು. ನಮ್ಮ ಜನರಿಗೆ ಸರ್ಕಾರದ ಅಭಿವೃದ್ಧಿ ಯೋಜನೆಗಳಾದ ಶಿಕ್ಷಣ, ಆರೋಗ್ಯ, ವಸತಿ, ರಸ್ತೆಗಳು ತಲುಪಿದಷ್ಟು ಅವರು ಅಭಿವೃದ್ಧಿ ಹೊಂದುತ್ತಾರೆ ಎಂದು ಆಶಿಸಿದವರು. ಬಹುತೇಕ ೧೯೮೦ರ ನಂತರ ಬಂದ ಪ್ರತಿ ಮುಖ್ಯಮಂತ್ರಿಗಳ ಅಧಿಕಾರವಧಿಯಲ್ಲಿಯೂ ಕಾಗೋಡ್ ತಿಮ್ಮಪ್ಪನವರು ಉನ್ನತ ಹುದ್ದೆಯನ್ನು ಹೊಂದುತ್ತಲೇ ಬಂದಿದ್ದಾರೆ.

೨೦೦೪ ಲೋಕಸಭಾ ಚುನಾವಣೆಯಲ್ಲಿ ಶ್ರೀ.ಎಸ್. ಬಂಗಾರಪ್ಪನವರು ಭಾರತೀಯ ಜನತಾ ಪಕ್ಷದಿಂದ ಗೆದ್ದರೆ ಕ್ರಮವಾಗಿ ಸೊರಬ ವಿಧಾನಸಭಾ ಕ್ಷೇತ್ರದಿಂದ ಕುಮಾರಬಂಗಾರಪ್ಪನವರು, ಸಾಗರ ಕ್ಷೇತ್ರದಿಂದ ಬೇಳೂರು ಗೋಪಾಲಕೃಷ್ಣ ಅವರು, ಹೊಸನಗರ ಕ್ಷೇತ್ರದಿಂದ ಹರತಾಳು ಹಾಲಪ್ಪನವರು ಜಯಗೊಳಿಸಿ ದೀವರ ಹೊಸಪೀಳಿಗೆಯ ನಾಯಕತ್ವವನ್ನು ಮುಂದುವರಿಸಿದರು. ಈ ಹೊಸಮುಖಗಳು ದೀವರ ಮುಂದಿನ ರಾಜಕಾರಣದ ಆಶಾಕಿರಣಗಳಾಗಬಲ್ಲವು ಎಂಬುದು ಸಮುದಾಯದ ಜನರ ನಿರೀಕ್ಷೆ.

ಒಟ್ಟಾರೆ ದೀವರ ರಾಜಕೀಯ ಪ್ರಾತಿನಿಧ್ಯ ಹಾಗೂ ಪ್ರಭಾವನ್ನೂ ಮಲೆನಾಡಿನಲ್ಲಿ ಗಮನಿಸಿದಾಗ ದಟ್ಟವಾದ ಪ್ರಭಾವ ವಲಯವೇ ಮೂಡಿಬಂದಿದೆ. ಬಹುತೇಕ ಗ್ರಾಮಪಂಚಾಯತಿಗಳಲ್ಲಿ ನಾಯಕತ್ವ ಲಭಿಸಿದೆ. ಪದವೀಧರರು ವಿದ್ಯಾವಂತರು ಗ್ರಾಮಪಂಚಾಯಿತಿ ಸದಸ್ಯರಾಗಿ ಆಯ್ಕೆಯಾಗುತ್ತಿರುವುದು ಸಂತಸವೇ ಸರಿ. ಆದರೆ ಮುಖ್ಯವಾದುದೆಂದರೆ ಇವರಿಂದ ಎಷ್ಟರ ಮಟ್ಟಿಗೆ ಸಮುದಾಯಕ್ಕೆ ಒಳಿತಾಗಿದೆ. ಎಂಬುದಷ್ಟೇ ಹೊಸತಲೆಮಾರಿನಲ್ಲಿ ರಾಜಕಾರಣದ ಬಗ್ಗೆ ತೀವ್ರ ಕುತೂಹಲ ಮತ್ತು ಆಸಕ್ತಿ ಇದ್ದು ಯುವನಾಯಕರು ವ್ಯಾಪಕವಾಗಿ ಪ್ರತಿ ತಾಲೂಕಿನಲ್ಲಿಯೂ ಕಾಣಿಸಿಕೊಳ್ಳುತ್ತಿದ್ದಾರೆ.

**ಅಡಿಟಿಪ್ಪಣಿಗಳು**

೧. ಬೋರಲಿಂಗಯ್ಯ ಹಿ.ಚಿ., ಎನ್. ಹುಚ್ಚಪ್ಪ ಮಾಸ್ತರ್., (೨೦೦೨), ಕಾಗೋಡು ಚಳುವಳಿ ಸುವರ್ಣಸಂಪುಟ, ಪು.೧೯

೨. ವೆಂಕಟರಾವ್ ಡಿ., (೧೯೮೫), ಕೃಷಿಬೆಳವಣಿಗೆ, ಪು. ೬

೩. ಆರ್ಯ ಈಡಿಗ ಸಂಘ ನಡೆದುಬಂದ ದಾರಿ, ಪು. ೭೮

೪. ಡಿಸೋಜ ನಾ., ಕ್ಷೇತ್ರಕಾರ್ಯ ಮಾಹಿತಿ,

೫. ವೀಣಾ ಎಂ.ಪಿ., ಮನೆಸಮಾಜ ಮತ್ತು ಸಂಸ್ಕೃತಿ, ಪು. ೪೪

೬. ಇರಾವತಿ ಕರ್ವೆ., (೧೯೬೮), ಕಿನ್‌ಶಿಪ್ ಆರ್ಗನೈಜೇಷನ್ ಇನ್ ಇಂಡಿಯಾ, ಪು. ೬೬

೭. ಜೋಷಿ ಪಿ.ಸಿ., ಎಜುಕೇಟಿಂಗ್ ರೂರಲ್ ಚಿಲ್ಡ್ರನ್ ಥ್ರೂ ಟೆಲಿವಿಜನ್, ಪು. ೪

೮. ದೇಜಪ್ಪ ಎಂ., ಬಿಲ್ಲವರು ಒಂದು ಹಿನ್ನೋಟ, ಪು. ೮೪

೯. ಶ್ರೀನಿವಾಸ ಎಂ.ಎಸ್., (೧೯೭೬), ಇಂಡಿಯಾಸ್ ವಿಲೇಜ್, ಪು. ೬೮

೧೦. ಗೋಸ್ ಬಿಮಲ್., (೧೯೮೯), ಪ್ರೊಫೈಲ್ ಆಫ್ ಸೋಷಿಯಲ್ ಚೇಂಜ್, ಪು. ೪೮

೧೧. ರೋಹಿದಾಸ್., ನಾವು ಯಾರು, ಪು. ೪೫

೧೨. ಡಿಸೋಜ ನಾ., (೨೦೦೪), ಕೊಳಗ, ಪು. ೧೮

## ಅಧ್ಯಾಯ:೪

## ದೀವರು ಮತ್ತು ಭೂಮಿ

ದೀವರಲ್ಲಿ ಭೂಮಿಯ ಪರಿಕಲ್ಪನೆ ಮತ್ತು ಸಂಬಂಧ

ದೀವರಲ್ಲಿ ಭೂಮಿಗೆ ಸಂಬಂಧಿಸಿದ ಕಥೆಗಳು

ಬೇಸಾಯ ಪದ್ಧತಿ

ಕೃಷಿಗೆ ಸಂಬಂಧಿಸಿದ ಹಬ್ಬಗಳು

ಗೌರಿ ಹಬ್ಬ

ಭೂಮಿ ಹುಣ್ಣಿಮೆ

ಕೃಷಿಗೆ ಸಂಬಂಧಿಸಿದ ದೀವರ ಚಿತ್ತಾರದ ಕಲೆಗಳು

ಹಸೆಯ ಚಿತ್ತಾರದ ಕಲೆಗಳು

ಚಿತ್ತಾರದ ಕಲೆಗಳು

ಕಾಗೋಡು ರೈತ ಸತ್ಯಾಗ್ರಹದಲ್ಲಿ ದೀವರ ಪಾತ್ರ

## ದೀವರಲ್ಲಿ ಭೂಮಿಯ ಪರಿಕಲ್ಪನೆ ಮತ್ತು ಸಂಬಂಧ

ದೀವರಿಗೂ ಭೂಮಿಗೂ ಇರುವ ನಂಟು ಇಂದು ನಿನ್ನೆಯದಲ್ಲ. ಇದು ಸೃಷ್ಟಿಯ ಆದಿಯಿಂದಲೇ ಈ ಸಂಬಂಧ ಬೆಳೆದುಕೊಂಡು, ಉಳಿದುಕೊಂಡು ಬಂದಿದೆ. ''ಅನಾದಿಕಾಲದಿಂದಲೂ ಮಾನವ ಭೂಮಿಯ ಸತ್ವವನ್ನು ಹೀರಿಕೊಂಡು ತನ್ನ ಬದುಕನ್ನು ರಕ್ಷಿಸಿಕೊಳ್ಳುತ್ತಾ ಬಂದಿದ್ದಾನೆ. ನಮಗೆ ಬೇಕಾದುದ್ದೆಲ್ಲ ಭೂಮಿಯಿಂದ ದೊರೆಯುವುದು.''[1] ಮಾನವ ಭೂಮಿಯನ್ನು ಮರೆಯುವಂತಿಯೇ ಇಲ್ಲ. ಅದು ನಮ್ಮ ಪಾಲಿಗೆ ನಿರ್ಜೀವ ವಸ್ತುವಲ್ಲ. ನಮ್ಮೆಲ್ಲರನ್ನು ತನ್ನೆದೆಯ ಸತ್ವದಿಂದ ಪೋಷಿಸುತ್ತಿರುವ ಭೂಮಾತೆ, ಧರಿತ್ರೀ ಮಾತೆ, ಆಕೆಯನ್ನು ನಿರ್ಲಕ್ಷಿಸಿದ್ದಲ್ಲಿ ವಿಶ್ವದಲ್ಲಿ ಅಸ್ತಿತ್ವವೇ ಉಳಿಯಲಾರದು ಎಂಬ ನಂಬಿಕೆಯನ್ನು ದೀವರು ಕಂಡುಕೊಂಡಿದ್ದಾರೆ. ಮಾನವ ತನ್ನ ಬಾಳಿಗೆ ಬೇಕಾಗಿರುವ ಭೂಮಿಯನ್ನು ಉತ್ತಮ ರೀತಿಯಿಂದ ಉಪಯೋಗಿಸಿಕೊಳ್ಳಬೇಕು. ಆಗಲೇ ಅವನು ಉತ್ತಮ ರೀತಿಯಿಂದ ಬಾಳಿ ಬದುಕಲು ಸಾಧ್ಯ. ಈ ದೃಷ್ಟಿಯಿಂದ ಭೂಮಿಯು ಎಂದೆಂದಿಗೂ ಬಡವಾಗದಂತೆ ನೋಡಿಕೊಳ್ಳಬೇಕು. ಅಂದರೆ ಭೂಮಿಯ ಫಲಪತ್ತತೆಯನ್ನು ರಕ್ಷಿಸಿಕೊಳ್ಳಬೇಕು. ''ಭೂಮಿಯ ಸತ್ವವನ್ನು ಬ್ಯಾಂಕ್‌ನಲ್ಲಿ ಠೇವಣಿ ಇದ್ದಂತೆ ''[2]ಎಂದಿದ್ದಾರೆ.

ಭೂಮಿ ಸರ್ವಜನ ಕೋಟೆಯ ಮುಖ್ಯ ಆಧಾರ, ಮಣ್ಣಿನಿಂದ ಸಕಲ ವಸ್ತುಗಳು ಎಂದು ಪುರಂದರದಾಸರು ಹಾಡಿದರು. ಅವರ ಈ ನುಡಿ ನಿಜಕ್ಕೂ ಅರ್ಥಗರ್ಭಿತ. ವಿಶ್ವಶಾಂತಿಯ ಮೂಲವೇ ಭೂಮಿಯಲ್ಲಿದೆ. ವಿಶ್ವದ ತಂತ್ರ ಮಣ್ಣಿನಲ್ಲಿ ಸಮರಸಗೊಂಡಿದೆ. ವಿಶ್ವದ ಜೀವಾಳವೇ ಭೂಮಿಯಲ್ಲಿ ಅಡಗಿದೆ. ''ಮನುಷ್ಯನ ಮಾನವತೆ ಭೂಮಿಯ ಆಗರದಲ್ಲಿದೆ. ಭೂಮಿಯಿಂದಲೇ ಮಾನವನ ಕಲ್ಯಾಣ. ಆದ್ದರಿಂದ ಭೂಮಿಯನ್ನು ಕಡೆಗಣಿಸುವಂತಿಲ್ಲ. 'ಆತ್ಮ' ನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ಪೃಥ್ವಿ.[3]'' ಎಂದು ಸೃಷ್ಟಿ ನಿರ್ಮಾಣದ ಕ್ರಮವನ್ನು ವರ್ಣಿಸಲಾಗಿದೆ. ಆದರೆ ಇವುಗಳಲ್ಲಿ ಕಡೆಯದಾದ 'ಪೃಥ್ವಿ' ಪಂಚಮಹಾಭೂತಗಳಲ್ಲೇ ಹೆಚ್ಚಿನದಾದ ನಿಸರ್ಗದ ಕೊಡುಗೆ ಎನ್ನಬಹುದು.

ಬಹುರತ್ನ ವಸುಂದರಾ ಎಂಬಂತೆ ನಮ್ಮನ್ನು ಹೊತ್ತಿರುವ ಈ ಪೃಥ್ವಿ ರತ್ನಗರ್ಭ ಎಂಬುದರಲ್ಲಿ ಸಂಶಯವಿಲ್ಲ. ಅನಾದಿಕಾಲದಿಂದಲೂ ಇದು ನಮ್ಮ ಮೂಲಭೂತ ಅಗತ್ಯೆಗಳಲ್ಲೊಂದಾದ ಆಹಾರ ಧಾನ್ಯಗಳನ್ನು ಒದಗಿಸುತ್ತಾ ಬಂದಿದೆ. ದೇಶದಲ್ಲಿ ಕ್ಷಾಮ ಡಾಮರಗಳು ತಲೆದೋರಿದಾಗ ಪ್ರಕೃತಿಯ ಸಹಜ ಪರಿಕರಗಳನ್ನು ನೀಡಿ ತನ್ನ ಸಂತಾನದ ಕ್ಷುದ್ಬಾಧೆಯನ್ನು ತಕ್ಕಮಟ್ಟಿಗೆ ಪರಿಹರಿಸುವ ಈ ಪೃಥ್ವಿ ನಿಜಕ್ಕೂ ಅನ್ನಪೂರ್ಣೆಯೇ ಸರಿ. ಆದ್ದರಿಂದಲೇ ದಾರ್ಶನಿಕರು, ಧರ್ಮ ಸಂಸ್ಥಾಪಕರು, ಸಾಹಿತಿಗಳು, ವೇದಾಂತಿಗಳು, ಮಹಾಪುರುಷರು ಎಲ್ಲರು ಭೂಮಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಅದನ್ನು 'ಭೂದೇವಿ' ಎಂದು ಸಂಬೋಧಿಸಿದ್ದಾರೆ.

ಬುಡಕಟ್ಟು ಸಮುದಾಯವಾದ ದೀವರು ಹುಟ್ಟಿದಾಗಿನಿಂದಲೂ ಭೂಮಿಗೆ ನೇರವಾದ ನಿಕಟ ಸಂಬಂಧವನ್ನು ಕಲ್ಪಿಸಿಕೊಂಡು ಬಂದಿದ್ದಾರೆ. ಮಣ್ಣಿನಿಂದ ಬಂದ ಮಾನವ ಅಂತ್ಯದಲ್ಲಿ ಮಣ್ಣಿನಲ್ಲೇ ಐಕ್ಯ ಹೊಂದುವನೆಂದು

ಅವರು  ಭಾವಿಸಿದ್ದಾರೆ. “ಭೂಮಿಯಿಲ್ಲದೆ ಸಸ್ಯವಿಲ್ಲ, ಸಸ್ಯವಿಲ್ಲದೆ ವ್ಯವಸಾಯವಿಲ್ಲ, ಜಲಾಶಯಗಳಿಲ್ಲ, ವಿದ್ಯುಚ್ಛಕ್ತಿ ಇಲ್ಲ, ಭೂಭದ್ರತೆ, ಫಲವತ್ತತೆ, ಸಾರ ಸಂಗ್ರಹಗಳಿಲ್ಲ, ಹವೆಯ ಸಮತೋಲನವಿಲ್ಲ, ಅಷ್ಟೇಕೆ ಜೀವಿ ಬದುಕಲು ಸಾಧ್ಯವಿಲ್ಲ.’’[೪] ಇದರಿಂದ ಮಾನವ ಜೀವನಕ್ಕೆ ಭೂಮಿ ಮುಖ್ಯವಾದ ಮೂಲವೆಂದು ತಿಳಿಯುತ್ತದೆ. ನಿರ್ಜೀವವಾದ ಭೂಮಿಯಲ್ಲಿ ಫಲವತ್ತಾದ ‘ಜೀವ ನಿರ್ಮಾಣಶಕ್ತಿ’ ಅಡಗಿದೆ ಎಂಬುದು ಅವರು ಭೂಮಿಯ ಬಗ್ಗೆ ಕಂಡು ಕೊಂಡ ನಂಬಿಕೆಯನ್ನು ಪ್ರತಿಬಿಂಬಿಸುತ್ತದೆ.

‘‘ನೀರು ಮತ್ತು ಭೂಮಿ ರಾಷ್ಟ್ರದ ಮೂಲ ಸಂಪತ್ತುಗಳಾಗಿವೆ. ಈ ಎರಡು ವಸ್ತುಗಳನ್ನು ಎಷ್ಟು ದಕ್ಷತೆಯಿಂದ  ಬಳಸಿಕೊಳ್ಳಲಾಗುತ್ತದೆ ಎನ್ನುವುದರ ಮೇಲೆ ರಾಷ್ಟ್ರದ ಆರ್ಥಿಕಾಭಿವೃದ್ಧಿ ನೆಲೆಸಿದೆ.’’[೫] ಆದ್ದರಿಂದ ಭೂಮಿಯ ಬಗ್ಗೆ ಆಳವಾದ ಮತ್ತು ವೈಜ್ಞಾನಿಕವಾದ ಅಧ್ಯಯನ ಅಗತ್ಯವಿದೆ.

ದೀವರು ಮತ್ತು ಭೂಮಿಯ ನಡುವಿನ ಸಂಬಂಧ ಅವಿನಾಭಾವಿಯಾದದ್ದು. “ದೀವರನ್ನು ಬಿಟ್ಟರೆ ಭೂಮಿಯಿಲ್ಲ. ಭೂಮಿಯನ್ನು ಬಿಟ್ಟರೆ ದೀವರಿಲ್ಲ.” ಹೀಗೆ ಭೂಮಿಯೊಂದಿಗೆ ಸಾಮರಸ್ಯದಿಂದ ಬಾಳುತ್ತಿದ್ದಾರೆ. ಭಾರತೀಯ ಸಂಪ್ರದಾಯದಲ್ಲಿ ಭೂಮಿಯನ್ನು ‘ಮಾತೃ’ ಸ್ವರೂಪದಲ್ಲಿ ಕಾಣಲಾಗಿದೆ. ದೈವಿ ಸ್ವರೂಪದಲ್ಲಿ ಗೌರವಿಸಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಅಸಂಖ್ಯೆ ದೇವತೆಗಳಿದ್ದಾರೆ. ಅವರ ನಡುವೆ ಭೂದೇವಿಯ ಸ್ಥಾನ ವಿಶಿಷ್ಟವಾದದು. ಉಳಿದ ಸಾವಿರಾರು ದೇವತೆಗಳು ನಂಬಿದ ಭಕ್ತರಿಗೆ ವರಪ್ರಸಾದ ಕೊಡುವರೋ ಇಲ್ಲವೋ ಗೊತ್ತಿಲ್ಲ. ಆದರೆ ಭೂದೇವಿ ಮಾತ್ರ, ನಿಷ್ಠೆಯಿಂದ ದುಡಿದವರಿಗೆ ಯಾವಾಗಲೂ ಸುಖಸಮೃದ್ಧಿಗಳನ್ನು ನೀಡುತ್ತಾಳೆ ಎಂಬದು ದೀವರ ನಿಲುವಾಗಿದೆ. ಈ ಅರ್ಥದಲ್ಲಿ ನಿಜವಾಗಿ ವರಕೊಡಬಲ್ಲ ಪ್ರಪಂಚದ ಏಕೈಕ ಸತ್ಯ ದೇವತೆಯಂದರೆ ‘ಭೂದೇವಿ’ ಮಾತ್ರ ಎಂಬುದು ಅವರ ನಂಬಿಕೆಯಾಗಿದೆ.

‘‘ಭೂಮಿ ನಮಗೆಲ್ಲ ವಾಸಿಸಲು ಆಶ್ರಯಕೊಟ್ಟಿರುವ ಭೌತಿಕ ನೆಲೆಗಟ್ಟು.’’[೬] ಹೀಗೆ ಒಂದವೆ ಮಾನವಕೋಟೆಯ ವಾಸಿಸಲು  ನೆಲೆ ನೀಡಿರುವ ಭೂಮಿಯು ಇನ್ನೊಂದಡೆ ತನ್ನನ್ನು, ಉತ್ತಿ-ಬಿತ್ತಿ ಬೆಳೆಯುವವರಿಗೆ ದವಸಧಾನ್ಯಗಳನ್ನು  ಸಕಾಲಕ್ಕೆ ಕೊಟ್ಟು ಕಾಪಾಡುವ ಅನ್ನಕ್ಕೆ ನೆಲೆಯಾಗಿದ್ದಾಳೆ. ಹೀಗಾಗಿಯೇ ಪ್ರಪಂಚದಲ್ಲಿ ಭೂಮಿಗೆ ಇಡೀ ಮಾನವಕೋಟೆಯ ಭಕ್ತಿ ಗೌರವಗಳು ಸಲ್ಲುತ್ತವೆ ಎಂಬುವುದನ್ನು ದೀವರ ಮನದಾಳದಲ್ಲಿನ ಮಾತಿನಿಂದ ತಿಳಿಯಬಹುದಾಗಿದೆ.

ಮನುಷ್ಯನ ಬೌದ್ಧಿಕ ವಿಕಸನವಾದಂತೆ ಕೃಷಿ ಪರಿಕರಗಳನ್ನು  ಕಂಡುಕೊಂಡ. ಪ್ರಾಣಿಪಕ್ಷಿಗಳನ್ನು ತನ್ನ ನೆರವಿಗಾಗಿ ದುಡಿಸಿಕೊಳ್ಳುವ ವಿಧಾನಗಳನ್ನು ಕಂಡುಕೊಂಡ, ಮತ್ತು ಪ್ರಾಣಿಗಳ ನೆರವಿನಿಂದ ಭೂಮಿಯನ್ನು ಉತ್ತಿ-ಬಿತ್ತಿ ಬೆಳೆಯಲು ಕಲಿತ. ಹೀಗೆ ಜಗತ್ತಿನಲ್ಲಿ   ಮಾನವನ ಬೌದ್ಧಿಕ ವಿಕಸನದ ಚರಿತ್ರೆಯೇ ಭೂಮಿಯ ಚರಿತ್ರೆ, ಹಾಗೂ ಭೂಮಿಯ ಕುರಿತಾದ ನಮ್ಮ ಕಲ್ಪನೆಗಳ ಚರಿತ್ರೆಯಾಗಿದೆಯನ್ನಬಹುದು.

**ದೀವರಲ್ಲಿ ಭೂಮಿಗೆ ಸಂಬಂಧಿಸಿದ ಕಥಗಳು**

ದೀವರು ಮೂಲತಃ ಕೃಷಿಕರಾಗಿರುವುದರಿಂದ ಭೂಮಿಯ ಬಗ್ಗೆ ಅಚಲ ನಂಬಿಕೆಯನ್ನು ಹೊಂದಿದ್ದಾರೆ. ಅವರು ಪ್ರಕೃತಿ ಪ್ರೇಮಿಗಳಾಗಿರುವುದರಿಂದ ಭೂಮಿ ತಾಯಿ ಅವರನ್ನು ಆಲಂಗಿಸಿಕೊಂಡಿರುವಳೆಂದು ಅವರು ಭಾವಿಸಿಕೊಂಡಿದ್ದಾರೆ. ಭೂಮಿತಾಯಿ ನಾಡಿನ ಎಲ್ಲಾ ರೈತರಿಗೆ ಇತರೆ ಜೀವಸಂಕುಲಕ್ಕೆ ಜೀವದಾನದ ನೆಲೆಯಾಗಿದ್ದಾಳೆ. ಅವಳಿಗೆ ಎಲ್ಲಾ ಜೀವಿಗಳನ್ನು ಹೊತ್ತುಕೊಂಡು ಜೀವಿಸುವ ಸಾಮರ್ಥ್ಯವಿದೆ. ಹೀಗಿರುವಾಗ ಭೂಮಿಯ ಮೂಲದ ಬಗ್ಗೆ ಪ್ರತಿಯೊಂದು ಬುಡಕಟ್ಟು ಸಮುದಾಯದಲ್ಲಿ ಒಂದೊಂದು ರೀತಿಯ ನಂಬಿಕೆಗಳು

ಆಚರಣೆಗಳು ಪೂಜ್ಯ ನಮನಗಳು ಸಲ್ಲುವುದನ್ನು ಕಾಣುತ್ತೇವೆ. ಅದರೊಟ್ಟಿಗೆ ದೀವರ ಸಮುದಾಯವು ಕೂಡ ಭೂಮಿಯ ಸೃಷ್ಟಿಯ ಬಗ್ಗೆ ಕುರಿತ ಕಥೆಗಳನ್ನು ಅಷ್ಟಾಗಿ ಹೊಂದಿಲ್ಲವಾದರೂ ಅವರ ನಂಬಿಕೆಯ ನಿಲುವಿನಲ್ಲಿ ಕೆಲವೊಂದನ್ನು ಹೇಳುತ್ತಾರೆ. ದೀವರು ಭೂಮಿಯ ಬಗ್ಗೆ ನಂಬಿಕೆ, ಭಕ್ತಿ, ಗೌರವ, ಶ್ರದ್ಧೆ ಆರಾಧನೆಗಳು ಯಥೇಚ್ಛವಾಗಿರುವುದು ತಿಳಿದು ಬಂದರೂ ಭೂಮಿಯ ಸೃಷ್ಟಿಯ ಕುರಿತಾದ ಕಥೆಗಳು, ಪುರಾಣಗಳು ದೀವರಲ್ಲಿ ತೀರಾ ಕಡಿಮೆ ಎಂಬುವುದನ್ನು ಇಲ್ಲಿ ತಿಳಿಯಬಹುದಾಗಿದೆ. ಹಾಗಾಗಿಯೇ ನಾಡಿನ ಎಲ್ಲಾ ರೈತರಲ್ಲಿ ಪ್ರಚಲಿತವಿರುವ ಕಥೆಗಳು, ಪುರಾಣಗಳು ದೀವರ ಸಮುದಾಯಕ್ಕೆ ಸಂಬಂಧಿಸುತ್ತವೆ.

ಜನಪದರ ಸೃಷ್ಟಿ ಪುರಾಣಗಳಲ್ಲಿ ಭೂಮಿಯ ಉತ್ಪತ್ತಿ ಕುರಿತಾದ ಅನೇಕ ವಿಚಾರಗಳು ಬರುತ್ತವೆ. ಅವುಗಳಲ್ಲಿ 'ಭೂಮಿತಾಯಿ' ಎಂಬ ಕಲ್ಪನೆ. ಹಾಗೂ 'ದೇವತೆ' ಎಂಬ ಕಲ್ಪನೆ ಇವು ಪ್ರಮುಖವಾಗಿವೆ. ಆದಿ ಬಸವಣ್ಣನ ಕಥೆಯಲ್ಲಿ ಭೂಮಿಯ ಉಗಮದ ಕುರಿತಾದ ವಿವರಣೆ ಈ ಕೆಳಗಿನಂತೆ ಕಂಡು ಬರುತ್ತದೆ. "ತಾಯಿ ಉರಿಯಾದೇವಿ ಮಗ ಉರಿಯಾದೇವ ಏಳು ಸಮುದ್ರಗಳ ನಡುವೆ ಭೂಮಿಯನ್ನು ನಿರ್ಮಿಸುವಂತೆ ತಾಯಿಯು ಮಗನಿಗೆ ಹೇಳುತ್ತಾಳೆ. ಅದರ ಪ್ರಕಾರ ಮಗ ಭೂಮಿಯನ್ನು ನಿರ್ಮಿಸಿ ಕೆರೆಕಟ್ಟೆಗಳನ್ನು ಕಟ್ಟುತ್ತಾನೆ. ಹುಲ್ಲು ಬೆಳೆಸುತ್ತಾನೆ. ಆ ಹುಲ್ಲು ಮೇಯಲು ಬಸವಣ್ಣ ಬೇಕಾಗುತ್ತಾನೆ,  ಅದಕ್ಕಾಗಿ ತಾಯಿ-ಮಗ ಇಬ್ಬರೂ ತಮ್ಮ ಬೆವರಿನ ಮಣ್ಣಿನಿಂದ ಬಸವಣ್ಣನನ್ನು ನಿರ್ಮಿಸುತ್ತಾರೆ. ಮುಂದೆ ಬಸವಣ್ಣನೇ ತನ್ನ ಗಂಡನಾಗಬೇಕೆಂದು ಭೂಮಿತಾಯಿ ಆಶಿಸುತ್ತಾಳೆ. ಆದರೆ ಬಸವಣ್ಣ ಅದಕ್ಕೊಪ್ಪುವುದಿಲ್ಲ. ತಾಯಿಯಾದ ಭೂಮಿಯನ್ನು ವರಿಸುವುದು ಹೇಗೆಂಬ ಅಳಕು ಅವನದು. ಆದರೆ ಹೋದಡೆ ಎಲ್ಲ ಭೂಮಿ ಬೆಳೆಯುತ್ತ ಬಸವಣ್ಣನೇ ತನ್ನ ಗಂಡನಾಗಬೇಕೆಂದು ಹಲುಬುತ್ತಾಳೆ. ಕೊನೆಗೆ ಬಸವಣ್ಣ ಭೂಮಿಯನ್ನು ಆಳಬೇಕೆಂಬ ಉರಿಯಾದೇವಿಯ ಅಪ್ಪಣೆಯಂತೆ ಎಲ್ಲವೂ ಸಾಗುತ್ತದೆ.[೭]" ಈ ಕಥೆಯು ಒಕ್ಕಲುತನವನ್ನು ಮುಖ್ಯವನ್ನಾಗಿಸಿ ಮತ್ತು ಎತ್ತನ್ನು, ದೇವರೆಂದು ಭಾವಿಸುವ ದೀವರ  ಸಮುದಾಯಕ್ಕೂ ಸಂಬಂಧಪಟ್ಟಿರಬಹುದಾದ  ಕಲ್ಪನೆಯಾಗಿದೆ. "ಈ ಜಗತ್ತು ಮೊದಲು ನೀರಿನಿಂದ ಕೂಡಿತ್ತೆಂದು ನೀರಿನ ನಡುವೆ ಭೂಮಿ ಹುಟ್ಟಿತೆಂದೂ, ದೇವರಿಂದ ನಿರ್ಮಾಣಗೊಂಡ ಭೂಮಿಯಲ್ಲಿ ಮೊಟ್ಟ ಮೊದಲು  ಬಸವಣ್ಣ ಮೂಡಿದ ಎಂಬ ಕಲ್ಪನೆಗಳು ಈ ಕಥೆಯಲ್ಲಿಪ್ರತಿಬಿಂಬಿತವಾಗಿವೆ."[೮] ಅಂಬಿಗರಲ್ಲಿ ತಮ್ಮ ಜನಾಂಗದ ಮೂಲದ ಬಗ್ಗೆ ಇರುವ 'ಪುರಾಣದ' ಕಲ್ಪನೆಯಲ್ಲಿ ಭೂಮಿಯ ಸೃಷ್ಟಿಯ ಕುರಿತಾದ ಅವರ ತಿಳುವಳಿಕೆಯೂ ಅಡಕವಾಗಿದೆ.

"ಈ ಜಗತ್ತು ಮೊದಲು ನೀರಿನಿಂದ ಕೂಡಿತ್ತು. ಶಿವ ಮಾತ್ರ ಒಂದು ದೋಣಿಯಲ್ಲಿ ನೀರಿನ ಮೇಲೆ ತಿರುಗುತ್ತಿದ್ದ ಕ್ರಮೇಣ ನೀರು ತನ್ನ ಸುತ್ತಲೂ ಹೆಪ್ಪುಗಟ್ಟಿ ಭೂಮಿಯಾಗುತ್ತಾ ಹೊರಟಿತು. ನೀರಿನಲ್ಲಿ ಅನಂತ ಜೀವಕೋಟಿಗಳ ಉಗಮವೂ ಆರಂಭವಾಯಿತು. ನೀರಿನಲ್ಲಿದ್ದ ಮಾನವರನ್ನು ಶಿವ ದೋಣಿಯಲ್ಲಿ ಹಾಕಿಕೊಂಡು ಹೆಪ್ಪುಗಟ್ಟಿದ ನೆಲದ ಮೇಲೆ ಬಿಡತೊಡಗಿದ. ಶಿವನೊಂದಿಗೆ ಇನ್ನಷ್ಟು ಜನರು ಅವನ ಕೆಲಸದಲ್ಲಿ ನೆರವಾದರು. ಅತ್ತ ನೆಲದ ಮೇಲೆ ಉಳಿದ ಜನರು ತಮಗೆ ಅನುಕೂಲವಾದ ಸ್ಥಳ ಹುಡುಕಿಕೊಂಡು ಜೀವಿಸತೊಡಗಿದರು. ಶಿವನೊಂದಿಗೆ ಕೆಲವು ಜನ ನೀರಿನ ದಡದಲ್ಲಿಯೇ ಉಳಿದು ದೋಣಿ ನಡೆಸುವ ಕೆಲಸದೊಂದಿಗೆ ಜಲಚರಗಳನ್ನೇ ತಮ್ಮ ಆಹಾರವನ್ನಾಗಿಸಿಕೊಂಡು ಬದುಕತೊಡಗಿದರು. ಅವರೇ ಮುಂದೆ ಅಂಬಿಗರಾದರು."[೯] ಈ ಅಂಬಿಗರು ಬೇರೆ ಯಾರೂ ಅಲ್ಲ ದೀವರ ಸಂಬಂಧಿಗಳು. ಅದನ್ನು ಈ ಕೆಳಗಿನ ಕಥೆಯಲ್ಲಿ ತಿಳಿಯಬಹುದು. ಜಲಗಾರ ಕನ್ಯೆಯಾದ ಸತ್ಯವತಿಯು ದೋಣಿ ನಡೆಸುತ್ತಿರುವಾಗ ದೋಣಿಯಲ್ಲಿದ್ದ ಪರಾಶರ ಮುನಿಗಳು ಯೌವನ ಶೋಭೆಯಾದ ಸತ್ಯವತಿಯಿಂದ ಆಕರ್ಷಿತರಾಗಿ ಸಮಾಗಮ ಹೊಂದಿದರು. ಪರಿಣಾಮವಾಗಿ ತೇಜಪುಂಜನಾದ

ಮಗ ದ್ವೈಪಾಯಾನ ಹುಟ್ಟಿದನು. ಮುಂದೆ ಅವನೇ ದೀವನಾದ. ಈ ಒನ್ನೆಲೆಯಲ್ಲಿ ಮೇಲಿನ ಕಥೆ ದೀವರಿಗೆ ಸಂಬಂಧಿಸಿದೆ. ಈ ಕಥೆಯಲ್ಲಿ ನಿರೇ ಹೆಪ್ಪುಗಟ್ಟಿ ಭೂಮಿಯಾಯಿತೆಂದೂ ಆ ಭೂಮಿ ಮುಂದೆ ಮಾನವ ಜನಾಂಗದ ಬದುಕಿಗೆ ನೆಲೆಯಾಯಿತೆಂದು ನಂಬಿರುವುದು ತಿಳಿಯುತ್ತದೆ. ಆಕಾಶದ ಹೆಂಡತಿ ಭೂಮಿಯೆಂಬ 'ದ್ಯಾವಾಪೃಥ್ವಿ' ಯ ಕಲ್ಪನೆಯೂ ಭಾರತದಲ್ಲಿ ಬಹುಕಾಲದಿಂದ ಇರುವುದು ತಿಳಿದುಬರುತ್ತದೆ.

ಕಥಾಸರಿತ್ಸಾಗರದಲ್ಲಿನ ಒಂದು ಕಥೆ ಹೀಗೆ ಬರುತ್ತದೆ. ''ಬಹುದಿನಗಳ ಹಿಂದೆ ಪ್ರವಾಹಗಳ ಕೊನೆಯ ಕಾಲದಲ್ಲಿ ಭೂಮಿ ದ್ರವರೂಪದಲ್ಲಿತ್ತು. ಆಗ ಶಿವ ತನ್ನ ತೊಡೆಯನ್ನು ಕತ್ತರಿಸಿ ಒಂದು ಹನಿ ರಕ್ತವನ್ನು ಆ ನೀರಿಗೆ ಬೀಳಿಸಿದನು. ಅದೊಂದು ಮೊಟ್ಟೆಯ ಆಕಾರ ಪಡೆದುಕೊಂಡಿತು. ಶಿವ ಅದನ್ನು ಒಡೆದನು. ಅದರಿಂದ ಒಬ್ಬ ಪುರುಷ ಹೊರಬಂದನು. ಅವನಿಂದ ಪ್ರಪಂಚದ ಸೃಷ್ಟಿಯಾಗುವಂತೆ ಶಿವಪ್ರಕೃತಿಯನ್ನು ನಿರ್ಮಿಸಿದ. ಆ ಮೊಟ್ಟೆಯ ಒಡೆದ ಅರ್ಧದ ಚೂರು ಆಕಾಶವಾಯಿತು. ಉಳಿದರ್ಧ ಚೂರು ಭೂಮಿಯಾಯಿತು.''[೧೦]

ರಾಕ್ಷಸರ ಕೊಬ್ಬಿನಿಂದ ಭೂಮಿ ನಿರ್ಮಾಣವಾಗಿದೆಯೆಂಬುದನ್ನು ತಿಳಿಸುವ ಕಥೆಯೊಂದು ದೇವಿಭಾಗವತದಲ್ಲಿಸಿಗುತ್ತದೆ. ಭೂದೇವತೆಯು ಬ್ರಹ್ಮನ ಮಗಳೆಂದೂ; ಮಹಾವಿಷ್ಣು ಮದುವೆಯಾದನೆಂದೂ, ದಾಕ್ಷಿಣಾತ್ಯ ಮಹಾಭಾರತದ ಒಂದು ಪಾಠವು ತಿಳಿಸುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ವಿಷ್ಣುವಿನ ಮನಸ್ಸಿನಿಂದ ಉದಿಸಿದ ಪಂಚಭೂತಗಳೆಲ್ಲ ಸೇರಿ ಮಹಾಪೃಥ್ವಿಯು ಉದಯವಾಯಿತೆಂದು ದೇವಿಭಾಗವತದ ನವಮಾಸ್ಕಂದವು ತಿಳಿಸುತ್ತದೆ. ''ಆಕಾಶವೂ ತಂದೆ, ಭೂಮಿಯು ತಾಯಿ, ಇವರಿಬ್ಬರ ಸಂಯೋಗದಿಂದ ಮಾನವ ಹುಟ್ಟಿದನೆಂದೂ 'ಜೂನಿ ಇಂಡಿಯನ್' ಜನಾಂಗದಲ್ಲಿ ಪ್ರಚಲಿತವಿರುವ ಒಂದು ಕಥೆಯು ತಿಳಿಸುತ್ತದೆ.''[೧೧] ಅಮೇರಿಕನ್ ಇಂಡಿಯನ್ ಬುಡಕಟ್ಟುಗಳ ಪುರಾಣಗಳಲ್ಲಿ ಭೂಮಿಯನ್ನು ಇಡೀ ಮಾನವತೆಯ ತಾಯಿಯ ರೂಪದಲ್ಲಿ ಕಾಣಲಾಗಿದೆ. ಅವರ ಮಾತು ಪ್ರಾರ್ಥನೆ, ಮಂತ್ರಗಳಲ್ಲಿ 'ಭೂಮಿ ನಮ್ಮ ತಾಯಿ' ಎಂಬ ಸೂಚನೆ ಬರುತ್ತದೆಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ.

ಭೂಮಿಯ ಉಗಮ ಹಾಗೂ ಸ್ಥಾನಮಾನಗಳ ಬಗ್ಗೆ ಅನೇಕ ಜಾನಪದ ಕಥೆಗಳು ಹಾಗೂ ಪೌರಾಣಿಕ ನಂಬಿಕೆಗಳಿದ್ದು, ಈ ಎಲ್ಲ ಕಲ್ಪನೆಗಳಿಗಿಂತ ತೀವ್ರವಾದ ಹಾಗೂ ವಾಸ್ತವಿಕವಾದ ರೀತಿಯಲ್ಲಿ ದೀವರು ಭೂಮಿಯೊಂದಗಿನ ತಮ್ಮ ಸಂಬಂಧವನ್ನು ಬೆಳೆಸಿಕೊಂಡು ಬಂದಿದ್ದಾರೆ. ತಮ್ಮನ್ನು ಮಣ್ಣಿನ ಮಕ್ಕಳೆಂದು ತಿಳಿದುಕೊಂಡಿರವ ದೀವರು ಮಣ್ಣನ್ನು ನಿಜವಾದ ತಾಯಿಯೆಂದು ಭಾವಿಸಿದ್ದಾರೆ. ತಮ್ಮ ಜೀವನ್ಮರಣಗಳ ನಿರ್ಣಾಯಕ ಶಕ್ತಿ ಭೂದೇವಿ ಎಂಬ ಕಲ್ಪನೆ ದೀವರ ಸಮುದಾಯದ್ದಾಗಿದೆ. ಭೂಮಿಯನ್ನು ಉತ್ಪಾದನೆ ಹಾಗೂ ಸಮೃದ್ಧಿಯ ದೇವತೆಯಂದೂ ದೀವರು ನಂಬಿದ್ದಾರೆ. ಭೂಮಿ ಪಂಚಭೂತಗಳಲ್ಲಿ ಒಂದು, ಮಣ್ಣು ಜಡವಸ್ತುವಲ್ಲ. ಸಚೇತನ ವಸ್ತು. ಚೇತನಕ್ಕೆ ಚೇತನ ನೀಡುವ ವಸ್ತು, ಎಂಬ ನಿಚ್ಚಳ ಕಲ್ಪನೆ ಅವರದಾಗಿದೆ.

''ಮಣ್ಣನ್ನು ನಂಬಿ ಮಣ್ಣಿಂದ ಬದುಕೇನ
ಮಣ್ಣೆನಗೆ ಮುಂದೆ ಹೊನ್ನು, ಅಣ್ಣಯ್ಯ
ಮಣ್ಣೆ ಲೋಕದಲ್ಲಿ ಬೆಲೆಯಾದದ್ದು.''

ಎಂದು ಹೇಳುವ ದೀವರ ಮಹಿಳೆಯ ಮಾತಿನಲ್ಲಿ ದೀವರು ಭೂಮಿಯನ್ನು ನಂಬಿದ ಪರಿ ವ್ಯಕ್ತವಾಗುತ್ತದೆ.

ಭೂಮಿಯನ್ನು 'ಆದಿಶೇಷ' ಹೊತ್ತಿದ್ದಾನೆ. ಭೂಮಿ ಭಾರವಾದಾಗ ಆದಿಶೇಷ, ದೇವತೆಗಳು ಹಾಗೂ ಆನೆಗಳು ತಮ್ಮ ತಲೆ ಅಲ್ಲಾಡಿಸುತ್ತವೆ. ಆಗ ಭೂಕಂಪ ಉಂಟಾಗುತ್ತದೆ ಎಂಬ ನಂಬಿಕೆಗಳು ಇವೆ. ಭೂಮಿದೇವಿ

'ಕ್ಷಮಿಸಿಬಿಡು'ದ ಪ್ರತೀಕವೆಂಬ ನಂಬಿಕೆಯೂ ಎಲ್ಲರಲ್ಲಿದ್ದಂತೆ ದೀವರಿಗೂ ಅನ್ವಯಿಸುತ್ತದೆ. ತಮ್ಮನ್ನು ಭೂಮಿಯ ಮಕ್ಕಳೆಂದೂ ತಿಳಿದುಕೊಂಡಿರುವ ದೀವರು ಮಣ್ಣನ್ನು ನಿಜವಾದ ತಾಯಿಯೆಂದು ಎತ್ತಿ ಹಿಡಿದಿವೆ. ಆ ಭೂಮಿ ಭಾರವಾದಾಗ ಆದಿಶೇಷ, ದೇವತೆಗಳು ಹಾಗೂ ಆನೆಗಳು ತಮ್ಮ ತಲೆ ಅಲ್ಲಾಡಿಸುತ್ತವೆ. ಆಗ ಭೂಕಂಪ ಉಂಟಾಗುತ್ತದೆ ಎಂಬ ಇನ್ನೂ ಅನೇಕ ನಂಬಿಕೆಗಳು ಇವೆ.

ಭೂಮಿಯ ಪ್ರಯೋಜನವನ್ನು ಬಿಂಬಿಸುವ ಇನ್ನೊಂದು ಕಥೆ ಇದೆ. "ಒಬ್ಬ ತಾಯಿ, ಅವಳಿಗೆ ಇಬ್ಬರು ಮಕ್ಕಳು, ಅವಳ ಪತಿ ತೀರಿದ್ದಾನೆ, ಮಕ್ಕಳು ದುಡಿಯದೆ ಸೋಮಾರಿಗಳಾಗಿದ್ದರು. ತಾಯಿಯ ಉಪದೇಶ ಫಲಿಸಲಿಲ್ಲ. ಆಗ ಅವಳೊಂದು ಉಪಾಯ ಮಾಡಿದಳು. ಹೊಲದಲ್ಲಿ ನಿಮ್ಮ ತಂದೆ ಎಲ್ಲೋ ಒಂದಿಷ್ಟು ನಿಧಿ ಹುಗಿದಿದ್ದು ನೆನಪಿದೆ. ಅದು ಎಲ್ಲಿದೆ ಎಂಬುದನ್ನು ಹುಡುಕಿ" ಎಂದಳು. ಅದನ್ನು ಕೇಳಿ ಆಶೆಗೆ ಬಿದ್ದ ಮಕ್ಕಳು ಭೂಮಿಯನ್ನು ಅಗೆಯ ತೊಡಗಿದರು ನಿಧಿ ಸಿಗಲಿಲ್ಲ. ಎಲ್ಲ ಭೂಮಿಯನ್ನು ಅಗೆದದ್ದಾಯಿತು. ಅಷ್ಟರಲ್ಲಿ ಅಲ್ಲೇ ಒಬ್ಬ ದಾರಿಹೋಕ ಮುದುಕ ಬಂದು ಆತ ಭೂಮಿಯನ್ನು ಅಗೆಯುವ ಹುಡುಗರನ್ನು ನೋಡಿ "ಹೊಲವನ್ನು ಎಷ್ಟು ಚೆನ್ನಾಗಿ ಹರಗಿದ್ದೀರಲ್ಲ, ಅದರಲ್ಲಿ ಸ್ವಲ್ಪ ಕಾಳು ಹಾಕಿ ಬಂಗಾರದ ಬೆಳೆಬರುತ್ತದೆ ಎಂದನು. ಯಾವುದೂ ತಿಳಿಯದೇ ಹುಡುಗರು ಮುದುಕ ಹೇಳಿದಂತೆ ಭೂಮಿಗೆ ಕಾಳು ಹಾಕಿದರು. ಕೆಲದಿನಗಳ ಬಳಿಕ ಬೆಳೆ ಬಂತು. ರಾಶಿ ಮಾಡಿದರು. ಆಗ ತಾಯಿ ಇದೇ ನೋಡಿ ನಿಮ್ಮಪ್ಪ ಹೊಲದಲ್ಲಿ ಹುಗಿದಿಟ್ಟ ನಿಧಿ ಎಂದು ಮಕ್ಕಳಿಗೆ ಹೇಳಿದಳು. ತಮ್ಮನ್ನು ದುಡಿಯಲು ಹಚ್ಚಿದ ತಾಯಿಯ ಉಪಾಯವನ್ನು ಮಕ್ಕಳು ಅರ್ಥಮಾಡಿಕೊಂಡು ಅಂದಿನಿಂದ ನಿಷ್ಠೆಯಿಂದ ದುಡಿಯತೊಡಗಿದರು." ಈ ಕಥೆಯಲ್ಲಿ ನಿಷ್ಠೆಯಿಂದ ದುಡಿದವರಿಗೆ ಭೂದೇವಿ ವರಕೊಟ್ಟೇ ಕೊಡುತ್ತಾಳೆಂದು ಭೂಮಿಯ ಪ್ರಯೋಜನೆ ಹಾಗೂ ಮಹತ್ವವನ್ನು ವ್ಯಕ್ತಪಡಿಸಲಾಗಿದೆ.

ಬುಡಕಟ್ಟು ಸಮುದಾಯದವರಾದ ದೀವರು ಬೆಳಗ್ಗೆ ಎದ್ದತಕ್ಷಣ ಮೊದಲು ಸ್ಮರಿಸಿಕೊಳ್ಳುವುದು ಭೂಮಿ ತಾಯಿಯನ್ನು, ಕಾರಣ ಭೂಮಿ ತಾಯಿ ದೀವರ ಬದುಕಿಗೆ ಜೀವನಾಡಿಯಾಗಿಯಾಗಿರುವುದರಿಂದ ಈ ಅಚಲ ನಂಬಿಕೆ ಅವರಲ್ಲಿದೆ ಎಂದು ಸ್ಪಷ್ಟವಾಗಿ ತಿಳಿಯಬಹುದಾಗಿದೆ. ಹಾಗಾಗಿ ದೀವರು ಭೂಮಿಯ ಭಕ್ತಿಯನ್ನು ಈ ಕೆಳಗಿನ ಜಾನಪದ ಸಾಹಿತ್ಯದ ಮೂಲಕ ಪ್ರತಿಬಿಂಬಿಸುತ್ತಾರೆ.



ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲಿ
ಎಳ್ಳು ಜೀರಗಿ ಬೆಳವಂಥ |ಭೂಮಿತಾಯೀನ
ಎದ್ದೊಂದು ಗಳಿಗಿ ನನದೇನ||



ದೀವರು ಹಗಲಿರಳು ಎನ್ನದೆ ಚಳಿ ಮಳೆಯನ್ನದ ಮಣ್ಣಿನಲ್ಲಿ ದುಡಿಯುವವರು "ಕೈಕೆಸರಾದರೆ ಬಾಯಿ ಮೊಸರು "ಎಂಬುದು ಅವರ ಸಿದ್ಧಾಂತ. ಈ ಸಿದ್ಧಾಂತವೇ ಅವರ ಜೀವನದ ಭವಿಷ್ಯವನ್ನು ರೂಪಿಸುವ ದಾರಿ ದೀಪವಾಗಿದೆ.

ಭೂಮಿಯು ಇಡೀ ಬದುಕಿನ ಜೀವನಾಡಿಯಾಗಿರುವುದರಿಂದ ಅದೊಂದು ಅದಮ್ಯ ಶಕ್ತಿಯ ಸ್ವರೂಪವನ್ನು ಹೊಂದಿದೆ. ತನ್ನ ಅಂತರಂಗದಲ್ಲಿ ಇಡೀ ವ್ಯಾಪಕ ಜಲಚರಗಳನ್ನು ಹೊಂದಿದ್ದು, ಮಾನವ ಸಮುದಾಯಕ್ಕೆ ದಾರಿದೀಪವಾಗಿದೆ. ಭೂಮಿಯನ್ನು ತಾಯಿಯ ಸ್ವರೂಪದಲ್ಲಿ ಕಾಣುವುದು ಅಥವಾ ಗೌರವಿಸುವುದು ದೈವಾರಾಧನೆಯ ಪ್ರತೀಕವಾಗಿದೆ. ಹೀಗಿರುವಾಗ ದೀವರು ಪ್ರತಿಹಂತದಲ್ಲೂ 'ಭೂಮಿ' ಯನ್ನು ಒಂದು ಚೈತನ್ಯ ಶಕ್ತಿಯಾಗಿ ಕಾಣುತ್ತಾರೆ. ಇದು ದೀವರಲ್ಲಿ ಭೂಮಿಗೆ ನೀಡಿದ ಭಕ್ತಿಪೂರ್ವಕ ಔದಾರ್ಯವನ್ನು ತಿಳಿಸುತ್ತದೆ.

ಭೂಮಿತನವನ್ನು ಉಳಿಸಕೊಳ್ಳಲು ರೈತರು ಅನೇಕ ಕಥೆಗಳನ್ನು, ಗಾದೆಗಳನ್ನು ಅದಕ್ಕೆ ಚಿತ್ರಿಸಿ, ಹೊಸ ಚೈತನ್ಯವನ್ನು ನೀಡುವರು. ಈ ಹಿನ್ನಲೆಯಲ್ಲಿ ಭೂ ಸಂಬಂಧಿಯಾದ ಹಲವಾರು ಗಾದೆ ಮಾತುಗಳು ದೀವರಲ್ಲಿ ಪ್ರಚಲಿತವಿದ್ದು, ಅವರು ಭೂಮಿಯ ಬಗ್ಗೆ ಇರಿಸಿಕೊಂಡಿರುವ ತಿಳುವಳಿಕೆಯನ್ನು ಅವು ಸ್ಪಷ್ಟಪಡಿಸುತ್ತವೆ. ಅವು ಇಂತಿವೆ.

'ಆಕಾಶದ ಮಳೆ ಭೂಮಿಗೆ ಬೆಳೆ'

'ಭರಣಿ ಮಳೆಯಿಂದ ಧರಣಿಗೆಲ್ಲಾ ಸುಖ'

'ಹದ ನೋಡಿ ಬಿತ್ತು, ಬೆದಿ ನೋಡಿ ಬೆಳೆ'

'ಊರಾಗಿನ ಕೆಸರು ನೋಡಿ ಹೊಲಕ್ಹೋಗೂದ ಬಿಟ್ಟರಂತೆ'

'ಮಾತು ಮುಂದಾತು, ಹೊಲ ಅಂಗಲಾತು'

ದೀವರಲ್ಲಿ ಭೂಸಂಬಂಧಿಯಾದ ಹಲವಾರು ಹಬ್ಬಹರಿದಿನಗಳು ಆಚರಣೆ ನಂಬಿಕೆಗಳು ಜಾರಿಯಲ್ಲಿವೆ. ಅವುಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕಾದರೆ ಆಯಾ ಹಬ್ಬ ಹರಿದಿನಗಳ ಬಗ್ಗೆ ಪ್ರಾದೇಶಿಕವಾಗಿಯೇ ಅಧ್ಯಯನ ಮಾಡಬೇಕಾಗುತ್ತದೆ. ಅಂತಹ ಹಬ್ಬಗಳಲ್ಲಿ, ದೀವರು ಆಚರಿಸುವ ಭೂಮಿ ಹುಣ್ಣಿಮೆ, ಆದ್ರಿ ಮಳೆ ಹಬ್ಬ, ದೀಪಾವಳಿ, ಯುಗಾದಿ, ಗೌರಿಹಬ್ಬ ಹೀಗೆ ಅನೇಕ ಹಬ್ಬಹರಿದಿನಗಳು ಅವರಲ್ಲಿ ಆಚರಣೆಯಲ್ಲಿವೆ.

ಮಲೆನಾಡಿನ ದೀವರ ಮಹಿಳೆಯರು ಭೂಮಿಹುಣ್ಣಿಮೆಯ ನಿಗದಿತ ದಿನದ ಮುನ್ನಾದಿನ ಮಡಿಯುಟ್ಟು ಮನೆ ಸಾರಿಸಿ ಐದರಿಂದ ಏಳು ಅಥವಾ ಒಂಭತ್ತು ತರಹದ ಬೆರಕೆಸೊಪ್ಪು ತಂದು ಅಡುಗೆ ಮಾಡುತ್ತಾರೆ. ಅಲ್ಲದೆ ಕೊಟ್ಟೆ ಕಡುಬು ತಯಾರಿಸುತ್ತಾರೆ. ಇದೊಂದು ಬಗೆಯ ಸಿಹಿ ಖಾದ್ಯ. ಉಪ್ಪು, ಮೆಂತ್ಯೆ, ಅಕ್ಕಿ ಹಿಟ್ಟಿನ ಮಿಶ್ರಣಗಳನ್ನು ಬಾಳೆಎಲೆಯಲ್ಲಿಟ್ಟು, ಬೇಯಿಸುತ್ತಾರೆ. ಮರುದಿನ ಬೆ೦ಗ್ಗೆ ಗದ್ದೆಗೆ ಹೋಗಿ ಒಂದು ಮೂಲೆಯಲ್ಲಿ ಕೋಲು ನೆಟ್ಟು ಅದಕ್ಕೆ ಬಾಳೆ ಅಥವಾ ಕಬ್ಬನ್ನು ಕಟ್ಟಿ ಪೂಜೆ ಮಾಡುತ್ತಾರೆ. ಕೊಟ್ಟೆಕಡುಬನ್ನು ಅದರ ಮುಂದೆ ಭೂಮಿಯಲ್ಲಿ ಹೂಳಿ ಅದರ ಮೇಲೆ ಗುರುತಿಗಾಗಿ ಒಂದು ಕಲ್ಲನ್ನು ಹೂಳುತ್ತಾರೆ.

"ಅಚ್ಚಂಬಲಿ, ಅಳಿಯಂಬಲಿ

ಹಿತ್ತಿಲಾಗಳ ದಾರಿ ಹೀರಿಕಾಯಿ

ಒಪ್ಪಿಕೊಳ್ಳೆ ಭೂಮಿತಾಯಿ ಹೂಲಿಹೂಲಿ."

ಎಂದು ಹಾಡುತ್ತಾ ಹಾಳೆ ಕಣಗಳಿಗೆ ಎಡೆ ಹಿಡಿದು ಕೊನೆಯ ತುತ್ತನ್ನು ಆಕಳಿಗೆ ತಿನ್ನಿಸುತ್ತಾರೆ. ಇದಾದ ಒಂದೂವರೆ ತಿಂಗಳಿಗೆ ಪೈರು ಕೊಯ್ಲಿಗೆ ಬರುತ್ತದೆ. ಆಗ ಮತ್ತೆ ಹೊಲಕ್ಕೆ ಹೋಗಿ ಹಿಂದೆ ಪೂಜೆ ಮಾಡಿದ ಸ್ಥಳಕ್ಕೆ ಅಭಿಮುಖವಾಗಿ ಕುಡುಗೋಲುಗಳನ್ನು ಪೂಜೆ ಮಾಡಿ ಬೆಳೆ ಕೊಯ್ಯಲು ತೊಡಗುತ್ತಾರೆ. ಕಡುಬು ಹೂಳಿದ ಜಾಗಕ್ಕೆ ಬಂದು ಅಲ್ಲಿ ಐದು ಪೈರಿನ ತಂಡೆಗಳನ್ನು ಬಿಟ್ಟು ಕುಡುಗೋಲುಗಳನ್ನು ಅಲ್ಲಿ ಇಡುತ್ತಾರೆ. ಕಡುಬನ್ನು ಅಗೆದು ತೆಗೆದು ಹಂಚಿಕೊಂಡು ತಿನ್ನುತ್ತಾರೆ. ಕೆಲದಿನ ಭೂಮಿತಾಯಿಯ ಮಡಿಲಿನಲ್ಲಿಟ್ಟು ಆ ಕಡುಬು ಭೂಮಿತಾಯಿಯ ವರಪ್ರಸಾದವೆಂಬ ಭಾವನೆಯಿಂದ ದೀವರು ಅದನ್ನು ಸೇವಿಸುವ ವಿಶಿಷ್ಟತೆ ಇಲ್ಲಿ ಕಾಣುತ್ತದೆ.

"ರೈತರು ಹೊಲದಲ್ಲಿ ಐದು ಕಲ್ಲುಗಳಿಗೆ ಸುಣ್ಣ ಹಚ್ಚಿ ಹೊಲಕ್ಕೆ ಚೆರಗ ಚೆಲ್ಲಿ ಅಥವಾ ಬ್ರಹ್ಮದೇವರಲ್ಲಿ ಪೂಜಿಸಿ ಆಚರಿಸುವ 'ಸೀಗೆ ಹುಣ್ಣಿಮೆ'ಯೂ ಭೂಸಂಬಂಧಿಯಾದ ಹಬ್ಬಗಳಲ್ಲಿ ಅಷ್ಟೇ ಪ್ರಮುಖವಾದದ್ದು.[೧೪]" ಹಾಗೆಯೇ 'ಮಣ್ಣೆತ್ತಿನ ಅಮವಾಸ್ಯೆ' ಭೂಮಿ ಹರಗಲು ಆರಂಭಿಸುವ ದಿನವಾದ ಯುಗಾದಿ, ಸಗಣಿಯಿಂದ ತಯಾರಿಸುವ ಗುಳ್ಳಪ್ಪ, ಮಣ್ಣಿನಿಂದ ತಯಾರಿಸುವ ಹಟ್ಟೆಪ್ಪ, ಮಳೆಯನ್ನು ಬೇಡಿಕೊಳ್ಳಲು ಆಚರಿಸುವ

ಆದ್ರಿಮಳೆಹಬ್ಬ, ಗೌರಿಹಬ್ಬ,  ಹೀಗೆ ಅನೇಕ ಹಬ್ಬಹರಿದಿನಗಳು ಆಚರಣೆಯಲ್ಲಿವೆ. ಇವುಗಳ ವಿವರವಾದ ಅಧ್ಯಯನ ನಡೆಸಿದಾಗ ದೀವರ ಬದುಕಿನ ನಿಜವಾದ ನೆಲೆಗಳು ಹಾಗೂ ದೀವರು ನಂಬಿರುವ ಭೂಮಿ, ಮಳೆ, ಪ್ರಾಣಿ ಮೊದಲಾದವುಗಳು ಕುರಿತಾದ ನಿಚ್ಚಳವಾದ ತಿಳುವಳಿಕೆ ಮೂಡಲು ಸಾಧ್ಯವಾಗುತ್ತದೆ.

ಭೂಸಂಬಂಧಿಯಾದ ಕೆಲವು ವಿಧಿ-ನಿಷೇದಗಳು ದೀವರಲ್ಲಿರುವುದನ್ನು ಗುರುತಿಸಬಹುದು. ವರ್ಷಕ್ಕೊಮ್ಮೆ ಸುಗ್ಗಿಯ ಸಲುವಾಗಿ ಸಿದ್ಧಪಡಿಸುವ 'ಕಣವು' ದೀವರ ದೃಷ್ಟಿಯಲ್ಲಿ ಒಂದು ದೇವಾಲಯವೇ ಸರಿ. ಕಣದ ಬಗ್ಗೆ ಅಷ್ಟೇ ಪೂಜ್ಯಭಾವನೆ ದೀವರಲ್ಲಿದೆ. ಒಳ್ಳೆಯ ಮುಹೂರ್ತದಂದು ದೀವರು ತಮ್ಮ ಫಸಲಿನ ಪ್ರಮಾಣಕ್ಕೆ ತಕ್ಕ ಗಾತ್ರದಲ್ಲಿ ಕಣವನ್ನು ನಿರ್ಮಿಸಿಕೊಳ್ಳುತ್ತಾರೆ. ಆ ಕಣವು ಎರಡು ಮೂರು ತಿಂಗಳು ಚಲಾವಣೆಯಲ್ಲಿರುತ್ತದೆ. ಆ ಅವಧಿಯಲ್ಲಿ ಕೆಲವು ಅರ್ಥಪೂರ್ಣವಾದ ನಿಷೇದಗಳನ್ನು ದೀವರು ವಿಧಿಸಿಕೊಂಡಿರುತ್ತಾರೆ. ಉದಾ- ಚಪ್ಪಲಿ ಹಾಕಿಕೊಂಡು ಕಣದಲ್ಲಿ ಪ್ರವೇಶಿಸಕೂಡದು, ಬರೀ ನೆತ್ತಿಯಿಂದ ಕಣದಲ್ಲಿ ಪ್ರವೇಶಿಸಕೂಡದು, ಕಣದಲ್ಲಿ ಹೆಚ್ಚು ಮಾತನಾಡಕೂಡದು, ಖಾಲಿಕಣ ಬಿಡಕೂಡದು, ಕಣದಲ್ಲಿ ಖಾಲಿಬುಟ್ಟಿಗಳನ್ನು ಮೇಲ್ಮುಖಿ ಮಾಡಿ ಇಡಕೂಡದು ಇತ್ಯಾದಿ ವಾಸ್ತವವಾಗಿ ಇವುಗಳ ಹಿಂದೆ ಒಂದಲ್ಲ ಒಂದು ವೈಜ್ಞಾನಿಕ ತಿಳುವಳಿಕೆ ಇರುವುದನ್ನು ಕಾಣಬಹುದು. ಚಪ್ಪಲಿ ಹಾಕಿಕೊಂಡು ಪ್ರವೇಶಿಸಿದರೆ ಮೃದುವಾಗಿ ಸಾರಿಸಿದ ಕಣ ಒಡೆದು ಕಾಳುಕಡಿಗಳಲ್ಲಿ ಮಣ್ಣು ಸೇರಿಕೊಳ್ಳುತ್ತದೆ. ಬರಿನೆತ್ತಿಯಿಂದ ಕಣದಲ್ಲಿ ಬಂದರೆ ಹಾಗೂ ಕಣವಲ್ಲಿ ಮಾತನಾಡಿದರೆ ತಲೆಯಲ್ಲಿ ಮತ್ತು ಬಾಯಿಯಲ್ಲಿ ಹುಡಿಸೇರಬಹುದು ಬರಿನೆತ್ತಿಯಿಂದ ಕಣದಲ್ಲಿ ಬಂದರೆ ರಾಶಿಯ ಹುಲುಸು ಕಡಿಮೆಯಾಗುತ್ತದೆ ಎಂಬ ನಂಬಿಕೆಯ ನಿಲುವು ಅವರದಾಗಿದೆ. ಖಾಲಿ ಕಣವನ್ನು ಬಿಟ್ಟರೆ ಬಿಸಿಲು-ಗಾಳಿ-ಮಳೆಯಿಂದ ಅದು ಹಾಳಾಗುತ್ತದೆ. ಸಗಣಿಯಿಂದ ಸಾರಿಸಿರುವ ಬುಟ್ಟಿಗಳು ಬಿಸಿಲು ಗಾಳಿಗೆ ತೆರೆದುಕೊಂಡಿದ್ದರೆ, ಸಗಣಿ ಉದುರಿ ಬುಟ್ಟಿ ಸಡಿಲಾಗುತ್ತದೆ.... ಹೀಗೆ ಅವರು ವಿಧಿಸಿ ಕೊಂಡಿರುವ ಒಂದೊಂದು ನಿಷೇಧದ ಹಿಂದೆ ಒಂದೊಂದು ಅರ್ಥ ಇದ್ದೇ ಇದೆ.  ಇಂಥ ಅನೇಕ ನಿಷೇಧಗಳು  ದೀವರಲ್ಲಿದ್ದು ಭೂಮಿಯ ಬಗ್ಗೆ ಅವರು ಇರಿಸಿಕೊಂಡಿದ್ದ ನಂಬಿಕೆಯನ್ನು ತಿಳಿಸುತ್ತವೆ.

ಭೂಮಿಯ ರಕ್ಷಣೆ ಹಾಗೂ ಪೋಷಣೆಯ ಕೆಲವಿಧಾನಗಳು ದೀವರಲ್ಲಿವೆ. ಒಡ್ಡುಹಾಕುವುದು, ಹಾಳೆಕಟ್ಟುವುದು, ಮಳೆಯಿಂದ ಹೊಲದ ಮಣ್ಣು ಕೊಚ್ಚಿ ಹೋಗದಂತೆ ಕಲ್ಲಿನ ಕಟ್ಟಡ ಕಟ್ಟುವುದು, ಕಳೆ ತೆಗೆಸುವುದು, ಪ್ರತಿವರ್ಷ ಹೊಲಕ್ಕೆ ಹೊಸಮಣ್ಣು ಹಾಕಿಸುವುದು,  ಭೂಮಿಯ ಪೈರುಗಳನ್ನು ಬದಲಿಸುತ್ತಿರುವುದು, ಯಾವುದೇ  ಮರಗಳು ಬೆಳೆಯದಂತೆ ನೋಡುವುದು, ಹೊಲದಲ್ಲಿಯ ಕಸ, ಕಲ್ಲು, ಕಟ್ಟಿಗೆಗಳನ್ನು ನಿಯಮಿತವಾಗಿ ಸ್ವಚ್ಛಗೊಳಿಸುವುದು ಇವೇ ಮೊದಲಾದ ಕೆಲಸಗಳ ಮೂಲಕ ದೀವರು ತಮ್ಮ ಹೊಲಗಳನ್ನು  ಸ್ವಚ್ಛ ಹೊಲವನ್ನಾಗಿ ರೂಪಿಸಿಕೊಳ್ಳುತ್ತಾರೆ.  ಇದರಿಂದ ಪೈರು ಬೆಳೆದಾಗ ಹೊಲ ಸುಂದರವಾಗಿ ಕಾಣುವುದು ಇನ್ನೊಂದು ಕಾಣರವಾಗಿರಬಹುದು. ಹೀಗೆಯೇ ಉತ್ತುವಾಗ-ಬಿತ್ತುವಾಗ, ಫಸಲು ಕೊಯ್ಯುವಾಗ ರೈತಸಮುದಾಯವಾದ ದೀವರು  ಅನೇಕ ವಿಧಿ ವಿಧಾನಗಳನ್ನು ಪಾಲಿಸುತ್ತಾರೆ.

ಮಣ್ಣಿನ ಗುಣ, ಅದರ ಫಲವತ್ತತೆಗಳನ್ನಾಧರಿಸಿ ದೀವರು ಭೂಮಿಯನ್ನು ಕರಿಭೂಮಿ, ಎರೆಭೂಮಿ, ಮಸಾರಿಭೂಮಿ, ಮರಡಿಭೂಮಿ, ಜವುಳಭೂಮಿ, ಬೆದ್ದಲು ಭೂಮಿ, ಬಂಜರು ಭೂಮಿ ಎಂದೆಲ್ಲಾ ವರ್ಗೀಕರಿಸಿಕೊಳ್ಳುತ್ತಾರೆ. ನೀರಾವರಿ ವ್ಯವಸ್ಥೆಯನ್ನಾಧರಿಸಿ ಇಡೀ ಕೃಷಿ ಪದ್ಧತಿಯನ್ನೇ ನೀರಾವರಿ ಬೇಸಾಯ, ಒಣಬೇಸಾಯ ಎಂದು ವಿಂಗಡಿಸಿಕೊಳ್ಳುತ್ತಾರೆ. "ಮಳೆ ಹಾಗೂ ಕೃತಕ ನೀರಾವರಿ ವ್ಯವಸ್ಥೆಗಳಿಂದ ಭೂಮಿಗೆ ನೀರುಣಿಸಲು ಸಾಧ್ಯವಿದ್ದು, ಮಳೆಯನ್ನಾಧರಿಸಿದ ಭೂಮಿಯನ್ನು 'ದೇವಮಾತೃಕೆ' ಎಂದೂ ಕೃತಕ

ನೀರಾವರಿಯನ್ನಾಧರಿಸಿ ಬೆಳೆಯುವ ಭೂಮಿಯನ್ನು ನದೀಮಾತೃಕೆ [೫]'' ಎಂದೂ ಕರೆಯುವ ವಾಡಿಕೆ ಮೊದಲಿನಿಂದಲೂ ಇದ್ದುದು ಕಾವ್ಯ ಮತ್ತು ಶಾಸನಗಳಿಂದ ನಮಗೆ ತಿಳಿದುಬರುತ್ತದೆ.

ಇತ್ತೀಚಿಗೆ ಮನುಷ್ಯನ ವಿಚಾರಧಾರೆ ಬದಲಾಗಿದೆ. ಕೃಷಿಯಲ್ಲಿ ವೈಜ್ಞಾನಿಕತೆ ಪ್ರವೇಶಿಸಿದೆ. ಹೀಗಾಗಿ ರೈತರಲ್ಲಿ ಭೂಮಿಯ ಕುರಿತಾದ ಹಿಂದಿನ ನಿಷ್ಠೆ- ನಂಬಿಕೆಗಳು ಇಲ್ಲವೆಂದು ತೋರುತ್ತಿರುವುದು ಒಂದಡೆಯಾದರೆ, ಭೂಮಿಯನ್ನು ಹಿಂದಿಗಿಂತ ಹೆಚ್ಚು ವೈಜ್ಞಾನಿಕವಾಗಿ ದುಡಿಸಿಕೊಳ್ಳುತ್ತಿರುವುದು ಇನ್ನೊಂದೆಡೆಯಾಗಿದೆ. ಕಾಲಕಾಲಕ್ಕೆ ಮಣ್ಣು ಪರೀಕ್ಷೆ ಮಾಡಿಸಬಹುದು. ಭೂಮಿಯ ಸ್ವಭಾವಕ್ಕೆ ತಕ್ಕ ಹಾಗೆ ಗೊಬ್ಬರ-ಕ್ರಿಮಿನಾಶಕ ಹಾಗೂ ನೀರಾವರಿ ವ್ಯವಸ್ಥೆ ಮಾಡುವುದು. ಇವು ಈಚಿನ ಉಪಕ್ರಮಗಳಾಗಿವೆ. ''ಒಬ್ಬ ರೈತನಿಗೆ ಅಧಿಕಾರಿಯೋ ಶ್ರೀಮಂತನೋ ಭೂಮಿಯನ್ನು ಉಂಬಳಿಯಾಗಿ ಕೊಡುವ ಪದ್ಧತಿ ಇಂದು ಕಡಿಮೆಯಾಗಿದೆ. ಅಷ್ಟೇ ಅಲ್ಲ ಮೊದಲಿನ ಜಮೀನದಾರಿ ಪದ್ಧತಿ ಇಂದು ರದ್ದಾಗಿದೆ. ಒಬ್ಬ ರೈತ ಹೊಂದಬಹುದಾದ ಭೂಮಿಯ ಮಿತಿಯನ್ನು ನಿಗದಿಗೊಳಿಸುವ ಕಾನೂನುಗಳು ಈಗ ಜಾರಿಯಲ್ಲಿವೆ.''[೬]

ಭೂಮಿಯ ಮೇಲೆ ಸಾಲಕೊಟ್ಟು ಕೃಷಿ ವ್ಯವಸಾಯವನ್ನು ಪ್ರೋತ್ಸಾಹಿಸುವ ವ್ಯವಸ್ಥೆ ಇಂದು ಇದೆ. ಭೂನ್ಯಾಯ ಮಂಡಳಿಗಳಿವೆ. ಹೀಗೆ ಮೊದಲಿನ ಭಾವನಾತ್ಮಕ ನೆಲೆಯಿಂದ ಬಿಡಿಸಿಕೊಂಡ ಭೂಮಿ ಇಂದು ಹೆಚ್ಚಾಗಿ ವ್ಯವಹಾರಿಕ ಭೌತಿಕ ಹಾಗೂ ವೈಜ್ಞಾನಿಕ ನೆಲೆಯಲ್ಲಿ ನಿಂತಿರುವುದು ಸ್ಪಷ್ಟವಾಗಿದೆ. ಕಾಲ ಬದಲಾದಂತೆ ಭೂಮಿಯ ಕುರಿತಾದ ನಮ್ಮ ರೈತರ ತಿಳುವಳಿಕೆಗಳು ಬದಲಾಗುವುದು ಅಸ್ವಾಭಾವಿಕವೇನಲ್ಲ. ಏನೇ ಆದರೂ ಭೂಮಿ ರೈತನ ತಾಯಿಯೇ ಅವಳ ಮಡಿಲನ್ನು ಬಿಟ್ಟು ರೈತನಿಗೆ ಅನ್ಯ ಆಶ್ರಯವಿಲ್ಲ.

**ಬೇಸಾಯ ಪದ್ಧತಿ**

ಕೃಷಿಗೂ ಪ್ರಾಚೀನ ಮನುಷ್ಯನಿಗೂ ಅತ್ಯಂತ ನಿಕಟವಾದ ಸಂಬಂಧವಿದೆ. ಜೈವಿಕ ಜಗತ್ತಿನ ನಿರಂತರ ಚಲನಾತ್ಮಕ ಸ್ಥಿತಿಯಲ್ಲಿ ಭಿನ್ನ ಆಯಾಮವನ್ನು ತಲುಪುತ್ತ ಹೋದ ಮನುಷ್ಯ ಬೇಟೆಯಿಂದ ಪಶುಪಾಲನೆ - ಪಶುಪಾಲನೆಯಿಂದ ಕೃಷಿಗೆ ಬದಲಾದದ್ದು ಸಂಘರ್ಷಾತ್ಮಕವಾಗಿದೆ. ಈ ಮಾನವ ಭೂಮಿ ಮತ್ತು ಭೂಮಿಯ ಉತ್ಪನ್ನಗಳ ಜೊತೆ ಅನುಸಂದಾನ ಹೊಂದಲೇಬೇಕಾದ ಈತನ ಬದುಕಿನ ಹೋರಾಟ ಜಗತ್ತಿನ ಅನೇಕ ಆವಿಷ್ಕಾರಗಳಿಗೆ ಕಾರಣವಾಯಿತು. ಗಂಡ ಬೇಟೆಗೆ ಹೋದಾಗ ಹೆಂಡತಿ ತನ್ನ ಆರಾಮ ವಿರಾಮವನ್ನು ಅನ್ವೇಷಣೆಗೆ ಮೀಸಲಿಡುತ್ತಾಳೆ. ಬೇಟೆಯ ನಾಯಕತ್ವ ಗಂಡಸಿಗೆ ಮೀಸಲಾದಾಗ ಇವಳು ಒಂದೆಡೆ ನೆಲೆ ನಿಲ್ಲುವ ಅನಿವಾರ್ಯ ಸ್ಥಿತಿಗೆ ತಲುಪಿದಳು. ಇದು ಮಾನವ ಜಗತ್ತಿನ ಸ್ಥಿತ್ಯಂತರಕ್ಕೆ ಮುಖ್ಯ ಕಾರಣವಾಯಿತು. ಇಂತಹ ಸಂದರ್ಭದಲ್ಲಿ ಅವಳು ತನ್ನ ಸೃಜನಶೀಲತೆಯನ್ನು ಪ್ರಕರಗೊಳಿಸಿದ್ದು ಕೃಷಿಯ ಮೂಲಕ. ಕೃಷಿ ಎಂಬುದು ಅವಳ ಬಿಡುವಿನ ಕ್ರಿಯಾಶೀಲ ಶೋಧನೆ.

ಕೃಷಿಯಲ್ಲಿ ಮಹಿಳೆಗಿರುವ ಸ್ಥಾನ ಅಪೂರ್ವವಾದುದು. ಗ್ರಾಮೀಣ ಆರ್ಥಿಕತೆಗೆ ಮತ್ತು ಕೃಷಿಯ ಅಭಿವೃದ್ಧಿಗೆ ಅವಳ ಕೊಡುಗೆ ಅಪಾರ ಕೃಷಿಯನ್ನು ಆರಂಭ ಮಾಡಿದವಳೇ ಮಹಿಳೆ ಎನ್ನಲಾಗಿದೆ. ಕೃಷಿ ಕಲೆಯನ್ನು ಕರಗತ

ಮಾಡಿಕೊಂಡವಳೇ ಮಹಿಳೆ ಎಂದು ಕೃಷಿಯ ಇತಿಹಾಸ ಹೇಳುತ್ತದೆ. ಅಂದರೆ ಕೃಷಿಯನ್ನು ಮಹಿಳೆ ತಾನು ಕಲಿತ ನಂತರ ಪುರುಷನಿಗೆ ಕಲಿಸಿವಳು ಎನ್ನಬಹುದು. ಹಿಂದೆ ಉದರ ಪೋಷಣೆಗಾಗಿ ಕಾಡು ಪ್ರಾಣಿಯನ್ನು ಬೇಟೆಯಾಡುತ್ತಿದ್ದಾಗಲೇ ಸೂಕ್ಷ್ಮಮತಿಯ ಮಹಿಳೆ ನೈಸರ್ಗಿಕ ಬೆಳೆಯ ಮೇಲೆ ಕಣ್ಣಿಟ್ಟಳು.

ಗೆಡ್ಡೆ, ಗೆಣಸು, ಹಣ್ಣುಗಳ ರುಚಿ ಕಂಡ ಅವಳು ತನ್ನ ಜಾಣ್ಮೆಯನ್ನು ಉಪಯೋಗಿಸಿ ಬೀಜ ಚಲ್ಲಿದಳು. ವಿವಿಧ ಬಗೆಯ ಬೆಳೆಗಳನ್ನು ಬೆಳೆದಳು. ಕೃಷಿ ಪ್ರಕೃತಿಯ ಕೈಗೊಂಬೆ ಎನ್ನುವುದನ್ನು ಅರಿತಳು. ತನ್ನ ಅನುಭವಗಳಿಂದ ಮನಗಂಡಿದ್ದ ಕೃಷಿಗೆ ನಾಜೂಕಿನ ರೂಪ ಕೊಟ್ಟಳು. ಅನಾಗರಿಕ ಜೀವನದಲ್ಲಿ ನಾಗರಿಕತೆಯನ್ನು ತುಂಬಿದಳು. ಅಲೆದಾಟದ ಬದುಕಿಗೆ ಹೊಸ ತಿರುವನ್ನು ಹೊಸ ಅರ್ಥವನ್ನು ಕೊಟ್ಟಳು. ಹೀಗೆ ಅಂದು ಮಹಿಳೆಯಿಂದ ಆರಂಭವಾದ ಕೃಷಿ ಇಂದು ಸಂಶೋಧನೆ, ವಿಜ್ಞಾನಗಳನ್ನು ಮೈಗೂಡಿಸಿಕೊಂಡು ಶಾಸ್ತ್ರೀಯ ಕೃಷಿ ಉದ್ಯಮವಾಗಿ ಪರಿಣಮಿಸಿದೆ.

ಕೃಷಿಯಲ್ಲಿ ಮಹಿಳೆ ಭಾಗವಹಿಸುವುದು ಭಾರತದಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಭಾರತದ ಇತಿಹಾಸವನ್ನು ಅವಲೋಕಿಸಿದಾಗ ಬಹುಪೂರ್ವದಿಂದಲೂ ಮಹಿಳೆಯರು ಪುರುಷರ ಹಾಗೆ ಕೃಷಿಯಲ್ಲಿ ಕಾರ್ಯನಿರತರಾಗಿದುದ್ದು ಕಂಡು ಬರುತ್ತದೆ. ಮಹಿಳೆ ಕೃಷಿಗೆ ಅಂಟಿಕೊಂಡೇ ಬೆಳೆದು ಬಂದಿದ್ದಾಳೆ. ಮಹಿಳೆಗೂ ಮಣ್ಣಿಗೂ ಬಿಗಿಯಾದ ನಂಟಿರುವುದು ರಾಮಾಯಣ ಮಹಾಭಾರತ ಗ್ರಂಥಗಳಲ್ಲೂ ಕಾಣಬಹುದು. ಜನಕ ಮಹಾರಾಜ ತನ್ನ ಪತ್ನಿಯೊಂದಿಗೆ ಚಿನ್ನದ ನೇಗಿಲಿನಿಂದ ಭೂಮಿಯನ್ನು ಉಳುತ್ತಿದ್ದನೆಂದು ರಾಮಾಯಣದಲ್ಲಿ ತಿಳಿಸಲಾಗಿದೆ. ಅಧಿಕ ಬೆಳೆಯನ್ನು ಉತ್ಪಾದಿಸಲು 'ಸೀತಾಯಜ್ಞ' ಮಾಡಬೇಕೆಂದು ಮಹಾನ್ ಸಂಸ್ಕೃತ ವಿದ್ವಾಂಸರು ಹೇಳಿದ್ದಾರೆ. ರಾಮಾಯಣದಲ್ಲಿಸೀತೆ ಎಂದರೆ ಉತ್ತ ಭೂಮಿಯಿಂದ ಉದ್ಭವವಾದವಳು ಎಂದು. ಪ್ರಾಚೀನ ಗ್ರಂಥಗಳಲ್ಲಿ ಮಹಿಳೆ ಪುರುಷನೊಂದಿಗೆ ಸರಿಸಮಾನಾಗಿ ದುಡಿಯುತ್ತಿದ್ದಳು ಎಂದು ಉಲ್ಲೇಖಿಸಲಾಗಿದೆ. ಕೇವಲ ಹಳ್ಳಿಯ ಮಹಿಳೆಯೇ ಮಾತ್ರವೇ ಅಲ್ಲ, ಪುರಾಣದ ಮಹಿಳೆಯೂ ಕೃಷಿಯ ಬಗ್ಗೆ ಅಷ್ಟೇ ಆಸಕ್ತಿವಹಿಸುತ್ತಿದ್ದಳು ಎಂದು ಹೇಳಲಾಗಿದೆ. ಅಂದು ಪ್ರತಿಗೃಹಿಣಿಯೂ ತರಕಾರಿಗಳು ಹಾಗೂ ಅವುಗಳನ್ನು ಯಾವ ಯಾವ ಕಾಲದಲ್ಲಿ ಹೇಗೆ ಬಿತ್ತನೆ ಮಾಡಬೇಕೆಂಬ ಬಗ್ಗೆ ತಿಳಿದಿದ್ದಳು. ಮಹಿಳೆ ಕೃಷಿಯಲ್ಲಿ ಪುರುಷನೊಂದಿಗೆ ಬಹುವಾಗಿ ಸಹಕರಿಸುತ್ತಿದ್ದಳು. ಎಂಬ ಬಗ್ಗೆ ಪುರಾತನ ಕಾಲಗಳಲ್ಲಿ ಅನೇಕ ನಿದರ್ಶನಗಳನ್ನು ಕಾಣಬಹುದು.

ಸಾಂಚಿಯ ಕಲಾಕುಸುರಿಗಳು ಇದಕ್ಕೊಂದು ಉದಾಹರಣೆ. ಜೈನರ ಕೃತಿಗಳಲ್ಲೂ ಮಹಿಳೆಯರು ಹೊಲಗಳಲ್ಲಿ ಹಾಡು ಹೇಳುತ್ತಾ ಗಲಾಟೆ ಮಾಡುತ್ತಾ ಮೃಗಪಕ್ಷಿಗಳನ್ನು ಓಡಿಸುತ್ತಿದ್ದರು ಎಂದು ಹೇಳಲಾಗಿದೆ. ಕಾಳಿದಾಸ ತನ್ನ 'ರಘುವಂಶ' ಕಾವ್ಯದಲ್ಲಿ ಮಹಿಳೆ ಕಬ್ಬು ಭತ್ತದ ಗದ್ದೆಗಳಲ್ಲಿ ಇಂಪಾಗಿ ಹಾಡುತ್ತಿದ್ದ ಬಗ್ಗೆ ಹೇಳಿದ್ದಾನೆ. ಅವನು 'ಮೇಘಧೂತ'ದಲ್ಲಿ ಹೆಣ್ಣಿನ ಹಿರಿಮೆಯನ್ನು ಮತ್ತಷ್ಟು ಮನೋಜ್ಞವಾಗಿ ಚಿತ್ರಿಸಿದ್ದಾನೆ. ಕಾಲಕ್ಕೆ ಸರಿಯಾಗಿ ತನ್ನ ಕೃಷಿಕಾರ್ಯಗಳನ್ನು ಕೈಗೊಳ್ಳುವುದು ಉತ್ತಮ ಬೆಳೆ ಪಡೆಯುವುದು ಇತ್ಯಾದಿಗಳಲ್ಲಿ ಮಹಿಳೆಯು ಪುರುಷನಷ್ಟೇ ಆಸ್ಥೆ ವಹಿಸಬಲ್ಲಳು ಎಂದು ಕಾಳಿದಾಸ ಹೇಳಿದ್ದಾನೆ. ಹೀಗೆ ಪ್ರಾಚೀನ ಗ್ರಂಥಗಳು ಕೃಷಿಗೆ ಸಂಬಂಧಿಸಿದಂತೆ ಮಹಿಳೆಗೆ ಮಹೋನ್ನತ ಸ್ಥಾನ ನೀಡಿವೆ.

"ಸ್ತ್ರೀ ಗರ್ಭಧಾರಣಾ ಶಕ್ತಿಗೂ ಭೂಮಿಯ ಸಸ್ಯಧಾರಣ ಶಕ್ತಿಗೂ ಸಂಬಂಧ ಕಲ್ಪಿತವಾದುದು ಹೆಣ್ಣಿನ ಘನತೆಯನ್ನು ಹೆಚ್ಚಿಸಿತು. ಕೃಷಿಗೆ ಮೊದಲು ಗಂಡು ಹೆಣ್ಣಿನ ಸಂಭೋಗ ಗದ್ದೆಯಲ್ಲಿ ನಡೆಯಬೇಕಾಗಿತ್ತು."

ಇಲ್ಲದಿದ್ದರೆ ನೆಲದ ಸಮೃದ್ಧಿಯನ್ನು ಬರಡಾಗಿಸಬಹುದೆಂಬ ಭಯ ಜನರನ್ನು ಕಾಡಿತು. ಆ ಕಾರಣದಿಂದಲೇ ಕೃಷಿ ಚಟುವಟಿಕೆಯಲ್ಲಿ ಸ್ತ್ರೀ ಪ್ರಾಧಾನ್ಯತೆ ಪಡೆದಳು. ಭೂಮಿಯೊಂದಿಗೆ ಹೊಕ್ಕಳು ಬಳ್ಳಿಯ ಸಂಬಂಧವಿಟ್ಟುಕೊಂಡ ಮಾನವ ಜೀವಿ ತನಗೆ ತಾಯ್ತನದ ವಾತ್ಸಲ್ಯತೆಯ ಸ್ವರೂಪ ನೀಡಿದ ಭೂಮಿಯೊಂದಿಗೆ ಈ ರೀತಿಯ ಅನುಸಂಧಾನ ಏರ್ಪಡಿಸಿಕೊಳ್ಳುವುದು ಕ್ರಿಯಾಶೀಲತೆಯ ಪ್ರತೀಕವಾಯಿತು. ಅನೇಕ ನಿಗೂಢತೆಯ ರಹಸ್ಯತನ ಮತ್ತು ಅದ್ಭುತಗಳನ್ನು ಒಡಲೊಳಗೆ ಹುದುಗಿಸಿಕೊಂಡ ಭೂಮಿಯ ಬಗ್ಗೆ ಈ ರೀತಿ ಭಯ ಮತ್ತು ಜೀವನ ಪ್ರೀತಿಯನ್ನು ಬೆಳೆಯುವ ಅಗತ್ಯ ಮನುಷ್ಯನಿಗಿತ್ತು. ಆದ್ದರಿಂದಲೇ ಇವತ್ತಿಗೂ ದೀವರಲ್ಲಿ ಮಗು ಹುಟ್ಟಿದ ಕೂಡಲೇ ನೆಲಕ್ಕೆ ಹಾಕುವುದು ಹಾಗೂ ಭೂಮಿ ಹುಣ್ಣಿಮೆಯಲ್ಲಿ ಭೂಮಿಯನ್ನು ಪೂಜಿಸಿ ಸಂಭ್ರಮಿಸುವುದು, ಭೂಮಿಯ ಬಗೆಗಿನ ಅನೂಹ್ಯ ಭಕ್ತಿಯೇ ಇದಕ್ಕೆ ಕಾರಣ. ಮಲೆನಾಡಿನ ದೀವರಲ್ಲಿ ಈಗಲೂ ಪುರುಷ ಪ್ರಾಧಾನ್ಯತೆ ಇದ್ದರೂ ಕೂಡಾ ಮಹಿಳೆಯ ಪಾತ್ರ ಮಹತ್ವವಾದದು. ಎಂಬುದನ್ನು ನಿರಾಕರಿಸಲಾಗದು. "ಮಹಿಳೆಯೇ ಕೃಷಿ ಕಾರ್ಯಗಳ ಸೂತ್ರಧಾರಣಿ, ಅವಳಿಲ್ಲದೆ ಯಾವ ಕೃಷಿಕಾರ್ಯವು ನೆಡೆಯುವಂತಿಲ್ಲ ಕೃಷಿಯ ಬಗ್ಗೆ ಅವಳು ಹೊಂದಿರುವ ಜ್ಞಾನಭಂಡಾರ ಅಗಾಧವಾದುದು." ಭೂಮಿಯ ಹದ, ಬೀಜದ ಬಿತ್ತನೆ, ನಾಟಿಯ ಕೆಲಸ, ಕಳೆ ಕೀಳುವಿಕೆ, ಕಾಳು ಬಿಡುಸುವಿಕೆ, ಗೊಬ್ಬರ ಹಾಕುವುಕೆ, ಬೆಳೆಯನ್ನು ಕಾಯುವಿಕೆ, ಹುಲ್ಲು ಆಯುವಿಕೆ, ಬೆಳೆಕೊಯ್ಯಲು ಹೀಗೆ ನೇಗಿಲಿನಿಂದ ಹಿಡಿದು ಸುಗ್ಗಿಯವರೆಗೆ ಕೃಷಿಯ ಎಲ್ಲಾ ಕೆಲಸವನ್ನು ಮಹಿಳೆಯೇ ನಿರ್ವಹಿಸುತ್ತಾಳೆ.

ಅವಳಿದ್ದಲ್ಲಿ ಕೃಷಿಕಾರ್ಯಗಳಲ್ಲಿ ಅಚ್ಚುಕಟ್ಟು, ಒಪ್ಪಓರಣ, ಕೆಲಸಗಳು ಬರಬರನೇ ನಡೆದು ಬಿಡುತ್ತವೆ. ಮಣ್ಣೆಂದರೆ ದೀವರ ಮಹಿಳೆಗೆ ಅಪಾರ ಮಮತೆ ಕೃಷಿಯ(..)ಲ್ಲಿ ಗೃಹಿಣಿ ಎಷ್ಟರ ಮಟ್ಟಿಗೆ ತಲ್ಲೀನಳಾಗಿ ಬಿಡುತ್ತಾಳೆಂದರೆ ಅವಳು ಎಲ್ಲವನ್ನು ಆ ಕ್ಷಣಕ್ಕೆ ಮರೆತು ಬಿಡುತ್ತಾಳೆ. ಕೃಷಿ ಕಾರ್ಯಗಳು ನಿರೀಕ್ಷಿತ ಮಟ್ಟದಲ್ಲಿ ಸಾಗಿದಾಗ ಬೆಳೆ ಹಾಳಾದಾಗ, ಅವಳ, ಕಳವಳ ಪರದಾಟ ಹೇಳತೀರದು, ಕೃಷಿ ಕಾರ್ಯಗಳಲ್ಲಿ ಪತ್ನಿ ಜೊತೆಗಿದ್ದಲ್ಲಿ ಗಂಡನಿಗೆ ಓಗ್ಗು. ಆದರೆ ಅದೇ ಪತ್ನಿ ಯಾವುದಾದರೂ ಕಾರಣದಿಂದ ಕೃಷಿಯಲ್ಲಿ ಪಾಲ್ಗೊಳ್ಳದಿದ್ದಾಗ ಅವನ ತಲ್ಲಣ ಹೇಳತೀರದು ಪರಿಣಾಮ ಕೃಷಿ ಕಾರ್ಯಗಳಲ್ಲಿ ಅಸ್ತವ್ಯಸ್ತತೆ ಕಾಣುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಒಂದು ಹೆಣ್ಣನ್ನು ಸೊಸೆಯಾಗಿ ತರುವುದೆಂದರೆ ಮನೆ ಮಂದಿಗೆಲ್ಲಾ ಸಂತೋಷ. ಕಾರಣ ಕೃಷಿಯಲ್ಲಿ ಪಾಲ್ಗೊಳ್ಳಲು ಒಬ್ಬ ಹೆಣ್ಣು ದೊರೆತಳು ಎಂದು ಅದೇ ಮನೆಮಗಳು ಮದುವೆಯಾಗಿ ಗಂಡನ ಮನೆಗೆ ಹೊರಟು ನಿಂತರೆ ಸಂತಸದಲ್ಲೂ ತುಸು ವ್ಯಥೆ. ಕಾರಣ ಒಬ್ಬ ಹೆಣ್ಣಾಳು ಕಡಿಮೆಯಾದದ್ದರಿಂದ ಕೃಷಿಗಾಗುವ ನಷ್ಟ ಅವರ ವ್ಯಥೆಗೆ ಕಾರಣವಾಗಿರಲೂಬಹುದು. ದೀವರು ಅತೀ ಹೆಚ್ಚು ಬೆಳೆಯುವ ಬೆಳೆ ಭತ್ತ. ಇತ್ತೀಚಿಗೆ ಕೆಲವರು ಅಡಿಕೆ ತೋಟ ಮಾಡಿಕೊಂಡಿದ್ದಾರೆ. ಅರೆಕಾಲಿಕವಾಗಿ ಅವರೆ, ಶೇಂಗಾ, ಹೆಸರು, ಕಡ್ಲೆ, ಉದ್ದು, ಎಳ್ಳು ಮುಂತಾದವನ್ನು ಬೆಳೆಯುತ್ತಾರೆ. ಬಾಳೆ ಹಾಕುವುದು, ಶುಂಠಿ ಹಾಕುವುದು, ಹತ್ತಿ ಬೆಳೆಯುವುದು ಇತ್ತೀಚಿನ ಬೆಳವಣಿಗೆ. ಮಲೆನಾಡಿನ ದೀವರು ಯಾವಾಗಲೂ ಕೆಲಸದಲ್ಲಿ ನಿರತರಾಗಿರುತ್ತಾರೆ. ಏಕೆಂದರೆ ಕೃಷಿ ಆಧಾರಿತ ಬದುಕೇ ಅವರದಾಗಿರುವುದರಿಂದ ಯಾವತ್ತು ಬಿಡುವು ಬಿಟ್ಟುಕೊಳ್ಳುವುದಿಲ್ಲ. ಕೊಯ್ಲು ಆದ ನಂತರ ಅಥವಾ ದೀಪಾವಳಿ ಆದ ಬೆಳಿಗ್ಗೆ ಗಳೇವು ಕಟ್ಟಲು ಆರಂಭಿಸುತ್ತಾರೆ.

ಗದ್ದೆಕೊಯ್ಲು ಆದ ತಕ್ಷಣ ಗದ್ದೆಯಲ್ಲಿ ಹದ ಇರುವುದರಿಂದ ಹೊಲ ಹೂಡುತ್ತಾರೆ. ಇದನ್ನು 'ಹೋಕೆ' ಹೊಡೆಯುವುದು ಎನ್ನುತ್ತಾರೆ. ಅದರ ಮೇಲೆ ಕೊರಡು ಹೊಡೆದು ಸಮತಟ್ಟು ಮಾಡಿಕೊಳ್ಳುತ್ತಾರೆ. ನಂತರ ಮತ್ತೊಮ್ಮೆ 'ಇತ್ತಾಲು' (ಇರ +ಸಾಲು= ಎರಡನೇ ಸಾಲು) ಹೊಡೆದು ಎಳ್ಳು, ಅವರೆ, ಹುರುಳಿ ಮುಂತಾದವುಗಳನ್ನು ಚೆಲ್ಲುತ್ತಾರೆ. ಬಿತ್ತನೆ ಸಮಯ ಬಂದಾಗ ಹೆಗ್ಗುಂಟೆ ಹೊಡೆದು ಸಾಪಾಗಿ ಇಟ್ಟುಕೊಳ್ಳುತ್ತಾರೆ. ಒಂದು ಎಕರೆ ಗದ್ದೆಗೆ ೬ರಿಂದ ೧೦ಗಾಡಿ ಗೊಬ್ಬರ ಹೊಡೆದುಕೊಳ್ಳುತ್ತಾರೆ. ಕೆಲವರು ಗೋಡು ಮಾತ್ರ ಹೊಡೆಯುತ್ತಾರೆ. 'ಭರಣಿ' ಮಳೆಗೆ ಬೀಜ ಮೂಹೂರ್ತ ಮಾಡುತ್ತಾರೆ. ಈ ಹೊತ್ತಿಗೆ ಅಂಚುಕಟ್ಟಿ, ಮೂಲೆಕಟ್ಟಿ, ಕಸ, ಕಡ್ಡಿ, ಹೊಡೆದು ಬೇಲಿಕಟ್ಟಿ ಸಿದ್ಧ ಮಾಡಿಟ್ಟುಕೊಳ್ಳುತ್ತಾರೆ.

ಒಂದು ಮಳೆ ಬಂದು ಹದವಾಗುವುದನ್ನು ಕಾಯುತ್ತಿರುತ್ತಾರೆ. ಬಿತ್ತುವ ದಿನ ಮನೆಯಲ್ಲಿ ಮಂಕರಿಗೆ ನೇಗಿಲು, ನೊಗ, ಅಷ್ಟ ಸೆರಗು ಎತ್ತಿನ ಕೊಂಬಿಗೆ ಜೇಡಿ ಕೆಮ್ಮಣ್ಣು ಬಳಿದು ತೋರಣಕಟ್ಟಿ ಬ್ಯಾನಪ್ಪನನ್ನು ಇಟ್ಟು ಐದುಗರಿಕೆ ಹುಲ್ಲಿಟ್ಟು ಗಂಡಸರು ಗದ್ದೆಗೆ ಪೂಜೆ ಮಾಡುತ್ತಾರೆ. ಎತ್ತುಗಳನ್ನು ಪೂರ್ವಕ್ಕೆ ಮುಖಮಾಡಿ ನಿಲ್ಲಿಸಿ ಹಣ್ಣು ಕಾಯಿ ಪೂಜೆ ಮಾಡಿ 'ಹೂಲಿಗ್ಯಾ' ಎನ್ನುತ್ತಾರೆ. ಅಕಸ್ಮಾತ್ ಮೂಹೂರ್ತ ಸಿಗದೇ ಇದ್ದರೆ ಸಿಕ್ಕ ಮೂಹೂರ್ತದಲ್ಲಿ ಬಿತ್ತಲಾಗದಿದ್ದರೆ ಅವತ್ತು ಬಿಡುವ ಶಾಸ್ತ್ರ ಮಾಡುತ್ತಾರೆ. 'ಮೂಲೆಬಿತ್ತಲು' ಅಂದರೆ ಐದು ಸಾಲು ಬೀಜವನ್ನು ಶಾಸ್ತ್ರವೆಂಬಂತೆ ಬಿತ್ತನೆ ಮಾಡುತ್ತಾರೆ.

ಇದರಲ್ಲಿ ಎರಡು ತರಹದ ಸಾಗುವಳಿ ಕ್ರಮಗಳಿವೆ.

೧. ಬಿತ್ತನೆ: ಎತ್ತರ ಪ್ರದೇಶಕ್ಕೆ ಬಿತ್ತನೆ ಮಾಡುತ್ತಾರೆ.

೨. ನಾಟಿ: ಹೊಂಡ ಮತ್ತು ತೆಗ್ಗಿನ ಗದ್ದೆಗಳಿಗೆ ನಾಟಿ ಮಾಡುತ್ತಾರೆ.

ಹೊಂಡ ಮತ್ತು ತೆಗ್ಗಿನ ಗದ್ದೆಗಳಿಗೆ ನಾಟಿ ಮಾಡಿದರೆ ಎತ್ತರ ಪ್ರದೇಶಕ್ಕೆ ಬಿತ್ತನೆ ಮಾಡುತ್ತಾರೆ. ಗಂಡಸರು ನೇಗಿಲಿನಿಂದ ಹೂಡುತ್ತಾ ಹೋದರೆ ಹೆಂಗಸರು ಬಿತ್ತುತ್ತಾ ಹೋಗುತ್ತಾರೆ. ಇದರಲ್ಲಿ ಎರಡು ವಿಧ, ಹೊರಕ್ಕೆ ಬಿತ್ತನೆ. ಒಳಕ್ಕೆ ಬಿತ್ತನೆ. ಎರಡು ಕೈಯಿಂದ ಬೀಜ ಚೆಲ್ಲುತ್ತಾ ಹೋದರೆ ಅದು ಹೊರಕ್ಕೆ ಬಿತ್ತನೆ. ಒಂದೇ ಕೈಯಿಂದ ಸಾಲಿನ ಗುಂಟೆ ಹಾಕುತ್ತಾ ಹೋದರೆ ಇದು ಒಳಕ್ಕೆ ಬಿತ್ತನೆ. ಬಿತ್ತುವಾಗ ಭತ್ತವನ್ನು ದಪ್ಪವಾಗಿ ಚೆಲ್ಲಿದ್ದರೆ ಸಸಿ ಬೆಳೆದಾದ ಮೇಲೆ ಕೀಳಲಿಕ್ಕೆ ಆಗುತ್ತದೆ. ಬೇರೆ ಕಡೆ ಸಸಿ ಹೋದಲ್ಲಿ ಹಾಕಲು ಅನುಕೂಲವಾಗುತ್ತದೆ. ಎಂಬ ಕಾರಣ ಇದನ್ನು 'ಬರ ಅಗೆ' ಅಥವಾ 'ಸಾಲು ಅಗೆ' ಎನ್ನುತ್ತಾರೆ. ತಮ್ಮ ಗದ್ದೆಗೆ ಎಷ್ಟು ಭತ್ತ ಬೇಕಾಗಬಹುದು ಎಂಬ ಅಂದಾಜಿನ ಮೇಲೆ ಎರಡು ಗುಡ್ಡೆ ಗೊಬ್ಬರಕ್ಕೆ ಭತ್ತವನ್ನು ಬೆರೆಸುತ್ತಾರೆ. ಭತ್ತ ಬಿತ್ತುವವರು, ಸಾಲು ಹೊಡೆಯುವವರು ಒಬ್ಬರಾದರೆ; ಗುಂಟೆಯಿಂದ ಹೆಂಗಸರು ಸೊಂಟಕ್ಕೆ ಕಟ್ಟಿಕೊಂಡ ಮಂಕರಿಗೆ ತಂದು ಭತ್ತ ಹಾಕಲು ಒಬ್ಬರಿರುತ್ತಾರೆ. ಇದನ್ನು ಸಾರ ಕೊಡುವುದು ಎನ್ನುತ್ತಾರೆ. ಬೀಜ ಬಿತ್ತಿದ ಮೇಲೆ ಗೊಬ್ಬರ ಬೀಸಿಕೊಂಡು ಹೊಡೆಯುತ್ತಾರೆ. ಬಿತ್ತಿದ ಐದರಿಂದ ಏಳು ದಿನಕ್ಕೆ ಸಸಿ ಏಳತೊಡಗುತ್ತದೆ. ಎರಡು ದಿನಕ್ಕೆ ಮಳೆ ಬಂದರೆ ಭೂಮಿ ಗಟ್ಟಿಯಾಗಿ ಬಾಯಿಕಳೆದುಕೊಂಡು ಬಿಡುತ್ತದೆ. ಆಗ ನಿಧಾನವಾಗಿ ಕೊರಡು ಹೊಡೆದು ಸಡಿಲ ಮಾಡುತ್ತಾರೆ. ಸಸಿ ಎದ್ದ ಮೇಲೆ ಹರಟೆ ಕುಂಟೆಯಿಂದ ಹರಗುತ್ತಾರೆ. ಸಸಿ ಸಣ್ಣದಿದ್ದರೆ ಒಂದು ಸಾಲು ಬಿಟ್ಟು ಒಂದು ಸಾಲು ಹರಗುತ್ತಾರೆ. ಇದನ್ನು 'ತುಂಬ ತುಂಬಾ' ಎನ್ನುತ್ತಾರೆ. ಸಾಲು ಸಾಲಾಗಿ 'ಬಿತ್ತಳೆ' ಎನ್ನುತ್ತಾರೆ. ಕುಂಟೆ ಹೊಡಿದಾದ ಮೇಲೆ ಸಸಿ ಮುಚ್ಚಿಕೊಳ್ಳುತ್ತದೆ ಎಂಬ ಕಾರಣದಿಂದ 'ಎಳಾಲುಪಟ್ಟಿ' ಎಳೆಯುತ್ತಾರೆ.

ಇದು ಹೆಂಗಸರ ಕೆಲಸ. ನಾಲ್ಕರಿಂದ ಐದು ದಿನ ಬಿಟ್ಟು ಮಳೆ ಬಂದ ಮೇಲೆ ಮತ್ತೊಂದು ಬಾರಿ ಹರಗುತ್ತಾರೆ. ಕಳೆ ಹೆಚ್ಚಾದರೆ ಹದಸಿಕ್ಕಾಗ, ಕಳೆ ಇದ್ದರೆ, ಜಡ್ಡು ಹೆಚ್ಚಾದರೆ ನೇಗಿಲು ಹೊಡೆದು ಕೊರಡು ಹೊಡೆದು ಕುಂಟೆ ಹೊಡೆಯುತ್ತಾರೆ. ಕಳೆ ಇದ್ದರೆ ಹರಗಿ 'ಮೇಳಿಕೊರಡು' (ನೀರು ಕೊರಡು) ಹೊಡೆಯುತ್ತಾರೆ. ಇದನ್ನು 'ನೀರು ಹರತೆ' ಎನ್ನುತ್ತಾರೆ. ಜಾಸ್ತಿ ಕಳೆ ಆದರೆ ಆಲಕನ್ನು ಹೊಡೆಯುತ್ತಾರೆ. ಸಸಿ ಹೋದಲ್ಲಿ ಸಸಿ ನೆಡುವುದನ್ನು ಮಾಡುತ್ತಾರೆ. ಆಲ ಬಾಚುತ್ತಾರೆ. ಕಳೆ ಜಡ್ಡು ಬೆಳೆಯದಂತೆ ಗದ್ದೆಯಲ್ಲಿ ನೀರು ನಿಲ್ಲಿಸಲು ಹಾಳೆ ಕಡಿದು ಮೇಲಕ್ಕೆ ಹಾಕುತ್ತಾರೆ. ಇದನ್ನು ಹಾಳೆ ಹಾಕುವುದು ಎನ್ನುತ್ತಾರೆ. ಕಳೆ ತೆಗಿಯುವುದು ಪ್ರತಿದಿನ ಬೆಳಿಗ್ಗೆ ನೀರು ನೋಡುವುದು ನ್ಯಾರೆ ತೆಗೆಯುವುದು ನಡೆಯುತ್ತದೆ. ನ್ಯಾರೆ ತೆಗೆಯಲು ಅನುಭವಸ್ಥ ಹೆಂಗಸರೆ ಆಗಬೇಕು. ಇಲ್ಲದಿದ್ದರೆ ಸಸಿ ಕೀಳುವ ಸಾಧ್ಯತೆ ಇದೆ. ಹೊಡೆ ಬರುವಾಗ ಅಥವಾ ಹೊಡೆ ಬಂದ ಮೇಲೆ ಇತ್ತೀಚೆಗೆ ಮೇಲುಗೊಬ್ಬರ ಕೊಡುವ ಪದ್ಧತಿ ಆರಂಭವಾಗಿದೆ. ಆ ನಂತರ ಕೊಯ್ಲು ಆರಂಭವಾಗುತ್ತದೆ.

**ನಾಟಿ:** ನಾಟಿಗೆ ತಯಾರು ಮಾಡುವಾಗ ಎರಡು ಬಗೆಯ ಅಗೆ ಹಾಕಿಕೊಳ್ಳುತ್ತಾರೆ.

**ಒಣ ಅಗೆ:** ಇದರಲ್ಲಿ ಎರಡು ಬಗೆ ೧. ಸಾಲು ಮಾಡಿ ದಪ್ಪವಾಗಿ ಭತ್ತ ಚೆಲ್ಲುವುದು ೨. ಮಡಿಮಾಡ ಭತ್ತ ಚೆಲ್ಲಿ ತೆಳುವಾಗಿ ಮಣ್ಣು ಹರಡುವುದು.

ಹುಡಿ ಅಗೆ, ಕಳ್ಡ ಅಗೆ ಅಥವಾ ಅರಲು ಅಗೆ ನೀರು ನಿಲ್ಲಿಸಿ ಅರಲು ಮಾಡಿ ಭತ್ತವನ್ನು ಹೊಯ್ಯುವುದು ಅಥವಾ ಬೇರು ಬಿಟ್ಟು ಕೆಲ್ಲು ಆದ ಮೇಲೆ ಅರಲಿಗೆ ಹಾಕುವುದು ಚೀಲದಲ್ಲಿ ಭತ್ತ ನೆನಸಿ ಒಂದು ಮೂಲೆಯಲ್ಲಿ ಕಲ್ಲು ಹೇರಿ ಇಡುತ್ತಾರೆ. ದಿನಕ್ಕೊಂದು ಬಾರಿ ಪೆಂಟಿ ಹೊಡೆದು ನೀರು ಹಾಕುತ್ತಾರೆ. ನಾಲ್ಕೈದು ದಿನಕ್ಕೆ ಕೆಲ್ಲು ಬರುತ್ತದೆ. ಅದನ್ನು ಅರಲಿನ ಗದ್ದೆಯಲ್ಲಿ ತುಳಿಯುತ್ತಾರೆ. ಹರಡುವುದು ಅಥವಾ ಮಳೆ ಕಟ್ಟಿದ ಮೇಲೆ ನೇರವಾಗಿ ಚೆಲ್ಲುತ್ತಾರೆ. ನಿಧಾನವಾಗಿ ಕಲ್ಲೊಡೆಯುತ್ತಾರೆ. ಹಗಲು ನೀರು ನಿಲ್ಲಿಸಿ ನಂತರ ರಾತ್ರಿ ಒಡೆಯುತ್ತಾರೆ. ಇದರಿಂದ ಸರಿಸುಮಾರು ಒಂದು ಎಕರೆಗೆ ೧೨ ಗದ್ದೆ ನೀರು ಮಾಡಿಕೊಂಡು ಹೂಡಿ ಕೊಲ್ಲು ಹೊಡೆದು ೪ದಿನ ನೀರು ನಿಲ್ಲಿಸಿ ಜಡ್ಡು ಕೊಳೆಯುವಂತೆ ಮಾಡುತ್ತಾರೆ. ಆ ನಂತರ ನೀರು ಒಡೆದುಕೊಂಡು ರಂಟೆ ಹೊಡೆದುಕೊಳ್ಳುತ್ತಾರೆ. ನಾಲ್ಕು ದಿನ ನೀರು ಕಟ್ಟುತ್ತಾರೆ. ಸಸಿ ನೆಡುವ ಸಮಯದಲ್ಲಿ ಮೂರನೇ ಸಾರಿ ಗದ್ದೆ ಹೂಡಿ ಏರುಪೇರಾಗದಂತೆ 'ನಳ್ಳಿ' (ಕೊರಡಿನಂತಿರುವ ಅಗಲ ರೂಪದ್ದು ಮಧ್ಯ ಒಂದು ಹಿಡಿಕೆ ಇರುತ್ತದೆ.) ಹೊಡೆಯುತ್ತಾರೆ. ಅದರ ಮೇಲೆ ಮತ್ತೆ ಕೊರಡು ಹೊಡೆಯುತ್ತಾರೆ. ಇದಾದ ಮೇಲೆ ಗೊಬ್ಬರ ಚೆಲ್ಲುತ್ತಾರೆ. ನಾಟಿ ಮಾಡಿದ ದಿನ ನೀರು ತೆಗೆದು ಮಾರನೇ ದಿನ ನೀರು ಕಟ್ಟುತ್ತಾರೆ. ಏಕೆಂದರೆ ಕೆಸರು ಜಾಗಕ್ಕೆ ಸಸಿ ಆಳವಾಗಿ ಇಳಿಯಲಿ ಎಂದು ಐದು ಕಟ್ಟಿಗೆ ಒಂದು ಮೆದೆ ಕೈತುಂಬಿದನ್ನು 'ಕಟ್ಟು' ಎನ್ನುತ್ತಾರೆ. ನೂರು ಮೆದೆ ಒಂದು ಎಕರೆಗೆ ಸರಿಯಾಗುತ್ತದೆ. ಹೆಂಗಸರು ಅಗೆ ಕಿತ್ತು ಕಟ್ಟು ಮಾಡಿ ನಾಟಿ ಮಾಡುವ ಜಾಗಕ್ಕೆ ಹೊತ್ತೊಯ್ಯುತ್ತಾರೆ. ಹಾಗೆಯೇ ನಾಟಿ ಕೆಲಸ ಆರಂಭವಾಗುತ್ತದೆ. ನಾಟಿ ಮುಗಿದ ದಿನ 'ಹುಲಿಕೆ' ಮಾಡುತ್ತಾರೆ. 'ಹುಲಿಕೆ' ಎಂದರೆ ಸಿಹಿಊಟ (ಪಾಯಸ ಚಿತ್ರಾನ್ನ) ಇರುತ್ತದೆ. ಕಡಹುಲಿಕೆ ಎಂಬ ಇನ್ನೊಂದು ಪದ್ಧತಿ ಇದೆ. ಇಲ್ಲಿ ಕಳಸವನ್ನು ಮಾಡಿ ರೊಟ್ಟಿ ಸುಟ್ಟು ಕಳಸಕ್ಕೆ ಕೈಮುಗಿದು

ರೊಟ್ಟಿ ತಿನ್ನುತ್ತಾರೆ. ನಾಟಿ ಮಾಡಿದ ಮೇಲೆ ಆಳುಗಳು ಅರಲಿನಲ್ಲಿ ಕೈ ಅದ್ದಿ ಮನೆಯ ಯಜಮಾನಿಯ ಬೆನ್ನ ಮೇಲೆ ಹಸ್ತ ಇಡುತ್ತಾರೆ. ಇದನ್ನು ಚಟ್ಟು ಒತ್ತುವುದು ಎನ್ನುತ್ತಾರೆ. ಮದುವೆಯ ಮನೆಯಲ್ಲಿ ಸೊಸೆ ಹೊಸ್ತಲು ದಾಟಿ ಒಳಗೆ ಬಂದಾಗ ಇಡಕಲು ಬಳಿಯೂ ಇದೆ ರೀತಿಯ ಚಟ್ಟು ಒತ್ತುವ ಪದ್ಧತಿ ಇದೆ. ಅಲ್ಲಿ ಕೆಮ್ಮಣ್ಣನ್ನು ಬಳಸುತ್ತಾರೆ. ಈ ಚಟ್ಟು ಒತ್ತುವುದು ಸಾಂಕೇತಿಕವಾಗಿ ಫಲವಂತಿಕೆಯನ್ನು ಪ್ರತಿನಿಧಿಸುತ್ತದೆ. ನಾಟಿ ಮುಗಿದ ಮೇಲೆ ೪ ಇಂಚು ನೀರು ನಿಲ್ಲಿಸುತ್ತಾರೆ. ಇದನ್ನು ಮಡೆ ಕಟ್ಟುವುದು ಎನ್ನುತ್ತಾರೆ. ನಾಟಿ ಮಾಡಿದ ಮೇಲೆ 'ಮಂಡೇಡಿ' ಜಾತಿಯ ಏಡಿ ಸಸಿಯನ್ನು ಕೊರೆದು ತಿನ್ನುತ್ತದೆ. ಆ ನೀರನ್ನು ಇಂಗಿಸಿ ದುಂಭಕ್ಕೆ ಹುಲ್ಲು ಮುರಿ ತುಂಬಿ ದೊಣ್ಣೆಯಲ್ಲಿ ತುರುಕಿ ಬಿಗಿ ಮಾಡುತ್ತಾರೆ. ಈ ರೀತಿ ಏಡಿ ಕಡಿಯುವುದನ್ನು 'ದುಂಬು ಏರಿದೆ' ಎನ್ನುತ್ತಾರೆ.

ಇಲಿ ಕಡಿಯಲು ಆರಂಭಿಸಿದರೆ ಗುಮ್ಮಗೂಟ ನಿಲ್ಲಿಸುತ್ತಾರೆ. 'ಗುಮ್ಮಗೂಟ' ಎಂದರೆ ಹುಲ್ಲುಕಟ್ಟನ್ನು ಪಕ್ಷಿಯ ಆಕಾರದಲ್ಲಿ ಮಾಡಿ ಗೂಟಕ್ಕೆ ಸಿಗಿಸುತ್ತಾರೆ. ಆಗ ಇಲಿಗಳು ಯಾವುದೋ ಹಕ್ಕಿ ಬಂದು ಕುಳಿತಿದೆ ಎಂದು ಹೆದರಿ ಅವಿತುಕೊಳ್ಳುತ್ತದೆ. ಮಣೆ ಪಟ್ಟೆಯನ್ನು ತಂದು ಗದ್ದೆಯಲ್ಲಿ ಇಟ್ಟರೆ ಇಲಿಗಳು ಹೆದರಿ ಹಾವು ಎಂದು ಓಡುತ್ತವೆ. ಹಂದಿಯ ಕಾಟವಾದರೆ ಹೊರಗೆ ಗುಡಿಸಲು ಹಾಕಿ ಬೆಂಕಿ ಅಟ್ಟಣಿಗೆಯನ್ನು ಮಾಡಿಕೊಂಡು ಕೂಗುತ್ತಾ ಮಲಗುತ್ತಾರೆ. ಇಲ್ಲವಾದರೆ ಬಂಕಿನ ಪೈರು ತಂದು ಬರಲು ಮಾಡಿ ಕೆಡವುತ್ತಾರೆ. ಹುಲ್ಲು ಬಾಳೆ ಪಟ್ಟೆ ಗಂಟು ಹಾಕಿ ಹೆಣೆದು ಉರಿಯುವಂತೆ ಹೆದರಿಸುತ್ತಾರೆ. ಕೆಲವರು ಡಬ್ಬವನ್ನು ಕಟ್ಟಿ ಅದಕ್ಕೆ ಅಕ್ಕ ಪಕ್ಕ ಸಣ್ಣ ದೊಣ್ಣೆಗಳನ್ನು ಕಟ್ಟಿ ಶಬ್ದ ಬರುವಂತೆ ಆಗಾಗ ಎಳೆಯುತ್ತಿರುತ್ತಾರೆ. ಕೆಲಮೊಮ್ಮೆ ಗದ್ದೆಯ ಮದ್ಯ ಗೂಟವನ್ನು ನಿಲ್ಲಿಸಿ ಅದಕ್ಕೆ ಪ್ಲಾಸ್ಟಿಕ್‌ನ್ನು ಅಥವಾ ಹಾಳೆಯನ್ನು ತೂಗುಹಾಕಿ ಮನುಷ್ಯನೆಂದು ಭ್ರಮಿಸುವಂತೆ ಮಾಡುತ್ತಾರೆ. ಜಾರಿ ಮಳೆಗಳಲ್ಲಿ ಗದ್ದೆಯ ಅಂಚುಗಳೆಲ್ಲಾ ಒಡೆದು ಹೋದರೆ ಅದಕ್ಕೆ ನೆರಕೆ ಕಟ್ಟಿ ಮಣ್ಣು ತುಂಬಿಸಿ ಜಡ್ಡು ಹೊದಿಸಿ ಭದ್ರಮಾಡುತ್ತಾರೆ. ನಾಟಿ ಮುಗಿದ ನಂತರ ಮಳೆ ನಿಂತ ಮೇಲೆ ಕಳೆ ತೆಗೆಯುತ್ತಾರೆ. ನ್ಯಾರೆ ತೆಗೆಯುವುದು ನೆಡದೆ ಇರುತ್ತದೆ. ಅಂಚಿನ ಮೇಲೆ ಬೆಳೆದ ಹುಲ್ಲನ್ನು ಕೊಯ್ದು ಅಂಚುಸರಿಪಡಿಸುತ್ತಾರೆ.

ಪೈರಿಗೆ ತಗಲುವ ಕ್ರಿಮಿಕೀಟ ನಿವಾರಣೆಗೆ ಮುಕ್ಕಡ್ಕನ ಸೊಪ್ಪನ್ನು ಕಡಿದು ತಂದು ಗದ್ದೆಗಳ ಕಡೆಗೆ ಗೂಟ ಹೊಡೆದು ನಿಲ್ಲಿಸುತ್ತಾರೆ. ಬೆಂಕಿ ರೋಗ, ಬಿಳಿ ಎರಗು ರೋಗ ಬಂದಾಗ ಆರಕ್ಕಿ ಸುಟ್ಟು ಬಿದಿರಿನ ಗೂಟ ತಂದು ಅಲ್ಲಲ್ಲಿ ನೆಡುತ್ತಾರೆ. ಅದಕ್ಕೆ ಕಾರಣ ಕ್ರಿಮಿಕೀಟಗಳನ್ನು ಹಿಡಿದು ತಿನ್ನಲು ಬರುವ ಹಕ್ಕಿಗಳಿಗೆ ಈ ಗೂಟ ಸಹಾಯ ಮಾಡುತ್ತದೆ. ಗದ್ದೆಗೆ ದೃಷ್ಠಿಯಾದರೆ ಮಣ್ಣಿನ ಗಡಿಗೆಗೆ ಜೇಡಿಕೆಮ್ಮಣ್ಣು ಬೊಟ್ಟು ಇಟ್ಟು ಬೆಚ್ಚು ಮಾಡಿ ನಿಲ್ಲಿಸುತ್ತಾರೆ. ಇಲಿಗಳಿಗೆ ಸಾರಾಗವಾಗಿ ಓಡಾಡಲು ಜಡ್ಡು ಅನುಕೂಲ ಮಾಡಿಕೊಡುತ್ತದೆ. ಅದಕ್ಕಾಗಿ ಇಲಿ ಬರದಂತೆ ಬದಕೊಯ್ಯುತ್ತಾರೆ. ಅಲ್ಲಲ್ಲಿ ಖಾಲಿ ಡಬ್ಬ ಇಟ್ಟು, ಹಕ್ಕಿ, ಮಂಗ ಮುಂತಾದವುಗಳನ್ನು ಓಡಿಸುತ್ತಾರೆ. ಕೋವಿ ಇದ್ದವರು 'ಶಿಸ್ತು' ಕಟ್ಟುತ್ತಾರೆ. ಕೋವಿ ಇಲ್ಲದವರು ಆಳೆತ್ತರದ ಕುಣಿತೋಡಿ ಕುಣಿಯ ಬಾಯಿಗೆ ತಟ್ಟೆಕಟ್ಟಿ ಇಡುತ್ತಾರೆ. ಬರುವ ಪ್ರಾಣಿಗಳು ಹತ್ತಲಾಗದೇ ಚಡಪಡಿಸಿ ಆಹುತಿಯಾಗುತ್ತದೆ. ನಂತರ ಗದ್ದೆಕೊಯ್ಲು ಒಕ್ಕಲು ಹೀಗೆ ಮುಂದುವರೆಯುತ್ತದೆ.

**ಕುಮ್ರಿಬೇಸಾಯ ಪದ್ಧತಿ:** ಬೇಟೆಯ ನಂತರ ಸುಧಾರಿತಗೊಂಡ ಮಾನವನ ಆರ್ಥಿಕ ಬದುಕು ಸಂಗ್ರಹಣೆಗೆ ಇಳಿಯಿತು. ಸುಮಾರು ಕ್ರಿ.ಪೂ. ೭೨೦೦ ವರ್ಷಗಳ ಹಿಂದೆ ಆಹಾರವನ್ನು ಬೆಳೆಯುವ ಕ್ರಮ ಆರಂಭವಾಯಿತು. ಆದರೆ ಬೆಳೆ ಬೆಳೆಯುವುದು ಸಂಚಾರಿ ಕೃಷಿಯಾಗಿತ್ತು. ಇದನ್ನು ಮಾನವಶಾಸ್ತ್ರಜ್ಞರು 'ಸರದಿ ಬೇಸಾಯಿ' ಅಥವಾ

ಸಂಚಾರಿ ಬೇಸಾಯಿ ಎಂದಿದ್ದಾರೆ. ಮಲೆನಾಡಿನ ಕಡೆ ಇದನ್ನು 'ಸವರು ಮತ್ತು ಸುಡು' ಬೇಸಾಯ ಕ್ರಮವೆಂದು ಕರೆಯುತ್ತಾರೆ. ಇದನ್ನೇ 'ಕುಮರಿ ಬೇಸಾಯ' ಎನ್ನಲಾಗುತ್ತದೆ.

ಬೆಟ್ಟದ ಇಳಿಜಾರಿನಲ್ಲಿರುವ ಪ್ರದೇಶವೇ ಕುಮರಿ, ಮಲೆನಾಡಿನಲ್ಲಿ ಈಗಲೂ ಕಾಡಿನ ಮದ್ಯೆ ಇರುವ ಕೃಷಿ ಪ್ರದೇಶವನ್ನು ಗುಡ್ಡಗಳ ಮದ್ಯೆ ಇರುವ ಪ್ರದೇಶವನ್ನು ಕುಮರಿ, ಕುಮ್ರಿ ಎಂದೇ ಸಂಬೋಧಿಸುತ್ತಾರೆ.

ಎಲ್ಲೋ ಒಂದೆಡೆ ಮರಗಿಡ ಪೊದೆಗಳನ್ನು ಸವರಿ ಸುಟ್ಟು ಬೂದಿ ಹರಡಿ ನೆಲಕೆದರಿ ಬೀಜ ಊರುತ್ತಾರೆ. ಮಳೆಯ ನೀರು ಬಿದ್ದಾಗ ಬೆಳೆ ಬರುತ್ತದೆ. ಒಂದೆರಡು ವರ್ಷಗಳಲ್ಲಿ ಇನ್ನೊಂದು ನೆಲ ಹುಡುಕುತ್ತಾ ಹೋಗುತ್ತಿದ್ದರು. ಇದು ಅತ್ಯಂತ ಪ್ರಾಚೀನ ಬೇಸಾಯಪದ್ಧತಿ ಹಾಗೂ ಗುದ್ದಲಿ ಬಳಸುವ ಕ್ರಮ

ಕಾಡಿನ ಗಿಡ ಮರಗಳನ್ನು ಕಡಿದು ಕಟ್ಟಿಗೆಯ ಕೋಲುಗಳಿಂದ ಚಿಕ್ಕ ಚಿಕ್ಕ ಗುಣಿಗಳನ್ನು ಸಾಲಾಗಿ ತೆಗೆದು ಬಿಜ ಬಿತ್ತುತ್ತಾರೆ. ಸಂಪೂರ್ಣವಾಗಿ ಇಲ್ಲಿ ಮಾನವನ ಶ್ರಮ ಬಳಕೆಯಾಗುತ್ತದೆ. ದೀವರಲ್ಲಿ ಹತ್ತಿ, ಶುಂಠಿ ಹಾಕುವ ಇತ್ತೀಚಿನ ಪದ್ಧತಿಯಿಂದ ಹಿಡಿದು ಇಂದಿನ ತರಕಾರಿ ಹಾಕುವ ಕ್ರಮದವರೆಗೆ ಈ ಕುಮ್ರಿಬೇಸಾಯ ಪದ್ಧತಿ ಪರಂಪರೆಯಂತೆ ಉಳಿದುಕೊಂಡು ಬಂದಿದೆ.

**ಕೃಷಿ ನಂಬಿಕೆಗಳು:**

ದೀವರು ಮೂಲತಃ ಕೃಷಿಕರಾಗಿರುವುದರಿಂದ ಕೃಷಿಯ ಬದುಕಿನಲ್ಲಿ ತಾವು ಕಂಡು ಕೊಂಡ ಕೆಲವು ಸಾಂಪ್ರದಾಯಿಕ ಕೃಷಿ ನಂಬಿಕೆಗಳನ್ನು ಈ ಕೆಳಗಿನಂತೆ ಕಂಡು ಕೊಂಡಿದ್ದಾರೆ.

೧. ಮಕರ ಸಂಕ್ರಾಂತಿಯಂದು ಬೂರೆ ಬೂದಿ ಕಟ್ಟಬೇಕು.

೨. ಸೋಮವಾರ ಎತ್ತು ಕಟ್ಟಬಾರದು.

೩. ದೊಡ್ಡ ಹಬ್ಬ ಆಗುವುದರೊಳಗೆ ಗದ್ದೆ ಕೊಯ್ಯಬಾರದು.

೪. ಭರಣಿ ಮಳೆಗೆ ಧರಣೆಲ್ಲಾ ಶ್ರೇಷ್ಠ

೫. ಹೂಡುವಾಗ ಕಟ್ಟಿದ ನೇಗಿಲು ಮುರಿಯಬಾರದು

೬. ನೊಗ ಮುರಿದರೆ ಮನೆಗೆ ಬರುವಂತಿಲ್ಲ, ಗದ್ದೆಯ ಆಚೆಗೆ ಹೋಗಿ ನೆಂಟರ ಮನೆಯಲ್ಲಿ ಉಳಿದು ಬರಬೇಕು.

೭. ಆನೆ ಕಾಲು ಇದ್ದವರು ಉಳುಮೆ ಮಾಡಬಾರದು.

೮. ಗಾಳಿ ಇರುವೆ ಎದ್ದಾಗ ಬೀಜ ಮುಹೂರ್ತ ಮಾಡಿದರೆ ಶ್ರೇಷ್ಠ.

೯. ಹುಣ್ಣಿಮೆಯಲ್ಲಿ ಬೀಜ ಬಿತ್ತನೆ ಮಾಡಬಾ ದು, ಹುಳು ಬೀಳುತ್ತದೆ.

೧೦. ಭತ್ತ ಬಿತ್ತಿದ ಮೂರು ದಿನಗಳವರೆಗೆ ಜೋರು ಮಳೆ ಬೀಳಬಾರದು.

೧೧. ಮುಂಗಾರು ಮಳೆ ಸುರುವಾದ ಮೇಲೆ ನಾಟಿ ಆರಂಭಿಸಬೇಕು.

೧೨. ಭೂಮಿಗೆ ಒಂದು ಸಸಿ ನೆಟ್ಟರೆ ಸುತ್ತಲೂ ಹರಡುತ್ತದೆ.

೧೩. ಭೂಮಿ ಹುಣ್ಣಿಮೆ ದಿನ ಬೆಳತನಕ ನಿದ್ದೆ ಕೆಡಬೇಕು ಆದಿನ ಅಡುಗೆ ಮಾಡುವವರು ಸ್ವಲ್ಪ ತೂಕಡಿಸಿದರೂ ಸಹ ಆ ವರ್ಷ ಭತ್ತದಲ್ಲಿ ಜೊಳ್ಳು ಜಾಸ್ತಿ ಇರುತ್ತದೆ.

೧೪. ಮಗೆ ಮಳೆ ಕಾಲದಲ್ಲಿ ಎಲ್ಲಾ ಗದ್ದೆಗೂ ನೀರು ಕಟ್ಟಬೇಕು.

೧೫. ಚಳಿ ಹೆಚ್ಚಾದರೆ ಭತ್ತದ ಪೈರು ಮುಂದಾಗಿ ಬರುತ್ತವೆ. ಅಡಿಕೆ ಫಸಲು ಹಿಂದಾಗಿ ಬರುತ್ತದೆ.

೧೬. ಮಾಗಿ ಚಳಿ ಜಾಸ್ತಿ ಆದರೆ ಮಳೆ ಜಾಸ್ತಿ.

೧೭. ಗದ್ದೆ ಕೊಯ್ಯುವುದು ಭಾನುವಾರ ಸೋಮವಾರ ಮಾಡಬೇಕು.

೧೮. ಭತ್ತದ ರಾಶಿ ಮಾಡಿದ್ದಲ್ಲಿ, ಆಲೆ ಮನೆ ಭತ್ತ ಬೀಸುವಲ್ಲಿ ಚಪ್ಪಲಿ ಹಾಕಿಕೊಂಡು ಹೋಗುವಂತಿಲ್ಲ.

೧೯. ಭತ್ತವನ್ನು ಗದ್ದೆಯಲ್ಲಿ ಅಳೆಯುವಾಗ ಏಳು ಸಂಖ್ಯೆಯನ್ನು ಹೇಳುವುದಿಲ್ಲ ಅದಕ್ಕೆ ಬದಲಾಗಿ ಆರು ಮತ್ತೊಂದು ಎಂಬ ಸಂಖ್ಯೆ ಬಳಸುತ್ತಾರೆ.

೨೦. ಬೆಳೆದಿಂಗಳ ಬೆಳಕಿನಲ್ಲಿ ಮರಕಡಿದರೆ ಹುಳು ಹತ್ತುತ್ತದೆ.

೨೧. ಭತ್ತ ಅಳೆದಾದ ಮೇಲೆ ಚೀಲದಿಂದ ಮೂರು ಬೊಗಸೆ ಭತ್ತವನ್ನು ಮತ್ತೆ ಕಣಜಕ್ಕೆ ಹಾಕುತ್ತಾರೆ.

೨೨. ಮಾವಿನ ವಾಟೆ, ಆಮೆ ನೇಗಿಲಿಗೆ ಸಿಗಬಾರದು, ಸಿಕ್ಕರೆ ಊಳುವಂತಿಲ್ಲ.

೨೩. ಗುತ್ತಿ ಬಿದ್ದರೆ ಭತ್ತ ಕಡಿಮೆ, ನಗರಿ ಬಿದ್ದರೆ ಅಡಿಕೆ ಕಡಿಮೆ ಎಂಬ ನಂಬಿಕೆ ಇದೆ. ಚಂದ್ರನ ಬಲಭಾಗ ಗುತ್ತಿ, ಅದು ಕೆಳಭಾಗ. ವಾಲಿದರೆ ಭತ್ತ ಕಡಿಮೆ. ಎಡಭಾಗ ನಗರಿ, ಅದು ಕೆಳಕ್ಕಿಳಿದರೆ, ಅಡಿಕೆ ದರ ಕಡಿಮೆಯಾಗುತ್ತದೆ. ಈ ತೆರನಾದ ಕೃಷಿ ಸಂಬಂಧಿ ನಂಬಿಕೆಗಳು ಬುಡಕಟ್ಟು ಸಮುದಾಯದವರಾದ ದೀವರಲ್ಲಿ ಪ್ರಚಲಿತವಾಗಿವೆ.

**ವ್ಯವಸಾಯದ ಬೆಳೆಗಳು**

ದೀವರು ತಮ್ಮ ಕೃಷಿಯಲ್ಲಿ ವಿವಿಧ ರೀತಿಯ ಬೆಳೆಗಳನ್ನು ಬೆಳೆಯುತ್ತಾರೆ. ವಿಶೇಷವಾಗಿ ಭತ್ತವೇ ಪ್ರಮುಖವಾದರೂ ದನ ಕರುಗಳ ಮೇವಿನ ದೃಷ್ಟಿಯಿಂದ ಜೋಳ, ಮೆಕ್ಕೆ ಜೋಳ ಮತ್ತು ಸಣ್ಣ ಪ್ರಮಾಣದ ಮಾರಾಟದ ದೃಷ್ಟಿಯಿಂದ ಶೇಂಗಾ, ಹೆಸರು, ಉದ್ದು, ಹಲಸಂದಿ ಬೆಳೆಯುತ್ತಾರೆ. ಮತ್ತು ತರಕಾರಿ ಬೆಳೆಗಳಾದ ತೊಂಡೆಕಾಯಿ, ಹೀರೇಕಾಯಿ, ಬೆಂಡೆಕಾಯಿ, ಮರಗೆಣಸು, ಸೌತೆಕಾಯಿ, ಕುಂಬಳಕಾಯಿ ಹೀಗೆ ವಿವಿಧ ಬೆಳೆಗಳನ್ನು ತಮ್ಮ ನಿತ್ಯ ಜೀವನದ ಬದುಕಿಗಾಗಿ ಮತ್ತು ಸಣ್ಣ ಪ್ರಮಾಣದ ಮಾರಾಟಕ್ಕಾಗಿ ಬೆಳೆಯುವುದನ್ನು ಕಾಣಬಹುದಾಗಿದೆ.

ಬುಡಕಟ್ಟು ಸಮುದಾಯವಾದ ದೀವರು ಕೃಷಿಯಲ್ಲಿ ಪ್ರಮುಖವಾಗಿ ಭತ್ತವನ್ನೇ ಬೆಳೆದರೂ ಅದರ ಜೊತೆಗೆ ಇನ್ನು ಹಲವಾರು ರೀತಿಯ ಬೆಳೆಗಳನ್ನೂ ಬೆಳೆಯುತ್ತಾರೆ. ಈ ಬೆಳೆಗಳು ಆಹಾರದ ದೃಷ್ಟಿಯಿಂದ ಪ್ರಮುಖವಾಗಿದ್ದು ಮತ್ತೆ ಕೆಲವು ವ್ಯಾಪಾರಕ್ಕೆ ಅನುಕೂಲವಾಗಿವೆ.

ಬುಡಕಟ್ಟು ಸಮುದಾಯವಾದ ದೀವರು ಕೃಷಿಯಲ್ಲಿ ಪ್ರಮುಖವಾಗಿ ಭತ್ತವನ್ನೇ ಬೆಳೆದರೂ ಅದರ ಜೊತೆಗೆ ಇನ್ನು ಹಲವಾರು ರೀತಿಯ ಬೆಳೆಗಳನ್ನೂ ಬೆಳೆಯುತ್ತಾರೆ. ಈ ಬೆಳೆಗಳು ಆಹಾರದ ದೃಷ್ಟಿಯಿಂದ ಪ್ರಮುಖವಾಗಿದ್ದು ಮತ್ತೆ ಕೆಲವು ವ್ಯಾಪಾರಕ್ಕೆ ಅನುಕೂಲವಾಗಿವೆ. ಹಾಗೆಯೇ ತರಕಾರಿ ಬೆಳೆಗಳು ದೀವರು ತಮ್ಮ ಕೃಷಿಯ ಜೊತೆಗೆ ಅಲ್ಪ ಪ್ರಮಾಣದಲ್ಲಿ ದಿನ ನಿತ್ಯದ ಬಳಕೆಗೆ ಮತ್ತು ಮಾರಾಟಕ್ಕೆ ತರಕಾರಿಗಳನ್ನು ಬೆಳೆಯುತ್ತಾರೆ. ಅವು ಈ ಕೆಳಗಿನಂತಿವೆ.

**ಹೊಲದ ಬೆಳೆಗಳು:**

೧.ಭತ್ತ ೨. ಶೇಂಗಾ ೩.ಹೆಸರು ೪.ಉದ್ದು ೫. ಅಲಸಂದಿ ೬. ಜೋಳ ೭. ಮುಸುಕಿನ ಜೋಳ ೮. ರಾಗಿ ೯. ಸಜ್ಜೆ ೧೦. ನವಣೆ ೧೧. ಎಳ್ಳು ೧೨. ಕುಸುಬಿ ೧೩. ಸೂರ್ಯಕಾಂತಿ ೧೪. ಹುರುಳಿ ೧೫. ಕಡಲೆ ೧೬. ಹತ್ತಿ ೧೯. ಕಬ್ಬು.

**ತರಕಾರಿ ಬೆಳೆಗಳು:**

೧. ಅಲಸಂದಿ ೨. ಆಲಗಡ್ಡೆ ೩. ಎಲೆಕೋಸು ೪. ಟಮಾಟೋ ೫. ತೊಂಡೆ ೬. ನವಿಲುಕೋಸು ೭. ಹೀರೇಕಾಯಿ ೮. ಬದನೆಕಾಯಿ ೯. ಬೆಂಡೆ ೧೦. ಮರಗೆಣಸು ೧೧. ಸೌತೆಕಾಯಿ ೧೨. ಮೂಲಂಗಿ ೧೩. ಮುಳ್ಳುಸೌತೆಕಾಯಿ ೧೪. ಕುಂಬಳಕಾಯಿ ೧೫. ಹಾಲುಗುಂಬಳ ೧೬. ಹಾಗಲಕಾಯಿ ೧೭. ಹೂಕೋಸು.

ದೀವರು ತಮ್ಮ ಅಲ್ಪ ಪ್ರಮಾಣದ ಭೂಮಿಯಲ್ಲಿ ಮಿಶ್ರಬೇಸಾಯ ಮಾಡಿ ಕೆಲವೊಂದು ಸಾಂಬಾರು ಪದಾರ್ಥಗಳನ್ನು ಬೆಳೆಯುತ್ತಾರೆ. ಈ ಬೆಳೆಯನ್ನು ಹೆಚ್ಚಾಗಿ ಬೆಳೆಯುವುದಿಲ್ಲ. ತಮ್ಮ ದಿನ ನಿತ್ಯದ ಉಪಯೋಗಕ್ಕಾಗಿ ಮಾತ್ರ ಬೆಳೆಯುತ್ತಾರೆ. ಇತ್ತೀಚೆಗೆ ಸೊರಬ ಮತ್ತು ಸಾಗರದ ಕೆಲವು ಪ್ರದೇಶಗಳಲ್ಲಿ ಶುಂಠಿ ಮತ್ತು ನೀರುಳ್ಳಿಯನ್ನು ಅಲ್ಪ ಪ್ರಮಾಣದ ಮಾರಾಟಕ್ಕಾಗಿ ಬೆಳೆಯುವುದನ್ನು ಕಾಣಬಹುದಾಗಿದೆ. ಹಾಗೆಯೇ ದೀವರು ಹೇಳಿಕೊಳ್ಳುವಷ್ಟು ಜಮೀನು ಉಳ್ಳವರೇನೂ ಅಲ್ಲ. ಅವರಲ್ಲಿ ಯಾವುದೇ ರೀತಿಯ ತೋಟಗಳಾಗಲಿ ಕಂಡು ಬರುವುದು ತೀರಾ ವಿರಳ. ಸೊರಬ ಮತ್ತು ಸಾಗರದ ಕೆಲವೊಂದು ಪ್ರಾಂತ್ಯಗಳಲ್ಲಿ ಅಭಿವೃದ್ಧಿ ಹೊಂದಿದ ದೀವರಲ್ಲಿ ಸಣ್ಣ ಪ್ರಮಾಣದ ತೋಟಗಳನ್ನು ಹೊಂದಿದ್ದಾರೆ. ಈ ತೋಟಗಳಲ್ಲಿ ಈ ಕೆಳಗಿನ ಬೆಳೆಗಳನ್ನು ಬೆಳೆಯುತ್ತಾರೆ. ದೀವರು ಆರ್ಥಿಕವಾಗಿ ದುರ್ಬಲರಾಗಿರುವುದರಿಂದ ಅಲ್ಲಿಯ ಬ್ರಾಹ್ಮಣರ ತೋಟಗಳಲ್ಲಿ ಅಡಿಕೆ ಸಿಪ್ಪೆ ಸುಲಿಯಲು ಮತ್ತು ಇತರೆ ಕೆಲಸ ಕಾರ್ಯಗಳನ್ನು ಮಾಡಲು ಹೋಗುತ್ತಾರೆ. ಈ ಕೆಲಸ ಕಾರ್ಯಗಳಲ್ಲಿ ದೀವರ ಮಹಿಳೆಯರು ವಿಶೇಷವಾಗಿ ಕಂಡು ಬರುತ್ತಾರೆ.

**ಸಾಂಬಾರ ಪದಾರ್ಥಗಳು:**

೧. ಕೊತ್ತಂಬರಿಕಾಳು ೨. ಬೆಳ್ಳುಳ್ಳಿ ೩. ಶುಂಠಿ.

**ತೋಟದ ಬೆಳೆಗಳು**

೧. ಅಡಿಕೆ ೨. ತೆಂಗು ೩. ಬಾಳೆ ೪. ಎಲೆ ೫. ಏಲಕ್ಕಿ ೬. ಕಾಫಿ ೭. ಮೆಣಸು.

ದೀವರಲ್ಲಿ ಹಣ್ಣಿನ ಬೆಳೆಗಳನ್ನು ಹೊಲದಲ್ಲಿ ವಿಶೇಷವಾಗಿ ಬೆಳೆಯುವುದಿಲ್ಲ. ತಮ್ಮ ಹಿತ್ತಲದಲ್ಲಿ ಕೆಲವೊಂದು ಹಣ್ಣಿನ ಗಿಡಗಳನ್ನು ಹಾಕಿಕೊಂಡಿರುತ್ತಾರೆ. ಅದರಲ್ಲಿ ಸೀತಾಫಲ, ಮಾವು, ಹಲಸು, ಇತ್ಯಾದಿ ಹಣ್ಣಿನ ಬೆಳೆಗಳನ್ನು ತಮ್ಮ ಬಳಕೆಗಾಗಿ ಬೆಳೆದುಕೊಳ್ಳುತ್ತಾರೆ. ಆದರೂ ಕೂಡ ದೀವರ ಸ್ತ್ರೀಯರು ಇವುಗಳನ್ನು ಸಂತೆಯಲ್ಲಿ ಮಾರಾಟ ಮಾಡುತ್ತಾರೆ. ಹಾಗೆಯೇ ಹೂವಿನ ಗಿಡಗಳನ್ನು ವಿಶೇಷವಾಗಿ ಹೊಲದಲ್ಲೇನೂ ಬೆಳೆಯುವುದಿಲ್ಲ. ತಮ್ಮ ಮನೆಯ ಹಿತ್ತಲಿನಲ್ಲಿ ಇಲ್ಲವೆ ಮನೆಯ ಮುಂದಿನ ಆವರಣದಲ್ಲಿ ಬೆಳೆಸುತ್ತಾರೆ. ಅವುಗಳನ್ನು ಸಂತೆಯಲ್ಲಿ ಮಾರಾಟ ಮಾಡುತ್ತಾರೆ.

ಹಾಗೆಯೇ ದೀವರು ತಮ್ಮ ಹೊಲದಲ್ಲಿ ಭತ್ತವನ್ನೇ ಪ್ರಮುಖವಾಗಿ ಬೆಳೆದರೂ ಕೂಡಾ ಇತ್ತೀಚಿನ ದಿನಗಳಲ್ಲಿ ಮುಸುಕಿನ ಜೋಳ, ಜೋಳ, ಇವುಗಳನ್ನು ದನಗಳ ಮೇವಿನ ದೃಷ್ಟಿಯಿಂದ ಬೆಳೆಯುತ್ತಾರೆ.

**ಹಣ್ಣಿನ ಬೆಳೆಗಳು**

೧. ಕಲ್ಲಂಗಡಿ ೨. ನಿಂಬೆ ೩. ಪಪಾಯ ೪. ಬಾಳೆ ೫. ಮಾವು ೬. ಸಪೋಟ ೭. ಸೀತಾಫಲ ೮. ಹಲಸು

**ಹೂಗಿಡಗಳು**

೧. ಚೆಂಡಿಹೂವು ೨. ಕನಕಾಂಬರ ೩. ಮಲ್ಲಿಗೆ ೪. ಸೇವಂತಿಗೆ ೫. ಗುಲಾಬಿ ಹೂವು ೬. ಕಾಕಡೆ ಹೂವು ೭. ಡೇರೆ ಹೂವು

**ಮೇವಿನ ಬೆಳೆಗಳು**

೧.ಮುಸುಕಿನ ಜೋಳ ೨. ಭತ್ತ ೩. ಜೋಳ ೪. ರಾಗಿ

ದೀವರು ಪ್ರಮುಖವಾಗಿ ಮತ್ತು ಪ್ರಧಾನವಾಗಿ ಬೆಳಯುವ ಬೆಳೆಯಂದೆರೆ ಭತ್ತ. ಆಹಾರದ ದೃಷ್ಮಿಯಿಂದಾಗಲಿ ಮತ್ತು ಮಾರಾಟಕ್ಕಾಗಲಿ ಎರಡು ಆಯಾಮಗಳಿಗೂ ಭತ್ತನೇ ಪ್ರಧಾನ ಬೆಳೆಯಾಗಿದೆ. ದೀವರು ತಮ್ಮ ಹೊಲದಲ್ಲಿ ಭತ್ತವನ್ನೇ ಪ್ರಮುಖವಾಗಿ ಬೆಳೆದರೂ ಕೂಡಾ ಇತ್ತೀಚಿನ ದಿನಗಳಲ್ಲಿ ಮುಸುಕಿನ ಜೋಳ, ಜೋಳ, ಇವುಗಳನ್ನು ದನಗಳ ಮೇವಿನ ದೃಷ್ಟಿಯಿಂದ ಬೆಳೆಯುತ್ತಾರೆ. ಹೀಗೆ ಕೃಷಿಗೆ ಸಂಬಂಧಿಸಿದ ಎಲ್ಲಾ ಬೆಳೆಗಳನ್ನು ದೀವರು ಬೆಳೆದರೂ ಕೂಡ ಭತ್ತವೇ ಪ್ರಮುಖವಾಗಿ ಬೆಳೆಯುವ ಬೆಳೆಯಾಗಿದೆ. ಇದು ಅವರಿಗೆ ಆಹಾರದ ದೃಷ್ಟಿಯಿಂದಲೂ ಮತ್ತು ಮಾರಾಟದ ದೃಷ್ಟಿಯಿಂದಲೂ ಪ್ರಮುಖ ಸ್ಥಾನ ಪಡೆದುಕೊಂಡಿದೆ. ಉಳಿದಂತೆ ಎಲ್ಲಾ ಬೆಳೆಗಳು ದಿನ ನಿತ್ಯದ ಬಳಕೆ ಮತ್ತು ಅಲ್ಪ ಪ್ರಮಾಣದ ಮಾರಾಟದ ಉದ್ದೇಶವನ್ನು ಹೊಂದಿದೆ ಎಂಬುದನ್ನು ಕ್ಷೇತ್ರಕಾರ್ಯದ ಮಾಹಿತಿಯ ಮೂಲಕ ತಿಳಿಯಲಾಗಿದೆ. ಅದರಿಂದಾಗಿ ದೀವರು ಹೊಸ ಬಗೆಯ ಭತ್ತದ ತಳಿಗಳನ್ನು ಕೃಷಿಗೆ ಮೈಗೂಡಿಸಿಕೊಂಡಿದ್ದಾರೆ.

**ಭತ್ತದ ಪ್ರಮುಖ ತಳಿಗಳು**

೧. ಏಡಿ ಕುಣಿ ಭತ್ತ ೨. ಅಭಿಲಾಷ (ಸಣ್ಣ ತಳಿ ಮತ್ತು ದೊಡ್ಡ ತಳಿ) ೩. ಕಿಷ್ಣ ೪. ಪದ್ಮರೇಖಾ ೫. ಕರಿ ಇಂಟಾನು ೬. ಒಂದು ಕಡ್ಡಿ ಭತ್ತ ೭. ತಮಿಳ್‌ನಾಡ್ ೮. ಜೀರಗಿ ಸಣ್ಣ ೯. ಜೇನುಗೂಡು ೧೦. ಸಾವಿರದ ಒಂದು ೧೧. ಸೋನಾಮಸೂರಿ (ಸಣ್ಣದು +ದೊಡ್ಡದು) ೧೨. ಡೈನಮ್ ಸೋನಾ ೧೩. ಬಂಗಾರದ ಗುಂಡು ೧೪. ಅಕ್ಕುಳ್ಳ ೧೫. ನೆರೆಗೂಳಿ ೧೬. ನಿನ್‌ತಲೆ ೧೭. ಕರೆಪಡಿ ೧೮. ಬಿಳಿಪಡಿ ೧೯. ಪಾರಂಮಳ್ಳ ೨೦. ಮುಳ್ಳುಭತ್ತ ೨೧. ಕಿಕ್ಕ, ಕಿರ್ಪ ೨೨. ಬಿಳಿ ಇಂಟಾನು ೨೩. ಕರಿ ಇಂಟಾನು ೨೪. ಬುಡ್ಡ ೨೫. ತೊಗರಿ ಭತ್ತ ೨೬. ಸೆಳ್ಳೆ ೨೭. ಮಟ್ಟಳಗ ೨೮. ಹೊನಸಿನ ಭತ್ತ ೨೯. ನಿನಗೇನ್ ಹೇಳಬೇಕು ೩೦. ನೀರೋಟಿ ೩೧. ಕೆ.ಎಂ.ಸಿ. ೩೨. ಸಿ.ಎಚ್. ೩೩. ೬೪., ೩೪. ಐ.ಎಸ್. ೩೫. ಸಣ್ಣಾಳು ೩೬. ರತ್ನಚೂಡಿ ೩೭. ಇ.ಸಿ.ಡಿ. ೩೮. ಝುಡ್.ಸಿ.ಡಿ. ೩೯. ಸಟ್ಟಿಭತ್ತ ೪೦. ಕುಂಬಾರಗುಣಿ ೪೧. ಟೇಬಲ್‌ರಾಶಿ ೪೨. ಐಯ್ಯಾರ್ ೪೩. ಜಯ ೪೪. ಗೌರಿ (ಸಣ್ಣದು+ದೊಡ್ಡದು) ೪೫. ರಾಜಮಣಿ ೪೬. ಗಿಡ್‌ಕೋಲ್ಜ್‌ಳ ೪೭. ಸುಜಾತ ೪೮. ಯಮರ್ಜನ್ಸಿ ೪೯. ಗಿಡ್ಡಯಮರ್ಜನ್ಸಿ ೫೦. ಬಾಸಮತ್ತಿ ೫೧. ವಾರಂಗಲ್ ಸೋನಾ

**ಭತ್ತದ ಬೆಳೆಗೆ ತಗಲುವ ರೋಗಗಳು**

೧. ಟ್ರಿಪ್ಸ ೨. ಕಾಂಡ ಕೊರೆಯುವ ಹುಳು ೩. ಕಣೆನೊಣ ೪. ಎಲೆ ಸುತ್ತುವ ಹುಳು ೫. ಕಂದು ಜಿಗಿಹುಳು ೬. ಎಲೆ ಜಿಗಿಹುಳು ೭.ಮುಳ್ಳುಚಿಪ್ಪಿನ ಕೀಟ ೮. ಎಲೆಸುಳಿ ನೊಣ ೯.ತೆನೆ ಕತ್ತರಿಸುವ ಹುಳುಗಳ ೧೦. ತೆನೆತಿಗಣೆ

ಈ ಎಲ್ಲಾ ಕ್ರಿಮಿಕೀಟಗಳಿಂದ ಭತ್ತದ ಬೆಳೆಯು ಆರ್ಥಿಕ ಮುಗ್ಗಟ್ಟನ್ನು ಕಾಣುತ್ತದೆ. ಪರಿಣಾಮವಾಗಿ ದೀವರು ತಮ್ಮ ಕೃಷಿಯಲ್ಲಿ ಕೀಟಗಳ ನಾಶಕ್ಕೆ ಪ್ರಚಲಿತದಲ್ಲಿರುವ ಔಷಧಿಗಳನ್ನು ಬಳಸುತ್ತಾರೆ. ಅವುಗಳು ಎಂಡೋಸಲ್ಫಾನ್, ರೋಗರ್, ಎಕಾಲಕ್ಸ್, ನವಕ್ರಾನ್, ಡೆಮಕ್ರಾನ್, ಮೊನೋಪ್ರೋಟೋಕಾಸ್ ಹೀಗೆ ವಿವಿಧ ರೀತಿಯ ಕ್ರಿಮಿನಾಶಕಗಳನ್ನು ಬಳಸುತ್ತಾರೆ. ಜೊತೆಗೆ ಫಸಲಿನ ಫಲವತ್ತತೆಗಾಗಿ ಕೃಷಿಗೊಬ್ಬರಗಳನ್ನು ಬಳಸುತ್ತಿದ್ದಾರೆ.

**ಕೃಷಿಯಲ್ಲಿ ಬಳಸುವ ಗೊಬ್ಬರಗಳು**

೧. ಸಗಣಿ ಗೊಬ್ಬರ: ಇದು ಅತ್ಯಂತ ಉಪಯುಕ್ತವಾದ ಗೊಬ್ಬರ. ಗೊಬ್ಬರಗಳಲ್ಲಿ ಇದು ಅತೀ ಪುರಾತನವಾದುದು. ಅಷ್ಟೆ ವೈಶಿಷ್ಟ್ಯಪೂರ್ಣವಾದುದು. ಈಗಲು ಇದರ ಮಹತ್ವ ಸ್ವಲ್ಪ ಕುಂದಿಲ್ಲ. ಎಷ್ಟೋ ಕಡೆಗಳಲ್ಲಿ ರೈತರಿಗೆ ಈ ಗೊಬ್ಬರ ಹೊರತು ಬೇರೆ ಗೊಬ್ಬರ ತಿಳಿದೇ ಇಲ್ಲ. ನಮ್ಮ ದೇಶದಲ್ಲಿ ಹೆಚ್ಚಿನ ಸಗಣಿಗೊಬ್ಬರ ಪ್ರತಿವರ್ಷವೂ ನಮ್ಮ ದನಗಳಿಂದಲೇ ದೊರೆಯುತ್ತದೆ.

೨. ಕಾಂಪೋಸ್ಟ್ ಗೊಬ್ಬರ: ಹೊಲದಲ್ಲಿ ಮುಂತಾದ ಕಡೆಗಳಲ್ಲಿನ ನಿರುಪಯೋಗಿಯಾದ ಸೊಪ್ಪು, ಸೆದೆ, ಕಸ, ಕಡ್ಡಿ ಇತ್ಯಾದಿ ಪದಾರ್ಥಗಳನ್ನು ಕಲೆಹಾಕಿ ಸಿದ್ಧಗೊಳಿಸಿದ ಗೊಬ್ಬರ ಕಾಂಪೋಸ್ಟ್ ಗೊಬ್ಬರ. ಆದಾಗ್ಯೂ ಈ ಗೊಬ್ಬರಕ್ಕೆ ಒಂದು ಸುಷ್ಮಾರೂಪ ನೀಡಿದವರೆಂದರೆ ಎ. ಹಾವರ್ಡ್.

೩. ಮೂಳೆ ಗೊಬ್ಬರ: ಮೂಳೆಗೊಬ್ಬರ ಜನಪ್ರಿಯ ಗೊಬ್ಬರವೆಂದು ಹೆಸರು ಪಡೆದಿದೆ. ಎಲಬುಗಳಲ್ಲಿ ರಂಜಕಾಮ್ಲ, ಸುಣ್ಣ ಹೆಚ್ಚಾಗಿರುತ್ತವೆ. ಇವಲ್ಲದೆ ಮ್ಯಾಗ್ನಿಷಿಯಂ, ಸೋಡಿಯಂ, ಪೋಟ್ಯಾಸಿಯಂಗಳು ಇರುತ್ತದೆ. ಕ್ಲೋರೀನ್ ಇರುತ್ತದೆ. ಇವೆಲ್ಲವೂ ಸಸ್ಯಗಳು ಹೆಚ್ಚಿನ ಮಟ್ಟದಲ್ಲಿ ಬೆಳವಣಿಗೆ ಹೊಂದಲು ನೆರವಾಗುತ್ತದೆ. ಇದರ ತಯಾರಿಕೆಯಲ್ಲಿ ಎಲಬುಗಳನ್ನು ಉಗಿಯಲ್ಲಿ ಹಾಕಿ ಕಾಯಿಸಿ ಪುಡಿ ಮಾಡುತ್ತಾರೆ. ಇದು ಬೆಳೆಗಳಿಗೆ ಉತ್ತಮ ಆಹಾರವನ್ನು ಒದಗಿಸುತ್ತದೆ.

೪. ಹಸಿರು ಗೊಬ್ಬರ ಹಸಿರು ಸೊಪ್ಪು ಬೆಳೆದು ಹೂ ಬಿಡುವ ಅವಸ್ಥೆಯಲ್ಲಿರುವ ಇಡಿಯ ಬೆಳೆಗಳು ಮುಂತಾದ ಸಸ್ಯ ಪದಾರ್ಥಗಳು ಸೇರಿ ಆಗುವ ಗೊಬ್ಬರವೇ ಹಸಿರು ಗೊಬ್ಬರ

**ರಾಸಾಯನಿಕ ಗೊಬ್ಬರಗಳು**

ಯೂರಿಯಾ ೧೭-೧೭, ವಿಜಯ ೨೦-೨೦ ರಂಜಕ, ಡಿ.ಎ.ಪಿ., ಪೊಟ್ಯಾಶಿಯಂ

**ಕೃಷಿಗೆ ಸಂಬಂಧಿಸಿದ ಹಬ್ಬಗಳು**

ಒಂದು ಜನಾಂಗದ ಅಧ್ಯಯನಕ್ಕೆ ತೊಡಗುವುದೆಂದರೆ ಆಯಾ ಜನಾಂಗಗಳ ಸಾಂಸ್ಕೃತಿಕ ನಂಬಿಕೆಗಳ ಅವಲೋಕನವೆಂದೇ ಗ್ರಹಿಸಬೇಕಾಗುತ್ತದೆ. ಏಕೆಂದರೆ ಆ ಜನಾಂಗದ ನಂಬಿಕೆ, ಶ್ರದ್ಧೆ, ಕ್ರಿಯಾಚರಣೆಗಳ ಮುಖಾಂತರ ಆ ಜನಾಂಗದ ಬೆಳವಣಿಗೆಯನ್ನು ಗುರುತಿಸಬಹುದು. ಈ ರೀತಿಯ ನಂಬಿಕೆ ಆಚರಣೆಗಳೆಲ್ಲವೂ ಆ ಜನರ ಉತ್ಪಾದನಾ ವಿಧಿ- ವಿಧಾನಗಳೊಂದಿಗೆ ಮಾಡಿಕೊಂಡ ಮಾರ್ಪಾಟು ಮತ್ತು ಅನುಸಂಧಾನಗಳನ್ನು ಅವಲಂಬಿಸಿಕೊಂಡಿರುತ್ತದೆ.

''ಆದಿಮ ಜಗತ್ತಿನ ಮಾನವ, ತನ್ನ ಸುತ್ತ ಮುತ್ತಲಿನ ಪ್ರಕೃತಿಯ ರಮ್ಯ ಹಾಗೂ ಗಾಢ ಬದಲಾವಣೆಗಳಿಗೆ ಒಂದು ಮೂರ್ತಿ ರೂಪ ಕೊಟ್ಟು ಸ್ತುತಿ, ಅರ್ಚನೆ, ಪೂಜೆ, ಹರಕೆಗಳ ಮೂಲಕ ಅದನ್ನು ಒಲಿಸಿಕೊಂಡು ಸಹಬಾಳ್ವೆ ನಡೆಸಲು ಪ್ರಯತ್ನಿಸಿದ, ಆದರೆ ಈ ಪ್ರಕೃತಿಯ ವೈಚಿತ್ರ್ಯಗಳಲ್ಲಿ ಇಂಥ ಜನರಲ್ಲಿ ಭಯ, ವಿಸ್ಮಯತೆ ಮಾತ್ರ

ಉಂಟು ಮಾಡದೆ; ಅನುಭವಗಳ ಹಿಂದೆ, ಈ ಅನಿಯಂತ್ರಿಕ ಕ್ರಿಯಾಶಕ್ತಿ ಎಂದರೆ ಗುಡುಗು, ಸಿಡಿಲು, ಸೂರ್ಯ, ಚಂದ್ರ, ಮಳೆ, ಬಿಸಿಲು, ಪ್ರಾಣಿ, ಪಕ್ಷಿ ಮುಂತಾದವು. ಯಾವಾಗ ಇವೆಲ್ಲ ವೈಶಿಷ್ಟ್ಯಪೂರ್ಣವಾಗಿ ರೂಪಗೊಂಡು ಮೂರ್ತಿರೂಪ ಪಡೆದುಕೊಂಡು ಬಿಡುತ್ತವೆಯೋ ಅಂತಹ ಶಕ್ತಿಗಳ ಹಿಂದೆ ಹಬ್ಬ-ಆಚರಣೆ ನೆಲೆಯೂರುತ್ತದೆ. ಅದಕ್ಕೆ ಸಂಬಂಧಿಸಿದಂತೆ ಅಡುಗೆ-ಉಡುಗೆ-ತೊಡುಗೆ-ಸಂಪ್ರದಾಯ ನಂಬಿಕೆ ನೆಲೆಯೂರತೊಡಗುತ್ತವೆ.''[೧೭] ಪ್ರಕೃತಿಯ ವೈಶಿಷ್ಟ್ಯಪೂರ್ಣ ಸಂರಚನೆಯೊಂದಿಗೆ ಹೊಂದಾಗಿಸಿಕೊಂಡು ಬೆಳೆಯುವ ಮಾನವ ಜಗತ್ತಿನೊಳಗೆ ಅದಮ್ಯ ಸೃಜನಶೀಲ ಶಕ್ತಿಯಂದು ಮೈದೆಳೆದಿರುತ್ತದೆ. ಈ ಸೃಜನಶೀಲ ಮನೋಸ್ಥಿತಿ, ಅನಿಯಂತ್ರಿಕ ಕ್ರಿಯಾಶಕ್ತಿಯೊಂದಿಗೆ ಅನುಸಂದಾನ ಹೊಂದುತ್ತಾ ಅಪೂರ್ವವಾದ ಆಚರಣೆ ವಿಧಿ-ವಿಧಾನಗಳನ್ನು ರೂಪಿಸಿಕೊಳ್ಳುತ್ತದೆ. ಹಾಗಾಗಿಯೇ ಆಭರಣಗಳಲ್ಲಿ, ಹಸೆಗೋಡೆಯಲ್ಲಿ, ಹಚ್ಚೆಯಲ್ಲಿ, ಚಿತ್ರಗಳಲ್ಲಿ, ಇಂತಹ ಸೃಜನಶೀಲತೆ ನಿರ್ಮಿತಗೊಂಡಿದೆ. ಆಗ ಪ್ರಕೃತಿ ಹಾಗೂ ಪ್ರಕೃತಿ ನಿರ್ಮಿತ ವಸ್ತುಗಳ ಪೂಜಿತಗೊಂಡವು. ಜೊತೆಗೆ ಕುಲಸಂಕೇತ ಕುಲಗುಂಪಾಗಿ ಬಳಿಯಾಗಿ ರೂಪುಗೊಂಡವು. ಇಂತಹ ವೈಶಿಷ್ಟ್ಯಗಳು ಮಲೆನಾಡಿನ ದೀವರ ಬದುಕಿನಲ್ಲಿ ಘಟಿಸಿವೆ ಎಂಬುದನ್ನು ಮುಂದಿನ ಚರ್ಚೆಯಲ್ಲಿ ವಿಶ್ಲೇಷಿಸಲಾಗಿದೆ.

**ಗೌರಿಹಬ್ಬ: ಪ್ರಕೃತಿಯೊಡನೆ ಸಂಬಂಧ:**

ಮಲೆನಾಡಿನ ಗೌರಿಹಬ್ಬಕ್ಕೆ ಇರುವಷ್ಟು ಮಹತ್ವ ಬೇರೊಂದಕ್ಕಿಲ್ಲ. ಈ ಹಬ್ಬ ವೈಶಿಷ್ಟ್ಯಪೂರ್ಣವಾದುದು. ಇದು ಗಣಪತಿ ಹಬ್ಬದ ಜೊತೆಗೆ ಬಂದರೂ ಗೌರಿಹಬ್ಬಕ್ಕೆ ತನ್ನದೇ ಆದ ವೈಶಿಷ್ಟ್ಯಪೂರ್ಣ ನೆಲೆಯಿದೆ. ಕಾರಣವೆಂದರೆ, ಆ ದೇವರನ್ನು ಆಯಾ ಜನಸಮುದಾಯವೇ ಪೂಜಿಸುವುದರಿಂದ ಪೂರ್ಣವಾಗಿ ಸಮುದಾಯವೊಂದರ ಬದುಕಿನ ಆಚರಣಾ ವಿಧಾನಗಳೇ ಮೈವೆತ್ತಂತೆ ಗೌರಿಹಬ್ಬ ಕಾಣುತ್ತದೆ. ಕಾಡು ಹಾಗೂ ಕಾಡಿನ ಪರಿಕರಗಳನ್ನೇ ಉಪಯೋಗಿಸಿಕೊಂಡು ಹಬ್ಬ ಆಚರಿಸುವುದರಿಂದ ಒಂದು ಸಮುದಾಯ ನಡೆದು ಬಂದ ದಾರಿಯ ಸ್ವರೂಪವು ಗೋಚರಿಸುತ್ತದೆ.ಈ ಹಬ್ಬ ದೀವರಿಗೂ ಮತ್ತು ಪ್ರಕೃತಿಗೂ ಇರುವ ಸಂಬಂಧದ ದ್ಯೋತಕವಾಗಿದೆ.

ಬಹುತೇಕ ಎಲ್ಲಾ ಜನಾಂಗಗಳು ಗೌರಿಯನ್ನು ಆರಾಧಿಸಿದರೂ, ಇವರ ಕ್ರಮದಲ್ಲಿಯೇ ವೈವಿಧ್ಯತೆ ಇರುವುದನ್ನು ಗಮನಿಸಬೇಕಾಗುತ್ತದೆ. ಅದಕ್ಕೆ ಕಾರಣ ಉತ್ಪಾದನಾ ವಿಧಿ-ವಿಧಾನಗಳ ಬದಲಾವಣೆ ಎನ್ನಬಹುದು. ಗೌರಿಯಲ್ಲಿ ಎರಡು ವಿಧ. ಅರಮನೆಗೌರಿ ಮತ್ತು ಹಳ್ಳಿಗೌರಿ. ಅರಮನೆಗೌರಿಯನ್ನು ಮೈಸೂರಿನ ಅರಮನೆಯವರು ತಂದ ದಿನದಂದು ನೋಡಿರುತ್ತಾರೆ, ಹಳ್ಳಿಗೌರಿಯನ್ನು ಅದರ ಹಿಂದಿನ ದಿನವೇ ತರುತ್ತಾರೆ. ಗೌರಿಯನ್ನು ಮಾಡುವುದು ಕೂಡಾ ಬೇರೆ-ಬೇರೆ ತರಹವೇ ಇರುತ್ತದೆ.

ಬ್ರಾಹ್ಮಣರು ಗೌರಿಯ ಮುಖವಾಡ ಮಾಡಿಸುತ್ತಾರೆ. ದೀವರಲ್ಲಿ ತಂಬಿಗೆಗೌರಿ, ಗಿಡ್ಡಗೌರಿ, ಗೂಡಿನಗೌರಿ, ಕೊಳಗದ ಗೌರಿ ಮುಂತಾದ ರೂಪಗಳಿವೆ. ಅಕ್ಕಿ ತುಂಬಿದ ಗೂಡಿನಲ್ಲಿ ಅಕ್ಕಿ ತುಂಬಿ ಎಲೆ-ಅಡಿಕೆ ಇಟ್ಟು ಸೀರೆ ಉಡಿಸಿ ಬಾಳೆ ಕಂದಿನ ಕೈ ಮಾಡುತ್ತಾರೆ. ಪೋಲಕ ಹಾಕುತ್ತಾರೆ. ಕೊಳಗಕ್ಕೆ ಕೂಡ ಇದೇ ರೀತಿಯ ಕ್ರಮವಿದೆ.

ಗೌರಿಹಬ್ಬದ ಸಡಗರ ಒಂದು ವಾರದ ಮೊದಲೇ ಆರಂಭವಾಗುತ್ತದೆ. ''ಗೌರಿ ಪರ್ವತ ರಾಜನ ಮಗಳು ಅದರಂತೆ ಗುಡ್ಡ ಬೆಟ್ಟದ ಕಾಡಿನಲ್ಲಿ ವಾಸ ಮಾಡುವ ದೀವರು ಸಹ ಪರ್ವತ ರಾಜನ ಮಕ್ಕಳು ತಾವೆಂದು, ಗೌರಿಮನೆ ಮಗಳೆಂದು ಗ್ರಹಿಸುತ್ತಾರೆ. ಆ ಕಾರಣದಿಂದಲೇ ನಾಲ್ಕು ದಿನ ಮೊದಲೇ ಸಹೋದರಿಯನ್ನು ಆದರದಿಂದ ತವರಿಗೆ ಕರೆತರುವ ಕ್ರಿಯೆ ಆರಂಭವಾಗುತ್ತದೆ. ಕಪ್ಪುಗಿಡ್ಡ ಗೌರಿ ತನ್ನ ಬಣ್ಣವನ್ನು ಕಳೆದುಕೊಂಡು ಗೌರಿವರ್ಣ

ಪಡೆದ ಮರುಹುಟ್ಟು, ಗೌರಿಹಬ್ಬವೆಂದೂ ಕರೆಯುತ್ತಾರೆಂಬುದಾದರೆ, ದೀವರಲ್ಲಿ ಗೌರಿಹಬ್ಬ, ಬೇಟೆಯಿಂದ ಕೃಷಿಗೆ ಬದಲಾಗುತ್ತಿರುವ ಸಮುದಾಯವೊಂದರ ಆಚರಣೆಯ ರೂಪವಾಗಿ ನಿಲ್ಲುತ್ತದೆ.''[೫] ಹೀಗೆ ಗೌರಿಹಬ್ಬ ಕೃಷಿಕ ಸಮುದಾಯವಾದ ದೀವರ ಪ್ರಕೃತಿ ಸಂಬಂಧಿತ ಸಾಂಕೇತಿಕ ಆಚರಣೆಯಾಗಿದೆ.

**ಗೌರಿತರುವುದು:** ಹಬ್ಬದ ಹಿಂದಿನ ದಿನವೇ ಮನೆಯಲ್ಲಾ ಗುಡಿಸಿ, ಸಾರಿಸಿ, ಜೇಡಿ ಕೆಮ್ಮಣ್ಣುಗಳಿಂದ ಸಿಂಗರಿಸುತ್ತಾರೆ. ಗೌರಿ ಕೂರಿಸುವ ಜಾಗವನ್ನು ಕರಿಹಾಕಿ ಸಾರಿಸಿ ಅದಕ್ಕೆ ಜೇಡಿ ಕೆಮ್ಮಣ್ಣು ಹಚ್ಚಿ ಮಂಟಪ ಮಾಡಿರುತ್ತಾರೆ. ಗೌರಿ ತರುವ ಕಳಶದ ಬಟ್ಟಲು, ಕಂಚಿನ ಹಿತ್ತಾಳೆ ಅಥವಾ ತಾಮ್ರದ ತಂಬಿಗೆ ಸಜ್ಜುಗೊಳಿಸಿ ಅದನ್ನು ಹರಿವಾಣದ ಸಹಿತ ಮಧ್ಯ ಇಟ್ಟು ಚಿತ್ರದ ಬುಟ್ಟಿಯ ಮುಚ್ಚಳದ ಮೇಲೆ ಇಟ್ಟುಕೊಂಡು, ಗೌರಿ ತರಲು ಗುಂಪಾಗಿ ಊರ ಹೊರಗಿನ ಕೆರೆಗಳಿಗೆ ಹೋಗುತ್ತಾರೆ. ನಂತರ ಕೆರೆಯ ಬಳಿ ಎಲ್ಲರು ಸಾಲಾಗಿ ನಿಂತು ನೀರು ತುಂಬಿಕೊಂಡು ನಾಲ್ಕು ಸಾರಿ ನೀರು ತುಂಬಿ ಕೆರೆಗೆ ಚೆಲ್ಲಿ ಐದನೇ ಸಾರಿ ತುಂಬಿ ಅಕ್ಕಿಯ ಮೇಲಿಡುತ್ತಾರೆ. ನಂತರ ತಂಬಿಗೆಯಲ್ಲಿ ಚಂಡು ಕಟ್ಟಿ ಇಡುತ್ತಾರೆ. ಚಂಡು ಕಟ್ಟಿ ಇಡುವುದೆಂದರೆ ೫ ಜಾತಿಯ ಹೂ (ಡೇರೆ, ಇಂದ್ರನ ಹೂ, ಗುಲಾಬಿ, ಸೇವಂತಿಗೆ, ದಾಸವಾಳ)ಗಳನ್ನು ತೊಟ್ಟಿನ ಸಮೇತ ಕಟ್ಟಿ ಅದಕ್ಕೆ ೫ ವೀಳ್ಯದೆಲೆ ಸೇರಿಸಿ ತಂಬಿಗೆಯ ಬಾಯಿಗೆ ಸರಿಯಾಗುವಂತೆ ಭದ್ರವಾಗಿಡುತ್ತಾರೆ.ನಂತರ ತಂಬಿಗೆಗೆ ಅರಿಶಿಣ, ಕುಂಕುಮ ಮತ್ತು ಕರ್ಪೂರ ಹಚ್ಚಿ ಬೆಳಗುತ್ತಾರೆ. ಈ ರೀತಿಯಾಗಿ ದೀವರು ಗೌರಿಹಬ್ಬವನ್ನು ಕೃಷಿಸಂಸ್ಕೃತಿಯ ಪ್ರತೀಕವಾಗಿ ಪ್ರಕೃತಿಯ ಆರಾಧಕರಾಗಿ ಆಚರಣೆ ಮಾಡುತ್ತಾರೆ.

ಆದರೆ ಗೌರಿಹಬ್ಬ ಪೂರ್ಣವಾಗಿ ಗುಡ್ಡ- ಕಾಡುಗಳ ನಡುವೆ ಅರಳಿದ ಸಮುದಾಯದ ಆಚರಣೆಯಾಗಿ ನಿಂತಿದೆ. ಹೂವು, ಕಾಯಿ, ಪಳಯುಳಿಕೆಗಳೇ ಅದಕ್ಕೆ ಸಾಕ್ಷಿ. ಗೌರಿ ಮನೆಮಗಳೆಂದು ಅಂದುಕೊಳ್ಳುವುದಕ್ಕೆ ಆ ದಿನವೇ ಸಂಜೆ ಅಳಿಯಂದಿರು ಬರುವುದು ದೀವರ ಹಬ್ಬದ ಸೃಜನಶೀಲತೆಯ ಪ್ರತೀಕವೆಂಬಂತೆ ಗ್ರಹಿಸಬೇಕು. ಇದೊಂದು ಪೂರ್ಣವಾಗಿ ಮಹಿಳೆಯರ ಹಬ್ಬ ಸ್ವತಃ ತಾವೇ ಗೌರಿಯನ್ನು ಪೂಜಿಸುತ್ತಾರೆ. ಇಲ್ಲಿ ತರುವುದಕ್ಕಾಗಲಿ, ಬಿಡುವುದಕ್ಕಾಗಲಿ ಮೂಹೂರ್ತ ನಿರ್ಣಯಿಸಲು, ಪೂಜೆ ಮಾಡಲು ಪುರೋಹಿತರ ಅವಶ್ಯಕತೆ ಇಲ್ಲ ಪ್ರಾಂಜಲ ಮನಸ್ಸಿನ ಆರಾಧನೆಯೇ ಇಲ್ಲಿ ಮುಖ್ಯ. ದೀವರ ಹೆಣ್ಣುಮಕ್ಕಳಿಗೆ ಬರೀ ಹಬ್ಬ ಮಾತ್ರವಲ್ಲ (ಜೊತೆಗೆ) ಬದಲಿಗೆ ಅವರ ಸಂಸ್ಕೃತಿಯ ಅಭಿವ್ಯಕ್ತಿಯ ಮಾಧ್ಯಮವೂ ಕೂಡ. ಗಂಡು ಮಕ್ಕಳು ಮಂಟಪ ತೋರಣ ಮಾಡುವಲ್ಲಿ ತಮ್ಮ ಕ್ರಿಯಾಶೀಲತೆಯನ್ನು ವ್ಯಕ್ತಿಸಿದರೆ, ಹೆಣ್ಣುಮಕ್ಕಳು ನಾನಾ ಬಗೆಯ ಅಡುಗೆಗಳನ್ನು ತಿಂಡಿಯ ಪರಿಕರಗಳನ್ನು ಸೃಷ್ಟಿಸುವುದರಲ್ಲಿ ತಮ್ಮ ಸೃಜನಶೀಲತೆಯನ್ನು ಬಿಂಬಿಸುತ್ತಾರೆ. ಜೊತೆಗೆ ತವರಿಂದ ಹೆಣ್ಣುಮಕ್ಕಳ ಬರುವುದರಿಂದ ಒಂದು ಬಗೆಯ ಮಧುರ ಬಾಂಧವ್ಯ ಪರಸ್ಪರ ಪ್ರೀತಿಯ ರಸಾವೇಷವೇ ಉಂಟಾಗಿರುತ್ತದೆ. ಹಾಗಾಗಿಯೇ ಗೌರಿ ದೀವರ ಒಂದು ವಿಶಿಷ್ಟ ಹಬ್ಬವಾಗಿದೆ.

### ಭೂಮಿಹುಣ್ಣಿಮೆ: ಮಾತೃತತ್ವದ ಸಂಕೇತ

ಮಾತೃಮೂಲಿಯ ಸಂಸ್ಕೃತಿಯಿಂದ ಬಂದ ಸಮುದಾಯವೊಂದು ತಾನು ಬದುಕಿ ಬಾಳುವ ಭೂಮಿಯ ಜೊತೆಗೆ ಒಂದು ಬಗೆಯ ಆತ್ಮೀಯ ಅನುಸಂಧಾನವನ್ನು ಮತ್ತು ಋಣಭಾರವನ್ನು ಹೊಂದಿರುತ್ತದೆ. ಅವರಿಗೆ ಭೂಮಿ ಉತ್ಪಾದನೆ ಪರಿಕರ ಮಾತ್ರವೇ ಅಲ್ಲ. ಮೊಲೆ ಹಾಲು ಉಣ್ಣಿಸುವ ತಾಯ್ತನದ ಮಧುರ ಹಂಬಲ. ಆದ್ದರಿಂದಲೇ ಭೂಮಿಯ ಜೊತೆಗೆ ತೀವ್ರತರವಾದ ಗಾಢ ವ್ಯಾಮೋಹಿಕ ಸಂಬಂಧವನ್ನು ಸೃಜಿಸಿಕೊಂಡಿರುತ್ತದೆ.

ತಮಗೆ ಬೆಳೆ ಬೆಳೆದುಕೊಡುವ ಹುಟ್ಟು ಸಾವನ್ನು ಗರ್ಭಿಸಿಕೊಂಡು ಫಲೋತ್ಪತ್ತಿಗೆ ಸಹಕರಿಸುವ ಮಾನವ ಕುಲವನ್ನೇ ಪಾಲಿಸುವ, ಪೋಷಿಸುವ ಭೂಮಿ ತಾಯ್ತನದ ಅನುಭವ ನೀಡುತ್ತದೆ. ಹೀಗಾಗಿಯೇ ಭೂಮಿಯೊಂದಿಗೆ ಕರುಳು ಬಳ್ಳಿಯ ಸಂಬಂಧ ಇಟ್ಟುಕೊಂಡ ದೀವರ ಸಮುದಾಯ ಸ್ತ್ರೀತ್ವದ ಅನುಭವಗಳನ್ನು ಭೂಮಿಗೆ ಹೋಲಿಸಿ ಆಚರಣೆಗಳನ್ನು ಸೃಷ್ಟಿಸಿಕೊಳ್ಳುತ್ತದೆ. ಕಾರಣವೇನೆಂದರೆ ಸೃಜನಶಕ್ತಿ ಹೊಂದಿರುವ ಹೆಣ್ಣಿನ ಫಲೋತ್ಪತ್ತಿ ಜಗತ್ತಿಗೆ ತೀವ್ರ ಕುತೂಹಲವನ್ನು ಹಾಗೂ ಅದ್ಭುತ ಶಕ್ತಿಯ ಸಂದೇಶವನ್ನು ನೀಡಿದೆ.

ಲಜ್ಜಾಗೌರಿಯಂತ ಪೂಜೆಗಳು ಆರಂಭಗೊಂಡು ಸ್ತ್ರೀಯ ಸ್ತನ, ಯೋನಿ, ನಿತಂಬಗಳು ಪೂಜಿತ ಸ್ಥಿತಿಗೆ ತಲುಪಿದವು. ಇದನ್ನು ವ್ಯವಸ್ಥಿತವಾಗಿ ಅಪಹರಿಸಿದ ವೈದಿಕರು ತಮ್ಮ ಯಾಗ ಕುಂಡವನ್ನು ಯೋನಿಯ ರೂಪದಲ್ಲಿ ರಚಿಸುವಂತಾಯಿತು. ಈ ಕಾರಣದಿಂದಲೇ ಭೂಮಿಯನ್ನು ಪೂಜಿಸುವ ಕಾರ್ಯವೂ ಕೂಡ ಆರಂಭವಾಯಿತು. ಪ್ರಾಯಶಃ ಇಂತಹ ಆಚರಣೆಯಲ್ಲಿ ಭೂಮಿ ಹುಣ್ಣಿಮೆಯು ಒಂದು. ಗರ್ಭವತಿಯಾದ ಭೂಮಿಗೆ 'ಬಯಕೆ' ತೀರಿಸುವ ಹಬ್ಬವಾಗಿ ಭೂಮಿ ಹುಣ್ಣಿಮೆ ಆಚರಿಸುತ್ತಾರೆ. ಮಾರ್ನವಮಿ ಆದ ಮಾರನೇ ದಿನವೇ ಭೂಮಣ್ಣಿ ಹಬ್ಬದ ಸಡಗರ ಆರಂಭವಾಗುತ್ತದೆ. ಒಂದು 'ದೊಡ್ಡ ಬುಟ್ಟಿ' ಇನ್ನೊಂದು 'ಸಣ್ಣ ಬುಟ್ಟಿ' ಈ ರೀತಿ ಎರಡು ಬುಟ್ಟಿಯೊಳಗೆ ನಾಲ್ಕು ಐದು ಸಾರಿ ಕೆಮ್ಮಣ್ಣು ಬಳಿದು ಸಿದ್ಧಪಡಿಸಿಟ್ಟುಕೊಳ್ಳುತ್ತಾರೆ. ಅಕ್ಕಿಯನ್ನು ತೆಗೆದುಕೊಂಡು ಅದರಲ್ಲಿ ಅಚ್ಚಬಳಿಯ ಅಕ್ಕಿಯನ್ನು ಆಯ್ದು ಒಂದು ರಾತ್ರಿ, ಒಂದು ಹಗಲು ಚೆನ್ನಾಗಿ ನೆನಸಿ ನುಣ್ಣಗೆ ಅರೆದು, ಹದವಾಗಿ ಕದಡಿ, ಪುಂಡಿನಾರಿನ ಚುಂಗಿನಿಂದ ಚಿತ್ತಾರ ಬರೆಯುತ್ತಾರೆ. ನೀಲಿಕೊಚ್ಚುವುದು, ಭತ್ತದ ತೆನೆ, ಗೊಣಬೆ ಹಾಕುವುದು, ಗೊಂಬೆಸಾಲು, ಬುಟ್ಟಿ ಹೊತ್ತ ದಂಪತಿಗಳ ಚಿತ್ರ, ಸಸಿ ನೆಡುವ ದೃಶ್ಯ, ಧಾನ್ಯರಾಶಿ ಮಾಡುವ ಚಿತ್ರ, ಎತ್ತುಗಳು ಮುಂತಾದ ಭಿನ್ನ ಬಗೆಯ ಚಿತ್ರಗಳನ್ನು ಬಿಡಿಸುತ್ತಾರೆ. ಭೂಮಿ ಹುಣ್ಣಿಮೆಯ ಹಿಂದಿನ ದಿನ 'ಬೆಳತನಕ ಅಡುಗೆ' (ಅಂದರೆ ರಾತ್ರಿಯಲ್ಲಾ ನಿದ್ದೆ ಮಾಡುವಂತಿಲ್ಲ ನಿದ್ದೆ ಮಾಡಿದ್ದಲ್ಲಿ ಬರುವ ಫಸಲು ಜೊಳ್ಳಾಗಿರುತ್ತದೆ. ಎಂಬ ನಂಬಿಕೆಯಿದೆ.) ಮಾಡಿ ರಾತ್ರಿ ಚರಗ ತಯಾರಿಸುತ್ತಾರೆ. ಚರಗ ಎಂದರೆ ಭೂಮಿ ತಾಯಿಯ ಬಯಕೆಯನ್ನು ತೀರಿಸುವುದಕ್ಕಾಗಿ ಅವಳು ಬೆಳೆದ ಎಲ್ಲಾ ಬಗೆಯ ಸೊಪ್ಪು ಕಾಯಿಗಳನ್ನು ಪಲ್ಯ ಮಾಡಿ ಚರಗ ಚಲ್ಲುತ್ತಾರೆ. ಸಾಗರ ತಾಲೂಕಿನ ಯಲಕುಂದಿಯಲ್ಲಿ "ಆರಿದ್ರ ಮಳೆ ಹಬ್ಬದ ದಿನ ಇದೇ ರೀತಿ ಅಕ್ಕಿ ವೀಳ್ಯದೆಲೆ, ಬಾಳೆಹಣ್ಣು, ಮಾವಿನ ಎಲೆಗಳನ್ನು ಚೂರು ಚೂರು ಮಾಡಿ ಆಕಾಶಕ್ಕೆ ತೂರುವ ಆಚರಣೆ ಇದ್ದು ಫಲವಂತಿಕೆಯನ್ನು ಪ್ರಚೋಧಿಸುವ ಮತ್ತು ಆಶಿಸುವ ಆಚರಣೆಯಾಗಿದೆ." ಚರಗದಲ್ಲಿ ಚಿನ್ನಿಕಾಯಿ, ಸೌತೆಕಾಯಿ, ಬೆಂಡೆಕಾಯಿ, ಪೇರಲಕಾಯಿ, ಹೀರೇಕಾಯಿ, ತೊಂಡೆಕಾಯಿ, ಅಮಟೆಕಾಯಿ, ಕುಂಬಳಕಾಯಿ, ಟಮಾಟೋಕಾಯಿ, ಪುಂಡಿಸೊಪ್ಪು, ಹರಿತಿಸೊಪ್ಪು, ಹುರುಳಿಸೊಪ್ಪು, ಗೆಣಸಿನಸೊಪ್ಪು ಸೇರಿದಂತೆ ಪ್ರಕೃತಿಯಲ್ಲಿ ಸಿಗುವ ಎಲ್ಲಾ ತರಹದ ಸೊಪ್ಪನ್ನು ಹಾಕಿ ಅಕ್ಕಿಯೊಡನೆ ಸೇರಿಸಿ ದೊಡ್ಡ ಪಾತ್ರೆಯಲ್ಲಿ ಬೇಯಿಸುತ್ತಾರೆ. ಅದನ್ನು ಬೆಳಗಿನ ಜಾವವೇ ಮನೆಯ ಗಂಡಸರು ಸಣ್ಣ ಭೂಮಣ್ಣಿ ಬುಟ್ಟಿಯಲ್ಲಿ ತುಂಬಿಕೊಂಡು ಗದ್ದೆಯ ಮೂಲೆ ಮೂಲೆಗೂ ಹೋಗಿ "ಹಚ್ಚಂಬಲಿ ಹರವಿಸೊಪ್ಪು ಹಿತ್ತಲಾಗಿರೋ ಹೀರೇಕಾಯಿ ಹೊಯ್- ಹೊಯ್" ಎಂದು ಕೂಗುತ್ತಾ ಯಾವ ಭಾಗಕ್ಕೂ ಬಿಡದೆ ಚಲ್ಲುತ್ತಾರೆ. ಚರಗವನ್ನು ಚಲ್ಲಲು ಹೋದವರು ವಾಪಾಸು ಬರುವುದರೊಳಗಾಗಿ ಅಡುಗೆ ಸಿದ್ಧವಾಗಿರುತ್ತದೆ. ಎಲ್ಲವನ್ನು ದೊಡ್ಡಬುಟ್ಟಿಯಲ್ಲಿ ತುಂಬಿಕೊಂಡು ಜೊತೆಗೆ ಸೂಲು, ಬಳೆ, ಆಭರಣಗಳನ್ನು ಹಾಕಿಕೊಂಡು ತಲೆಯ ಮೇಲೆ ಸಿಂಬಿಯನ್ನಿಟ್ಟು ಬುಟ್ಟಿಯನ್ನು ಹೊತ್ತುಕೊಳ್ಳುತ್ತಾರೆ. ಊರಿನ ಜನರೆಲ್ಲಾ ಒಂದೇ ಸಮಯದಲ್ಲಿ ಹೊರಡುತ್ತಾರೆ. ಹುಡುಗರ ಕೈಯಲ್ಲಿ ಸಗಣಿಕುಳ್ಳಿಗೆ ಬೆಂಕಿ ಹಚ್ಚಿ

ಕೊಟ್ಟಿರುತ್ತಾರೆ. ಈ ಮೊದಲೇ ಗದ್ದೆ ಹಾಳಿಯ ಬದುವನ್ನು ಚನ್ನಾಗಿ ಸವರಿಕೊಂಡಿರುತ್ತಾರೆ. ಉದ್ದನೇಯ ಸಾಲಿನಲ್ಲಿ ಅಕ್ಕಪಕ್ಕ ಎರಡು ಸಸಿಗಳನ್ನು ತುದಿಕಟ್ಟಿದಾಗ ಕಮಾನಿನ ಆಕಾರ ಬರುತ್ತದೆ. ಅದಕ್ಕೆ ಬಂಗಾರದ ಸರ, ಬಳೆ, ಕಟ್ಟು, ಹಂಗನೂಲು, ಹೂವು, ಗಂಧ, ಅರಿಶಿಣ, ಕುಂಕುಮಗಳಿಂದ ಸಿಂಗರಿಸುತ್ತಾರೆ. ಹೆಂಗಸರು ಮೂರು ಎಡೆ ಹಾಕುತ್ತಾರೆ. ಸೌತೆಕಾಯಿ, ಪಚಡಿ, ಹೀರೇಕಾಯಿ ಪಲ್ಯ, ಚೌಳಿಕಾಯಿ ಪಲ್ಯ, ಮೊಸರು, ಬುತ್ತಿ, ಕಲಸನ್ನ, ಹೋಳಿಗೆ ಪಾಯಸ, ಕಡಬು ಇವೆಲ್ಲವನ್ನು ಬಾಳೆಯಲ್ಲಿ ನೈವೇದ್ಯಕ್ಕೆ ಇಡುತ್ತಾರೆ. ನಂತರ ಹಾಲು, ತುಪ್ಪ, ಬೆಲ್ಲದ ಮಿಶ್ರಣವನ್ನು ಬಾಳೆಯಲ್ಲಿ ಇಡುತ್ತಾರೆ. ಬಹಳ ಮುಖ್ಯವಾದದ್ದೆಂದರೆ ಗಂಡಸರು ಸಸಿಗೆ ಕಾಯಿ ಒಡೆಯುವುದು, ಪೂಜೆ ಮಾಡುವುದು, ಗೌರಿಹಬ್ಬದಲ್ಲಿ ಹೆಂಗಸರು ಪೂಜೆ ಮಾಡಿದರೆ ಇಲ್ಲಿ ಗಂಡಸರು ಪೂಜಿಸುವುದು, ಸಸಿಗೆ ಸುಂದರವಾದ ಚಪ್ಪರವನ್ನು ಹಾಕಿರುತ್ತಾರೆ. ಒಂದು ಎಡೆಯನ್ನು ಗೂಳೆಗೆ ಇಡುತ್ತಾರೆ. ಗೂಳಿ ಎಂದರೆ 'ಕಾಗೆ', ಎಡೆಯನ್ನು ಕೈಯಲ್ಲಿ ಇಡಿದುಕೊಂಡು ಗೂಳಿಯನ್ನು ಹೋ,-ಹೋ ಎಂದು ಕರೆಯುತ್ತಾ ಗದ್ದೆಯ ತುದಿಯತನಕ ಪೋಗುತ್ತಾರೆ. ಕಾಗೆ ಅಲ್ಲಿ ಎಲ್ಲಿಯೋ ಹತ್ತಿರದಲ್ಲಿ ಸುಳಿದಾಡತೊಡಗುತ್ತಿದ್ದಂತೆಯೇ ತಕ್ಷಣ ಎಡೆಯನ್ನು ಇಟ್ಟು ಬರುತ್ತಾರೆ. ಅಕಸ್ಮಾತ್ ಕಾಗೆ ಮುಟ್ಟದಿದ್ದರೆ ಊಟವನ್ನು ಮಾಡುವುದಿಲ್ಲ. ಕಾಗೆ ಬಂದು ಯಾವುದಾದರೊಂದು ತಿಂಡಿಯನ್ನು ಹೊತ್ತುಕೊಂಡು ಹೋದ ನಂತರ ಎಲ್ಲರೂ ಸೇರಿ ಊಟ ಮಾಡುತ್ತಾರೆ. ಎರಡನೇ ಎಡೆಯನ್ನು ಸಸಿಗೆ ಹಾಗೆಯೇ ಇಪುತ್ತಾರೆ. ಮೂರನೆಯದನ್ನು ಹೆಗ್ಗಣಗಳಿಗೆ ಇಡುತ್ತಾರೆ. ಕಡುಬೊಂದನ್ನು ಪೂಜಿಸಿ ಗದ್ದೆಯ ಮಧ್ಯಭಾಗದಲ್ಲಿ ಹುಗಿಯುತ್ತಾರೆ. ಇದನ್ನು ಗದ್ದೆ ಕೊಯ್ಯುವ ದಿನ ಹೊರತೆಗೆದು ಎಲ್ಲರೂ ಹಂಚಿಕೊಂಡು ತಿನ್ನುತ್ತಾರೆ. ಅಕಸ್ಮಾತ್ ಕೊಳೆತು ಹೋಗಿದ್ದರೆ ಸಸಿ ಪೂಜೆಯಲ್ಲಿ ವ್ಯತ್ಯಾಸವಾಗಿದೆ ಎಂಬ ನಂಬಿಕೆ ದೀವರದಾಗಿದೆ. ಊಟವಾದ ನಂತರ ಪೂಜಿಸಿದ ಹಂಗು ನೂಲನ್ನು ಕೈಗೆ ಕಟ್ಟಿಕೊಳ್ಳುತ್ತಾರೆ. ಈ ಅಂಗುನೂಲನ್ನು (ಅರಿಶಿಣ ಹಾಗೂ ಕುಂಕುಮ ಪಚ್ಚಿದ ದಾರ) ಗದ್ದೆ ಕೊಯ್ಲಿನ ನಂತರ ಒಂದು ಸಸಿಯನ್ನುಳಿಸಿ ಅದರ ಬುಡಸಮೇತ ಚೌಕಾಕಾರವಾಗಿ ಕತ್ತರಿಸಿ ಮೇಲೆ ಎತ್ತಿಕೊಂಡು ಗೊಣಬೆಯ ತುದಿಗೇರಿಸಿ ಬೆನವನ ಮೇಲಿಟ್ಟು ಆ ಹಂಗನೂಲನ್ನು ಅದಕ್ಕೆ ಹಾಕುತ್ತಾರೆ. ಗದ್ದೆಯಲ್ಲಿ ಊಟ ಮಾಡಿ ಸಂಜೆತನಕ ಕಳೆದು ಮನೆಗ ಬರುತ್ತಾರೆ. ಗರ್ಭವತಿಯಾದ ತಾಯಿಯನ್ನು ಕಾಪಾಡುವ ಹೊಣೆಯನ್ನು ಮಕ್ಕಳ ಹೊತ್ತಂತೆ ಹಂಗುನೂಲನ್ನು ಕಟ್ಟಿಕೊಂಡು ಕಂಕಣ ಬದ್ಧರಾಗಿರುತ್ತಾರೆ. ಗದ್ದೆ ಕೊಯ್ದುನಂತರ ಆ ಹಂಗುನೂಲನ್ನು ಗೊಣಬೆಯ ಮೇಲೆ ಹಾಕುತ್ತಾರೆ. ಆ ಜವಾಬ್ದಾರಿಯನ್ನು ಕಟ್ಟುನಿಟ್ಟಾಗಿ ನಿಭಾಯಿಸುತ್ತಾರೆ. ತಾಯಿಗೆ ಬಯಕೆಯನ್ನು ತೀರಿಸುವುದರ ಮೂಲಕ ಭೂಮಿಯ ಜೊತೆಗೆ ನಿಕಟ ಸಂಬಂಧವನ್ನು ಸೃಷ್ಠಿಸಿಕೊಂಡಂತೆ. ಆದ್ದರಿಂದಲೇ ಹಬ್ಬಗಳು ಕೇವಲ ಊಟ ಅಥವಾ ಮನರಂಜನೆಯ ವ್ಯವಸ್ಥೆಯಲ್ಲ. ಬದಲಿಗೆ ಸಂಸ್ಕೃತಿಯ ವೈಶಿಷ್ಟ್ಯಪೂರ್ಣ ಆಕಾರ. ಕಳ್ಳ ಭೂಮಣ್ಣಿ ಕೂಡ ಬಡತನದ ಕಾರಣಕ್ಕೆ ಅಥವಾ ಒಡೆಯರ ಗೇಣಿ ಗದ್ದೆಯ ಮೂಲೆಯಲ್ಲಿ ಅವರಿಗೆ ಕದ್ದು ಮಾಡಿರಬಹುದಾದ ಪೂಜೆಯ ಕಾರಣಕ್ಕೆ ಸಂಭವಿಸಿರಬೇಕು. ಭೂಮಿ ಹಬ್ಬದ ಕಲ್ಪನೆ ಪ್ರಾಯಶಃ ಕೃಷಿ ಸಂಸ್ಕೃತಿ ಆರಂಭವಾದ ಮೇಲೆ ಸೃಷ್ಠಿಯಾಗಿರಬೇಕು.

**ದೀವರ ಕೃಷಿಗೆ ಸಂಬಂಧಿಸಿದ ಚಿತ್ತಾರದ ಕಲೆಗಳು**

ದೀವರ ಬದುಕಿನಲ್ಲಿ ಜಗತ್ತಿನ ಸಂಚಲನೆಯ ಮೂಲಕ ಅವರ ಕಲಾ ಜಗತ್ತು ಒಂದು ಮಹತ್ವದ ಹಾಗೂ ವೈಶಿಷ್ಟ್ಯಪೂರ್ಣ ಪುಟವಾಗಿ ತೆರೆದುಕೊಳ್ಳುತ್ತದೆ. ಗುಡ್ಡಗಾಡುಗಳಲ್ಲಿ ಬಾಳಿ ಬದುಕಿದ ಜನಾಂಗ ಪ್ರಕೃತಿಯೊಡನೆ ನಡೆಸಿದ ಅನುಸಂಧಾನದ ಫಲವಾಗಿಯೇ ಅವರ ರಮ್ಯ ವಿಸ್ಮಯ ನೋಟವೆಲ್ಲ ಜೈವಿಕ ಆಕರವಾಗಿ ಬದಲಾವಣೆ ಹೊಂದುತ್ತದೆ. ಬದುಕಿನ ಆಳ ಅರಿವುಗಳು ಮೈದಳೆಯುತ್ತವೆ. ಸೃಷ್ಠಿಶೀಲ ಜಗತ್ತಿನ ಚೈತನ್ಯ ಸ್ವರೂಪಿ ಜೀವಿಗಳ

ಓಡಾಟ-ಹಾರಾಟಗಳು ಕೂಡಾ ಆಕಾರಕ್ಕೆ ಇಳಿಯುತ್ತವೆ. ಅಚ್ಚರಿ ಎಂದರೆ, ದೀವರ ಈವರೆಗಿನ ಕಲೆಯ ಸ್ವರೂಪವನ್ನು ಗಮನಿಸಿದಾಗ ಅವರ ಕುಲದ ಮೂಲದ ಚಾರಿತ್ರಿಕ ಬೇರುಗಳ ಆದಿಮಜಗತ್ತಿನ ಆಳಕ್ಕೆ ಇಳಿಯುತ್ತಲೇ ಹೋಗುತ್ತವೆ. ಜೊತೆಗೆ ಸಮುದಾಯವೊಂದರ ಪ್ರಾಕ್ತನ ಕುರುಹುಗಳನ್ನೂ ತೆರೆದಿಡುತ್ತದೆ. ಹಸೆಗೋಡೆ ಚಿತ್ತಾರ, ಭೂಮಿಬುಟ್ಟಿಚಿತ್ತಾರ, ಇಡಕಲು ಚಿತ್ತಾರ, ಬಾಗಿಲು ಚಿತ್ತಾರ, ಪಣತದ ಚಿತ್ತಾರಗಳಲ್ಲಿ ರೂಢಿಸಿದ ಜೀವದ್ರವ್ಯದ ಹಿಂದೆ ಮಾತೃಮೂಲೀಯ ಕುಟುಂಬದ ಸ್ತ್ರೀತ್ವದ ವಿಭಿನ್ನ ಮಾದರಿಗಳ ಸೃಜನಶೀಲತೆ ಕ್ರಿಯಾಶೀಲವಾಗಿ ಕೆಲಸ ಮಾಡಿದೆ. ಶ್ರಮಶಕ್ತಿಯ ನಿಗೂಢತೆಗಳು ಅಮೂರ್ತತೆಯಲ್ಲಿ ಸಂವಾದಿಸುತ್ತವೆ. ಬೆವರ ಹನಿಗಳಿಗೂ ಪದಗಳ ಹಂಗಿದೆ. ವಿಶ್ರಮಶೀಲ ಬದುಕಿನ ಚಿತ್ರಗಳಲ್ಲಿ ಈ ರೀತಿಯ ಅನುಭಾವ ಗೋಚರಿಸುವುದಿಲ್ಲ. ಭತ್ತದ ತೆನೆ, ಎಳ್ಳಿನ ಗಿಡ, ನವಿಲು, ಹುಲ್ಲುಹೊರೆ, ತೇರು, ಮುಂತಾದವೇ ಹೆಚ್ಚಾಗಿ ಕಂಡುಬರುವುದಕ್ಕೆ ವೈಚಿತ್ರ್ಯಗಳನ್ನು ಗೆರೆಗಳಲ್ಲಿ ಕಂಡರಿಸುತ್ತಾರೆ. ಮದರಂಗಿ, ಹಚ್ಚೆ, ಮುಂತಾದವುಗಳು ಪ್ರಸಾಧನ ಪ್ರಜ್ಞೆಯನ್ನು ಜಾಗ್ರತಗೊಳಿಸುತ್ತವೆ. ಮನುಷ್ಯನಬದುಕಿನ ಮೂಲಕ ಸಮೂಹ ಸಂಬಂಧಗಳನ್ನು ಒಟ್ಟೊಟ್ಟಾಗಿ ತಿಳಿಸುವ ಚಾರಿತ್ರಿಕ ಮೊತ್ತದ ಘಟ್ಟಗಳನ್ನು ಸೂಚಿಸುತ್ತದೆ. ಮಾನವ ಧ್ಯಾನಸ್ಥ ಸ್ಥಿತಿಯಿಂದ ಮೀರಿನಿಂತ ನೈಸರ್ಗಿಕ ನೆಲೆಗಳಿಂದ ಏಕೀಭವಿಸಿದ ಜ್ಞಾನವು ವಿರಾಟ ಸ್ವರೂಪಿಯಾಗಿ ಚಿತ್ತಾರದ ರೂಪದಲ್ಲಿ ಕಾಣಿಸುತ್ತದೆ.

**ಹಸೆಯ ಚಿತ್ತಾರದ ಕಲೆಗಳು**

ಹಸೆಯ ಚಿತ್ತಾರವನ್ನು ಮೂರು ತರಹದ ವರ್ಣಗಳಲ್ಲಿ ಚಿತ್ರಿಸುತ್ತಾರೆ. ಬಿಳಿಹಸೆ, ಕಪ್ಪುಹಸೆ, ಕೆಮ್ಮಣ್ಣು ಹಸೆ ಎಂದು ವಿಭಾಗಿಸುತ್ತಾರೆ. ಅದಕ್ಕೆ ಅನುಕೂಲವಾಗುವಂತೆ ಬಣ್ಣವನ್ನೂ ಅವರೇ ತಯಾರಿಸಿಕೊಳ್ಳುತ್ತಾರೆ. ಈ ಎಲ್ಲಾ ಬಣ್ಣಗಳ ಮೂಲಕ ಭೂಮಣ್ಣಿ ಬುಟ್ಟಿಯಲ್ಲಿ ಕೃಷಿಗೆ ಸಂಬಂಧಿಸಿದ ಚಿತ್ತಾರಗಳನ್ನು ಬಿಡಿಸುತ್ತಾರೆ.

೧. ಬಿಳಿ ಅಕ್ಕಿಯನ್ನು ತೆಗೆದುಕೊಂಡು ಅದರಲ್ಲಿ ಕೆಂಪು, ಕಪ್ಪು ಅಕ್ಕಿಯನ್ನು ತೆಗೆದು ಕೇವಲ ಬಿಳಿಬಣ್ಣದ ಅಕ್ಕಿಯನ್ನು ಚೆನ್ನಾಗಿ ತೊಳೆದು ಮೂರು, ನಾಲ್ಕು ದಿನ ನೆನಸಿ ಅರೆದು ಬಿಳಿಯ ಹಿಟ್ಟನ್ನು ಸಿದ್ಧಪಡಿಸಿಕೊಳ್ಳುತ್ತಾರೆ.

೨. ಕಪ್ಪು ನೆರಗುಳಿ ಭತ್ತ ಅಥವಾ ಕೇಸುಭತ್ತವನ್ನ ಕುಟ್ಟಿ ಅಕ್ಕಿ ತೆಗೆದು ಕಪ್ಪಾಗುವಂತೆ ಹುರಿದು ಮೂರು ನಾಲ್ಕು ದಿನ ನೀರಿನಲ್ಲಿ ನೆನೆಹಾಕಿ ನುಣ್ಣಗೆ ಅರೆದು ಗುಡ್ಡೆಗೇರು ಕಾಯಿಹಾಕಿ ಕುದಿಸುತ್ತಾರೆ.

ಹಸೆಯ ಮೂಲಾಂಶಗಳು ಏಕಾಕೃತಿಯ ಅಖಂಡ ರೂಪಿಯಂತೆ ಹಸೆಚಿತ್ತಾರವು ಆಂತರ್ಯದಲ್ಲಿ ಹಲವು ಮೂಲಾಂಶಗಳು ಹೊಂದಿವೆ. ಅವುಗಳನ್ನು ಇಲ್ಲಿ ಪಟ್ಟಿಮಾಡಲಾಗಿದೆ.

೧. ಎಳೆ ಎಳೆಯಂದೆರೆ ಗೆರೆಯೆಂದರ್ಥ ಚಿತ್ತಾರದ ರಚನೆಯ ಸಂದರ್ಭದಲ್ಲಿ ಅಡ್ಡ ಉದ್ದಗೆರೆಯನ್ನು ಎಳೆಯಲಾಗುತ್ತದೆ. ಇವುಗಳೇ ಎಳೆ.

೨. ನೀಲಿ ಎರಡು ಎಳೆಗಳ ಮಧ್ಯಭಾಗಗಳಲ್ಲಿ ಜಾರೆಯಾಗಿ ಎಳೆಯುವ ಗೆರೆಯನ್ನು ನಿಲಿ ಎನ್ನಲಾಗುತ್ತದೆ. ಇದನ್ನು ನಿಲಿ ಎಂದ ಕರೆಯಲಾಗುತ್ತದೆ.

೩. ಪೀಟಿ ಪ್ರಕೃತಿಯೊಡನೆ ಒಡನಾಟ ಇಟ್ಟುಕೊಂಡ ಮನುಷ್ಯನಿಗೆ ಸಕಲ ಜೀವರಾಶಿಗಳನ್ನೂ ಚಿತ್ತಾರವಾಗಿಸುವ

ಹಂಬಲವೇ ವೇಟೆಯ ರಚನೆ. ವೇಟೆ ಎಂದರೆ ಚಿಟ್ಟೆ. ಇವುಗಳನ್ನು ಸಮಾಗಮದ ರೂಪದಲ್ಲಿ ಚಿತ್ರಿಸುತ್ತಾರೆ.

೪. **ಕೋಳಿ** ಕೋಳಿಗಳ ಚಿತ್ತಾರದ ಆಶಯದ ಹಿಂದೆ ಬದುಕನ್ನು ಪ್ರಾಣಿಜನ್ಯಮೂಲದಲ್ಲಿ ಸೃಜಿಸಿಕೊಂಡಿದ್ದರೆ ಸಂಕೇತವನ್ನು ನೀಡುತ್ತದೆ. ಬೆಳಗಾಗುವುದೆಂದರೆ ಕೋಳಿಗಳ ಕೂಗಿನಿಂದಲೇ ಎಂದು ಭಾವಿಸುವುದರಿಂದಲೇ ಕೋಳಿಗಳನ್ನು ಜೊತೆಯಾಗಿ ಚಿತ್ರಿಸುತ್ತಾರೆ.

೫. ಏಣಿ ಏಣಿಯ ರಚನೆಗೆ ಮುಖ್ಯ ಕಾರಣ ಬರುವ ಕ್ರಿಯೆ. ತಮಗೆ ಸಿಗದೇ ಇರುವ ಅವಕಾಶಗಳನ್ನು ಪಡೆದುಕೊಳ್ಳುವ ಹಟ ಹಾಗೂ ಕುತೂಹಲವೇ ಏಣಿಯ ಸೃಷ್ಠಿಗೆ ಕಾರಣ. ಹಸೆಗೋಡೆಯಲ್ಲಿ ಏಣಿ ಬರೆಯುವುದು ದಾಂಪತ್ಯ ಜೀವನವನ್ನು ಸಮಾನಾಗಿ ಏರಿದರೆ ಜೀವನ ಸುಗಮವಾಗಿ ನಡೆಯುತ್ತದೆ ಎಂಬ ನಂಬಿಕೆ.

ದೀವರ ಎಲ್ಲಾ ಕಾರ್ಯಕ್ರಮಗಳಲ್ಲಿ ಶುಭದ ಸಂಕೇ ತವಾಗಿ ಮಾವು ಪೂಜಿತಗೊಳ್ಳುತ್ತದೆ. ಮನೆಯ ಎದುರಿಗೆ ತೋರಣ ಮಾಡುತ್ತಾರೆ. ಪೂಜೆಯ ಸಂದರ್ಭದಲ್ಲಿ ತಲೆಯ ರುಮಾಲಿಗೆ ಮಾವಿನ ಕಡ್ಡಿ ಸಿಕ್ಕಿಸಿಕೊಳ್ಳುತ್ತಾರೆ. ಮದುವೆಯ ಮನೆಯಲ್ಲಿ ಮಾವಿನ ಕೊನ್ಕಲು ಕಟ್ಟುವುದು ದೀವರ ಪದ್ಧತಿ.

೭. **ಕರಗಸ ಸಾಲು** ಗರಗಸ ಮರವನ್ನು ಕೊಯ್ಯಲು ಬಳಸುವ ಸಾಧನ ಹಲ್ಲಿನಂತಹ ರಚನೆಯ ಚಿತ್ತಾರದ ಆಶಯವೇ ಕರಗಸದ ಸಾಲು.

೮. **ಗೊಣಬೆ** ಗೊಣಬೆ ಎಂದರೆ ಕೊಯ್ದು ಭತ್ತದ ಪೈರಿನ ವ್ಯವಸ್ಥಿತರಾಗಿ ಈ ಗೊಣಬೆಯ ಚಿತ್ತಾರವನ್ನು ಚಿತ್ರಿಸಲಾಗುತ್ತದೆ.

೯. **ಬಾಳೆಮರ** ಹಿತ್ತಲಿನಲ್ಲಿ ಬೆಳೆಯುವ ಬಾಳೆಯಮರವನ್ನು ಹಸೆಯಲ್ಲಿ ಮೂಡಿಸಲಾಗುತ್ತದೆ.

೧೦. **ಅಡಿಕೆ ಮರ** ಮಲೆನಾಡಿನ ಪ್ರಮುಖ ವಾಣಿಜ್ಯಬೆಳೆ ಅಡಿಕೆ. ತಾವು ಸಾಕಿ ಬೆಳಸಿದ ಅಡಿಕೆಯನ್ನು ಚಿತ್ತಾರದ ರೂಪದಲ್ಲಿ ಚಿತ್ರಿಸುತ್ತಾರೆ.

೧೧. **ಗದ್ದೆ** ಸಸಿ ಭತ್ತದ ಸಸಿಯನ್ನು ಚಿತ್ತಾರದ ರೂಪದಲ್ಲಿ ಚಿತ್ರಿಸುತ್ತಾರೆ.

೧೨. **ಜೋಗಿಜಡೆ** ಹಸಿರು ಬಣ್ಣದ ಜಡೆಯಾಕಾರದ ಉದ್ದನೆಯ ಸಸ್ಯವನ್ನು ಶಿವನ ಜಡೆ ಅಥವಾ ಜೋಗಿ ಜಡೆ ಎಂದು ಕರೆಯಲಾಗುತ್ತದೆ. ಗದ್ದೆ ತುಂಬಾ ನೀರು ತುಂಬಿಕೊಂಡಾಗ ಈ ಕಳೆಯ ಸಸ್ಯ ಕವಲು-ಕವಲುಗಳಾಗಿ ಹರಿದು ನಿಲ್ಲುತ್ತದೆ. ಇದನ್ನು ಜೋಗಿಯ ಜಡೆ ಎನ್ನುತ್ತಾರೆ.

೧೩. **ಬಾಸಿಂಗ ಬುಟ್ಟಿ.** ೧೪. **ಬಾಚಣಿಕೆ.**

೧೫. **ಆಲದ ಹಿಡಿ.** ಭತ್ತದ ಸಸಿ ಹುಟ್ಟಿದ ನಂತರ ಮಳೆ ನೀರುಗದ್ದೆಗೆ ತುಂಬಿ ಕೊಂಡಾಗ ಕಳೆಜಾತಿಯ ಸಸ್ಯಗಳನ್ನೂ ಕೀಳಲು ಬಿದಿರನ್ನು ಕಟ್ಟಿ ಎಳೆಯುತ್ತಾರೆ. ಇದನ್ನು ಆಲದ ಹಿಡಿ ಎನ್ನುತ್ತಾರೆ.

೧೬. **ಹಲ್ಕು** ಜೈನೆ ಮರದಿಂದ ಮಾಡಿದ ಹಲ್ಲುಗಳುಳ್ಳ ಕಳೆ ನಿವಾರಿಸಲು ಮಾಡಿದ ಸಾಧನ. ಭತ್ತದ ಸಾಲುಗಳ ಮಧ್ಯ ವಿಪರೀತ ಕಳೆ ಬೆಳೆದಾಗ ಈ ಹಲ್ಕು ಉಪಯೋಗಿಸಿ ಕಳೆ ನಿವಾರಿಸುತ್ತಾರೆ.

೧೭. **ನೊಗ** ಗಾಡಿ ಅಥವಾ ನೇಗಿಲನ್ನು ಕಟ್ಟಲು ಅನುಕೂಲವಾಗಿರುವ ಸಾಧನ ನೊಗ. ಅದರ ಒಂದೊಂದು ತುದಿಗೆ ಎತ್ತುಗಳನ್ನು ಕಟ್ಟಿರುತ್ತಾರೆ.

೧೮. **ನೇಗಿಲು** ಗದ್ದೆ ಉಳುಮೆ ಮಾಡುವ ಸಾಧನ.

೧೯. **ಹರ್ತೆಕುಂಟೆ** ಎರಡು ಸಾಲಿನ ಮಧ್ಯದ ಕಳೆ ನಿವಾರಿಸಲು ನೊಗಕ್ಕೆ ಕಟ್ಟಿದ ಎರಡು ಕಬ್ಬಿಣದ ತಾಳಗಳುಳ್ಳ ಸಾಧನ.

೨೦. **ಎತ್ತು.** ರೈತರ ಅತ್ಯಮೂಲ್ಯ ಆಸ್ತಿ.

೨೧. **ಬಂಡಿ:** ರೈತರಿಗೆ ಬಂಡಿ ಕೇವಲ ಸಾಧನ ಸಾಮಗ್ರಿಯಾಗಿ ಮಾತ್ರವೇ ಅಲ್ಲದೆ ಅದೊಂದು ಜೀವನಾಧಾರದ ಪೂಜ್ಯನೀಯ ಸಲಕರಣೆಯಾಗಿದೆ.

೨೨. **ಹಕ್ಕಿ**

೨೩. **ಗೂಡಿನ ಹಕ್ಕಿ**

೨೪. **ಕರಟದ ಗಡಿಗೆ** ಭೂಮಣ್ಣಿಯ ಹಚ್ಚಂಬಲಿ ಬೇಯಿಸಲು ಉಪಯೋಗಿಸುವ ಮಣ್ಣಿನ ಗಡಿಗೆ.

೨೫. **ಹೆಂಡೆಗೊಡ್ತಿ** ಹೆಂಟೆಯನ್ನು ಒಡೆಯಲು ಉಪಯೋಗಿಸುವ ಬಿದುರಿನ, ಕೌಳ ಮರದ ಸಾಧನ.

೨೬. **ಭೂಮಣಿ ಬುಟ್ಟಿ** ಭೂಮಿ ಹುಣ್ಣಿಮೆಯ ಸಂದರ್ಭದಲ್ಲಿ ಭೂತಾಯಿಗೆ ಪೂಜೆಸಲ್ಲಿಸಲು ಆಹಾರ ಪರಿಕರ ಹಾಗೂ ಪೂಜಾವಸ್ತುಗಳನ್ನು ಇಟ್ಟುಕೊಂಡು ಹೋಗಲು ಅನುಕೂಲವಾಗುವ ಬುಟ್ಟಿ.

೨೭. **ದೇವರು ಮೂರ್ತರೂಪದ ಸಾಂಕೇತಿಕ ಶೈಲಿಯ ಚಿತ್ರ.**

೨೮. **ಮಾಲೆ ಆರತಿ:** ದೀವರಲ್ಲಿ ದೀಪಕ್ಕೆ ಹೆಚ್ಚು ಮಹತ್ವವಿರುವುದರಿಂದ ಚಿತ್ತಾರದಲ್ಲಿ ೮ ರಿಂದ ೯ ಮಾಲೆಗಳ ಆರತಿ ಚಿತ್ತಾರವನ್ನು ಬರೆಯುತ್ತಾರೆ.

೨೯. **ಗಾಲಿ**

೩೦. **ಕೊಡೆ.**

೩೧. **ಸೂರ್ಯ ಮತ್ತು ಚಂದ್ರ.**

೩೨. **ಬೋಟು:** ಕೈಬೆರಳುಗಳನ್ನು ಅದ್ದಿಕೊಂಡು ಅದರ ತುದಿಯಿಂದ ಭೂಮಹಾ ಬುಟ್ಟಿಯ ಮೇಲೆ ಇಡುತ್ತಾರೆ.

೩೩. ಮರ ೩೪. ವಂಕಿಗಿಡ ೩೫. ಕೌಳಿಮಟ್ಟಿ ೩೬. ಹೆಜ್ಜೆ ೩೭. ಪಟ ೩೮. ವಸ್ತ್ರ. ೩೯. ಚಿಕ್ಕ ಬಾಕುಲ್‌ಚಿನ್ನಾಣ ೪೦. ಆರ್ತಿಚಿತ್ತಾರ ೪೧. ಏಲಕ್ಕಿ ಗೊನೆ. ೪೨. ಬಸವನ ಪಾದ.

೪೩. **ನೆರಕೋಲು:** ಬೇಸಾಯದ ಹುಲ್ಲನ್ನು ಕೊಡವಲು ಉಪಯೋಗಿಸುವ ಸಾಧನ.

೪೪. **ಎತ್ತಿನ ಬಾಸಿಂಗ:** ದೊಡ್ಡ ಹಬ್ಬದಲ್ಲಿ ಮೆರವಣಿಗೆ ಹೊರಟ ಎತ್ತುಗಳಿಗೆ ತೊಡಿಸುವ ಚೆಂಡು ಹೂವಿನ ಅಲಂಕೃತವಾದ ಬಾಸಿಂಗ.

೪೫. **ಮುತ್ತಿನ ಬೊಟ್ಟು.** ೪೬. **ಗೌರೆಮುಡಿ.** ೪೭. **ಹುಲಿಹೆಜ್ಜೆ.** ೪೮. **ದಂಡಿಗೆ ಕೋಲು.**

೪೯. **ಹುಲ್ಲಿನ ಹೊರೆ:** ಬೆಳಗಿನ ಜಾವವೇ ಹುಲ್ಲು ತರಲು ಹೋಗುವುದರ ಮೂಲಕ ದೈನಂದಿನ ಬದುಕಿನ ಆರಂಭವಾಗುತ್ತದೆ. ಇಂತಹ ಚಿತ್ತಾರವನ್ನು ಹಸೆಯಲ್ಲಿ ಗುರುತಿಸುತ್ತಾರೆ.

೫೦. ಸೀತೆಯ ಮುಡಿ. ೫೧. ಗೊಂಬೆ ಸಾಲು. ೫೨. ಗೂಡಿನ ಹಕ್ಕಿ. ೫೩. ಗಿಡಬುಡಿಕಿ. ೫೪. ಲಿಂಗನಗುಡಿ.

೫೫. **ಭತ್ತದ ಸಾಲು:** ದೀವರ ಜೀವನ ವಿಧಾನದ ವ್ಯವಸಾಯದ ರೂಪಕವಾಗಿ ಗದ್ದೆಯ ಸಾಲು ಚಿತ್ತಾರವಾಗಿದೆ.

೫೬. **ಬಸವನ ಪಾದ**

೫೭. **ಗೊಂಬೆ:** ಭತ್ತವನ್ನು ಕೊಯ್ದು ನಂತರ ಗೊಂಬೆ ರೂಪದಲ್ಲಿ ಗುಡ್ಡೆಹಾಕುತ್ತಾರೆ. ಇದು ಫಲದ

ನಿರೀಕ್ಷೆಯಲ್ಲಿದೆ. ಇದನ್ನು ಹಸೆಯಲ್ಲಿ ಚಿತ್ರಿಸುವ ಮೂಲಕ ಗರ್ಭಿಣಿಯ ಚಿತ್ತಾರವನ್ನು ನೀಡಲಾಗುತ್ತದೆ.

೫೮. ಬಾಸಿಂಗ ನಿಲಿ. ೫೯.ಜಲ್ಲಿಸಾಲು ೬೦. ಪೊಪ್ಪಿ. ೬೧. ಅರೆಪೊಪ್ಪಿ. ೬೨. ನೀಲಿಕೊಚ್ಚು

**ಚಂಡಿಹೂವಿನ ಸಾಲು:** ಚೆಂಡಿಹೂವು ದೀವರ ದೀಪಾವಳಿಯ ಸಂದರ್ಭದಲ್ಲಿ ಬಳಸಲೇಬೇಕಾದ ಅತ್ಯಮೂಲ್ಯ ಪುಷ್ಪ. ಎತ್ತಿನ ಮೆರವಣಿಗೆಯ ಸಂದರ್ಭದಲ್ಲಿ ಚೆಂಡಿಹೂವಿನ ಸರವನ್ನು ಮಾಡಿ ಕೊರಳಿಗೆ ಕಟ್ಟಲಾಗುತ್ತದೆ. ಆ ನೆನಪಿಗಾಗಿ ಚೆಂಡಿ ಹೂವಿನ ಸಾಲಿನ ರಚನೆ ಮಾಡಲಾಗುತ್ತದೆ.

೬೪. ಮಾದ್ನಕೈ ೬೫. ದಂಡ್ಗೆ. ೬೬. ಅಳ್ಳಿಎಲೆ. ೬೭. ಗಡಿಗೆ. ೬೮. ಬೀಸಣಿಗೆ. ೬೯. ವಾಲ್ಗದವರು. ೭೦ ದಿಪ್ಪಿರಾಟ ಜನ. ೭೧. ಮದುಮಗ.ಮದುವಣಿಗಿತ್ತಿ. ೭೨. ತೊಂಡ್ಲು. ೭೩. ಬಾಸಿಂಗ. ೭೪. ಮಗ್ಗೆಸಾಲು. ೭೫. ಎಲೆಬಳ್ಳಿ. ೭೬. ಅರುಕುಲ್‌ಕಣ್ಣು ೭೭. ಬಾತಣಿಕಿ ೭೮. ಬಾಸಿಂಗ ಬುಟ್ಟಿ. ೭೯. ಕೊಡೆ. ೮೦. ಮರ. ೮೧. ವಂಕಿಗಿಡ. ೮೨. ವಸ್ತ್ರ. ೮೩. ಪಟ.

ಹೀಗೆ ಮೇಲಿನ ಎಲ್ಲಾ ಚಿತ್ತಾರದ ಕಲೆಗಳು ಕೃಷಿಗೆ ಸಂಬಂಧಿಸಿದಂತೆ ಪ್ರತಿಬಿಂಬಿಸುತ್ತವೆ.

**ಚಿತ್ತಾರದ ಕಲೆಗಳು**

೧. ಗೋಡೆಚಿತ್ತಾರ: ೧. ಬಂಡೆ ೨. ಗೋಡೆ ೩. ಹಸೆ ೪. ಬಾಗಿಲು

೨. ನೆಲಚಿತ್ತಾರ: ೧.ಮದುವೆ ಚಿತ್ತಾರ ೨.ಇಡಕಲ್ಲು ಚಿತ್ತಾರ

೩. ಅಂಗಚಿತ್ತಾರ: ೧. ಹಚ್ಚೆ ೨. ಬಟ್ಟೆ ೩. ಧಾರ್ಮಿಕ ಚಿತ್ರ

೪. ಪರಿಕರ ಚಿತ್ತಾರ: ೧. ಕೌದಿ ೨ ಚಿಬುಲ ೩. ಚಾಪೆ ೪. ಲೋಹ ೫. ಮರ.

೫. ಬುಟ್ಟಿಚಿತ್ತಾರ: ೧. ಬುಟ್ಟಿ.

**ಬುಟ್ಟಿಚಿತ್ತಾರ**

ಭೂಮಿ ಹುಣ್ಣಿಮೆಯ ಸಂದರ್ಭದಲ್ಲಿ ಬಳಸುವ ಬುಟ್ಟಿಗಳದ್ದೇ ವೈವಿಧ್ಯಮಯ ಚಿತ್ರಜಗತ್ತು. ನಿಸರ್ಗ ನಿರ್ಮಿತ ಜಗತ್ತಿನ ವೈವಿಧ್ಯಮಯ ಚಿತ್ರರಾಶಿಯು ಮೈದಳೆದು ನಿಂತಿದೆ. ದೀವರ ಸಮುದಾಯ ತನ್ನ ಸಂಪ್ರದಾಯ ಜಗತ್ತಿನ ಪರಿಕರಗಳಲ್ಲಿ ಕಲಾಜಗತ್ತಿನ ವೈಚಿತ್ರ್ಯವನ್ನು ಸಮನ್ವಯಗೊಳಿಸುವುದು ಗಮನಾರ್ಹವಾದುದು. ಕಾರಣವೆಂದರೆ ಬದುಕು ಹಾಗೂ ಕಲೆ ಅವರಲ್ಲಿ ಮಾತ್ರವಲ್ಲ. ವಿರಾಮ ಜಗತ್ತಿನ ಸಮಯ ವ್ಯರ್ಥತೆಯಲ್ಲ. ಬದಲಾಗಿ ಹಬ್ಬಹರಿದಿನ, ದುಡಿಮೆಯ ಬೆವರಿನ ಹನಿಗಳ ಜೊತೆ ನಿಕಟ ಸಂಬಂಧ ಇಟ್ಟುಕೊಂಡದ್ದು. ಆದ್ದರಿಂದಲೇ ಚಿತ್ರದಲ್ಲಿ ಮೂಡಿದ ವಿನ್ಯಾಸಗಳೆಲ್ಲವೂ ನಿಸರ್ಗ ನಿರ್ಮಿತವಾದುವೇ ಆಗಿವೆ.

ಇಲ್ಲಿ ಎರಡು ಬುಟ್ಟಿಗಳಿರುತ್ತವೆ. ಅಚ್ಚಂಬ್ಲಿ ಬುಟ್ಟಿ. ಇನ್ನೊಂದು ದೊಡ್ಡ ಬುಟ್ಟಿ. ಬೆಳೆಗಳಿಗೆ ಅಚ್ಚಂಬ್ಲಿ ಬೀರಿ ಬರುವ ಬುಟ್ಟಿಯಲ್ಲಿಯೇ ಪೂಜಾ ಸಮಾನು ಹೊಯ್ಯುತ್ತಾರೆ. ಇನ್ನೊಂದರಲ್ಲಿ ಊಟದ ಪರಿಕರಗಳನ್ನು ತರುತ್ತಾರೆ. ಮಾರ್ನವಮಿಯ ಬೆಳಗಿನ ದಿನದಿಂದ ಬುಟ್ಟಿ ಬರೆಯುವ ಸಡಗರ ಆರಂಭವಾಗುತ್ತದೆ. ಬುಟ್ಟಿಗೆ ಸಗಣಿಯಿಂದ ಸಾರಿಸುತ್ತಾರೆ. ದಶಮಿಯ ದಿನ ಕೆಮ್ಮಣ್ಣು ಬಳಿಯುತ್ತಾರೆ. ಅಕ್ಕಿ ಹಿಟ್ಟಿನ ಬಣ್ಣದಿಂದ ಬುಟ್ಟಿಗಳ ಮೇಲೆ ಎಳೆ ಎಳೆಯತೊಡಗುತ್ತಾರೆ.

ಚೌಕಾಕೃತಿಯ ಬುಟ್ಟಿಯಲ್ಲಿ ನಾಲ್ಕು ಭಾಗಗಳಲ್ಲಿ ನಾಲ್ಕು ಚಿತ್ರಗಳಿರುತ್ತವೆ. ಅದಕ್ಕೆ ನಾಲ್ಕು ಚೌಕಾಕಾರದ ಪಿನ್ನಲೆ ಕೊಡುತ್ತಾರೆ. ಬುಟ್ಟಿ ಹೊತ್ತು ಹೊರಟ ಹೆಂಗಸು, ಜೊತೆಗೊಂದು ಗೊಣಬೆ ಅದಕ್ಕೆ ಏಣಿ ಒರಗಿಸಿಟ್ಟಿರುವುದು, ಎತ್ತಿನಗಾಡಿ, ಮನೆ, ಹಕ್ಕಿಗಳು ಕುಳಿತಿರುವ ಗಿಡ ಮುಂತಾದವುಗಳನ್ನು ಬರೆಯುತ್ತಾರೆ. ಈ ಚಿತ್ತಾರದ ರಚನೆ ಬಿಳಿಗಿ, ಕೆಳದಿ, ಗುತ್ತಿಸೀಮೆಯಲ್ಲಿ ವ್ಯತ್ಯಾಸಗಳನ್ನು ಹೊಂದಿದೆ.

**ಹೆಜ್ಜೆಚಿತ್ತಾರ.** ದೀವರ ಅತ್ಯಂತ ವಿಶಿಷ್ಟ ಹಬ್ಬ ದೊಡ್ಡಬ್ಬ ಬಲೀಂದ್ರನ ಹಬ್ಬವೆಂದೇ ಪ್ರಸಿದ್ದ. ಬೂರೆ ಹಬ್ಬದ ದಿನ ಬೂರೆಕುಂಬ, ತನದನಂತರ ಅದರ ಎದುರು ಕೆಮ್ಮಣ್ಣಿನಿಂದ ಅಗಲವಾದ ಚಚೌಕವನ್ನು ರಚಿಸುತ್ತಾರೆ. ಅದರ ಮೇಲೆ ಜೇಡಿ ಮಣ್ಣಿನಿಂದ ಗೋವಿನ ಪಾದದ ಚಿತ್ರವನ್ನು ಬರೆಯುತ್ತಾರೆ. (ಇಲ್ಲಿ ಉದ್ದ ಮುಂಡಿಗೆ, ಅಡ್ಡ ಮುಂಡುಗೆಗಳನ್ನಾಗಿ ವಿಭಾಗಿಸುತ್ತಾರೆ. ತೇರಿಗೆ ಕೆಳಗೆ ಎರಡು ಚಕ್ರಗಳಿರುತ್ತವೆ. ತೇರು ಎಳೆಯುವ ಜನ ಸಿದ್ಧವಾಗಿರುತ್ತಾರೆ. ಉದ್ದ ಮುಂಡಿಗೆಯ ಪಕ್ಕದಲ್ಲಿ ಎರಡೂ ಕಡೆ ಮಾದ್ನ ಕೈ ಹಾಕಿರುತ್ತದೆ. ತೇರಿನ ಮೇಲೆ ಬಾಸಿಂಗ ) ಅದೇ ರೀತಿ ಕಾಲು ಪೂಜೆ (ದೀಪಾವಳಿ) ದಿನ ಕೊಟ್ಟಿಗೆಯ ಎದುರು ಇದೇ ರೀತಿ ಚಿತ್ರ ಬಿಡಿಸಿರುತ್ತಾರೆ. ಪಶುಪಕ್ಷಿಗಳೆಲ್ಲ ಸಮೃದ್ಧವಾಗಿದ್ದಾವೆ ಎಂದು ಬಲೀಂದ್ರ ತಿಳಿದು ತಾನು ಬಿಟ್ಟು ಹೋದ ರಾಜ್ಯ ಇನ್ನೂ ಸಂಪದ್ಭರಿತವಾಗಿಯೇ ಇದೆ ಎಂದು ತಿಳಿದುಕೊಂಡು ಸಂತೃಪ್ತನಾಗಿರಲಿ ಎಂಬ ನಂಬಿಕೆಯಿರಬಹುದು. ಜೊತೆಗೆ ಇದೊಂದು ದನಗಳ ಹಬ್ಬವೆಂದೇ ಸಾರುವುದೇ ಆಗಿದೆ.

**ದೀಪಾವಳಿಯ ರಂಗೋಲಿ** ದೀಪಾವಳಿ ಹಬ್ಬದಲ್ಲಿ ಕೋಟ್ಟಿಗೆಯ ಎದುರು ಕೆಮ್ಮಣ್ಣು ಬಳಿದು ಎತ್ತಿನ ಹೆಜ್ಜೆಗಳನ್ನು ಬರೆಯಲಾಗುತ್ತದೆ. ಇದನ್ನು ತೂರೆ ಹೆಜ್ಜೆ ಎನ್ನುತ್ತಾರೆ. (ತೂರೆ, ತುರೆ, ತುರು-ಹಸು) ಪುರೋಹಿತರ ಕುತಂತ್ರಗಳಿಗೆ ಬಲಿಯಾದ ಬಲೀಂದ್ರ ಬರುವಾಗ ಭೂಲೋಕವೆಲ್ಲಾ ಸಮೃದ್ಧಿಯಾಗಿದೆ. ಎಂದು ತೋರಿಸಲೋಸುಗ ಈ ರೀತಿ ಕಾಲ್ನಡೆಗಳನ್ನು ಬರೆದಿಡಲಾಗುತ್ತದೆ. ಅಡಿಕೆಕಾಯಿ, ಎಲೆ ಇಟ್ಟು ಕರ್ಕಿ ಬ್ಯಾನಪ್ಪನನ್ನೂ ಮಾಡಿ ಓಂಗಾರದಿಂದ ಪೂಜಿಸಲಾಗುತ್ತದೆ. ಅದೇ ರೀತಿ ಜಗಲಿಯಲ್ಲಿ ಕೂಡ ಮಾಡಿರುತ್ತಾರೆ.

**ಕೌದಿ ಕಲೆ ಮತ್ತು ಕಸೂತಿ ಚಿತ್ರ.** ದೀವರ ಹೆಣ್ಣು ಮಕ್ಕಳಿಗೆ ಕೌದಿ ಹೊಲೆಯುವುದು ಒಂದು ವಿಶಿಷ್ಟ ಕಲೆಗಾರಿಕೆಯಾಗಿ ಸಿದ್ಧಿಸಿಲ್ಲವಾದರೂ ಕೌದಿಯ ಬಳಕೆ, ರಚನೆ ಅಲ್ಪ ಪ್ರಮಾಣದಲ್ಲಿ ಇದ್ದೇ ಇದೆ. ಲ್ಯಾರಿ ಮರಾಠಿ ಪದ ಹೊದಕಲು ಹೀಗೆಲ್ಲ ಕರೆಯುವ ಕೌದಿಯನ್ನು ಪಗಕಲು ನೂಲಿನಲ್ಲಿ ಹೊಲೆಯುತ್ತಾರೆ.

**ಕಾಗೋಡು ರೈತ ಸತ್ಯಾಗ್ರಹದಲ್ಲಿ ದೀವರ ಪಾತ್ರ**

"ಶತಮಾನಗಳಿಂದ ಭೂಮಾಲಿಕರ ದಬ್ಬಾಳಿಕೆ, ದೌರ್ಜನ್ಯ ಶೋಷಣೆಯಿಂದ ಬಡಗೇಣಿದಾರನ ಆಕ್ರೋಶ ದೇಶದಲ್ಲಿಯೇ ಮೊದಲಬಾರಿಗೆ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಕಾಗೋಡಿನಲ್ಲಿ ಆಸ್ಫೋಟಗೊಂಡಿತು. ಆಸ್ಫೋಟದ ಸದ್ದು ದೇಶದ ಉದ್ದಗಲಕ್ಕೂ ಕೇಳಿಸಿತು. ಹಲವು ವರ್ಷಗಳ ಹೋರಾಟದ ಫಲವಾಗಿ ಉಳುವವನೇ ಹೊಲದೊಡೆಯನಾಗುವಂತಾಯಿತು. ಈ ಹೋರಾಟದಲ್ಲಿ ನೂರಕ್ಕೆ ೯೦ ರಷ್ಟು ಜನರು ದೀವರು ಭಾಗವಹಿಸಿ ಹೋರಾಟ ಮಾಡಿ ಸಫಲರಾದುದು ಒಂದು ವಿಶೇಷವಾಗಿದೆ."[೯]

೧೯೫೧ ನೇ ಸಾಲಿನಲ್ಲಿ ನಡೆದ ಕಾಗೋಡ್ ಸತ್ಯಾಗ್ರಹ ಭಾರತ ದೇಶದ ಸ್ವಾತಂತ್ರ್ಯವಾದ ಮೇಲೆ ಪ್ರಗತಿಪರ ಭೂಸುಧಾರಣೆಗೆ ಚಾಲನೆ ನೀಡಿದ ಐತಿಹಾಸಿಕ ಘಟನೆಗಳಲ್ಲಿ ಪ್ರಮುಖವಾದುದೆಂದು ಪರಿಗಣಿಸಲಾಗಿದೆ. ಇಂಥ ಮಹತ್ವ ಪಡೆದಿರುವ ಈ ಹೋರಾಟವನ್ನು ಸಂಘಟಿಸಿ, ಪ್ರಾರಂಭಿಸಿ, ಯಶಸ್ವಿಯಾಗಿ ನಾಯಕತ್ವ ನೀಡಿದವರು

ಈ ಹೋರಾಟದಲ್ಲಿ ಭಾಗವಹಿಸಿ ಶೂರತನದಿಂದ ಹೋರಾಡಿದವರು ನೂರಕ್ಕೆ ೯೦ರಷ್ಟು ಜನ ದೀವರ ಜನಾಂಗಕ್ಕೆ ಸೇರಿದವರಾಗಿದ್ದರು ಎಂಬುದು ಈ ಸಂದರ್ಭದಲ್ಲಿ ನೆನೆಯಬಹುದಾದ ಮಹತ್ವದ ಅಂಶವಾಗಿದೆ.

ಕೆ.ಜಿ. ಒಡೆಯರ್‌ವರು ಕಾಗೋಡ್‌ನಲ್ಲಿಯೇ ದೊಡ್ಡ ಭೂಮಾಲೀಕರಾಗಿದ್ದರು. ಕಾಗೋಡು ವ್ಯಾಪ್ತಿಗೆ ಬರುವ ಪ್ರತಿಯೊಂದು ಹಳ್ಳಿಯಲ್ಲಿಯೂ, ನೂರಾರು ಎಕರೆ ಭೂಮಿಯನ್ನು ಹೊಂದಿದ್ದರು. ಇವರ ಭೂಮಿಯನ್ನು ದೀವರೇ ಗೇಣಿ ಮಾಡುತ್ತಿದ್ದರು. ಹೀಗಿರುವಾಗ ಆಗಿನ ಲೋಕ ಸಭಾಸದಸ್ಯರಾದ ಕೆ.ಜಿ. ಒಡಯರ್‌ರವರು ಗೇಣಿದಾರನ ಚಳುವಳಿಯನ್ನು ದಮನ ಮಾಡಲು ಕಾಂಗ್ರೆಸ್ ಸರ್ಕಾರದೊಟ್ಟಿಗೆ ಪಿತೂರಿ ಮಾಡಿದರು. ರೈತ ಸತ್ಯಾಗ್ರಹಿಗಳನ್ನು ದೇಶದ್ರೋಹಿಗಳೆಂಬಂತೆ ಸರ್ಕಾರ ಕಂಡಿತು. ಪರಿಣಾಮವಾಗಿ ಕೆ.ಜಿ. ಒಡಯರ್‌ರವರ ಕಾಗೋಡಿನ ಭೂಮಿಯಿಂದಲೇ ರೈತ ಚಳುವಳಿ ಪ್ರಾರಂಭವಾಯಿತು.

೧೯೪೨ ಕ್ವಿಟ್ ಇಂಡಿಯಾ ಚಳುವಳಿಗೆ ಮಹಾತ್ಮ ಗಾಂಧೀಜಿಯವರು ಕರೆ ನೀಡಿದಾಗ ಶಾಂತವೇರಿಗೋಪಾಲಗೌಡರು ಮತ್ತು ಎಚ್.ಗಣಪತಿಯಪ್ಪನವರು ಸ್ವಾತಂತ್ರ್ಯಚಳುವಳಿಯೊಂದಿಗೆ ಸೇರಿಕೊಂಡರು. ಪರಿಣಾಮವಾಗಿ ಅವರನ್ನು ತಮ್ಮ ಸರ್ಕಾರಿ ಹುದ್ದೆಯಿಂದ ವಜಾ ಮಾಡಲಾಯಿತು. ೧೯೪೭ ರಲ್ಲಿ ಬ್ರಿಟೀಷರ ನಿರ್ಗಮನದ ನಂತರ ಮೈಸೂರು ಮಹಾರಾಜರ ಆಡಳಿತವನ್ನು ವಿರೋಧಿಸಿ ಹೋರಾಟ ಪ್ರಾರಂಭವಾಯಿತು. ಅದರಲ್ಲೂ ಭಾಗವಹಿಸಿ ಮೂರು ತಿಂಗಳು ಸೆರಮನೆವಾಸ ಅನುಭವಿಸಿದರು. ಈ ಚಳುವಳಿಯಿಂದ ಜವಾಬ್ದಾರಿ ಸರ್ಕಾರ ಆಡಳಿತಕ್ಕೆ ಬಂದು ರಾಜಕೀಯವಾಗಿ ಸಂಪೂರ್ಣ ಸ್ವಾತಂತ್ರ್ಯ ದೊರೆಯಿತು.

ಆದರೂ ಕೂಡಾ ದೀವರ ಜನಾಂಗದಲ್ಲಿರುವ ಸ್ಥಿತಿಗತಿಗಳು ಬದಲಾಗಲಿಲ್ಲ. ಯಾಕೆಂದರೆ ಭೂಮಾಲಿಕರ ಭೂಮಿಯ ಮೇಲಿನ ಅಧಿಕಾರ ಹೋಗಲಿಲ್ಲ. ಅಧಿಕಾರದ ಬಲದಿಂದ ದೀವರ ಜನಾಂಗವನ್ನು ಭೂ ಒಡೆಯರು ಮೊದಲಿನ ರೀತಿ ನೀತಿಗಳಂತಯೇ ಆಳುತ್ತಿದ್ದರು. ಆದ್ದರಿಂದ ಈ ಭೂಮಾಲಿಕರ ಭೂಮಿಯ ಒಡೆತನ ದೀವರಿಗೆ ದೊರೆತರೆ ಗುಲಾಮಗಿರಿ ಹೋಗಲು ಸಾಧ್ಯ ಎಂಬುದು ಸ್ಪಷ್ಟವಾಗಿತ್ತು. ಪರಿಣಾಮವಾಗಿ ಎಚ್.ಗಣಪತಿಯಪ್ಪನವರು ದೀವರಲ್ಲಿ ಮುಂದಾಳುಗಳಿದ್ದವರನ್ನೆಲ್ಲಾ ಒಂದೆಡೆ ಸೇರಿಸಿ ಸಭೆ ನಡೆಸಲು ಪ್ರಾರಂಭಿಸಿದರು.

೧೯೪೮ ಜನವರಿಯಲ್ಲಿ ಸಾಗರ ತಾಲೂಕ್ ರೈತ ಸಂಘ ಸ್ಥಾಪನೆಯಾಯಿತು. ಡಿ.ಮೂಕಪ್ಪನವರು ಅಧ್ಯಕ್ಷರೆಂದೂ, ಎಚ್.ಗಣಪತಿಯಪ್ಪನವರು ಕಾರ್ಯದರ್ಶಿಯೆಂದೂ ಆಯ್ಕೆಯಾದರು. ಸತತವಾಗಿ ಸಂಘಟನೆಯ ಕೆಲಸ ೪ ವರ್ಷಗಳ ಕಾಲ ಎಡೆಬಿಡದೆ ನಡೆದವು. ಆಗ ದೀವರಿಗೆ ವಿಶ್ವಾಸ ಮೂಡಿ ಒಗ್ಗಟ್ಟಾದರು. ಭೂಮಾಲೀಕರಲ್ಲಿ ಸಂಘದ ಮೂಲ ಬೇಡಿಕೆ ಇಡಲು ಪ್ರಾರಂಭವಾಯಿತು.

**ರೈತ ಸಂಘದ ಬೇಡಿಕೆಗಳು**

೧. ಗೇಣಿ ಕೊಟ್ಟಿದ್ದಕ್ಕೆ ರಶೀದಿ ನೀಡಬೇಕು.

೨. ಮೂರು ಸೇರಿನ ಕೊಳಗದಲ್ಲಿಯೇ ಗೇಣಿಯನ್ನು ಪಡೆಯಬೇಕು. ಅಲ್ಲದೆ ಹೆಚ್ಚಿನ ಭತ್ತ ಸಲಿಗೆ ಭತ್ತ. ವಗ್ಗೈರು ಎಂದು ಚೀಲಕ್ಕೆ ಎರಡು ಮೂರು ಹೆಚ್ಚಿಗೆ ಪಡೆಯುವುದು ನಿಲ್ಲಬೇಕು.

೩. ವರ್ಷಕ್ಕೆ ೪ರಿಂದ ೧೦ ಆಳುಗಳು ಒಡೆಯರ ಬಿಟ್ಟಿ ಕೆಲಸದ ದುಡಿತವನ್ನು ರದ್ದು ಪಡಿಸಬೇಕು.

೪. ಅತೀವೃಷ್ಟಿ, ಅನಾವೃಷ್ಟಿಗಳಿಂದ ಬೆಳೆ ನಷ್ಟವಾದಾಗ ಗೇಣಿಯನ್ನು ಪಡೆಯಬಾರದು.

೫. ಸರ್ಕಾರದ ದಾಖಲಾತಿಯಲ್ಲಿ ಗೇಣಿದಾರರ ಹೆಸರು ಮತ್ತು ಪಹಣಿಗಳ ದಾಖಲೆ ನಮೂದಿಸಬೇಕು.

೬. ಹೆಚ್ಚು ಬೆಳೆದರೆ ಗೇಣಿಯನ್ನು ಹೆಚ್ಚಿಸಬಾರದು.

೭. ಪದೇ ಪದೇ ಜಮೀನು ಕೈ ಬದಲಾಯಿಸಬಾರದು.

೮. ಗೇಣಿಯ ಪ್ರಮಾಣ ಒಟ್ಟು ಬೆಳೆದ ೧/೩ ಕ್ಕಿಂತ ಹೆಚ್ಚಾಗಬಾರದು.

ಈ ರೀತಿಯ ಬೇಡಿಕೆಗಳು ಜನಮನ್ನಣೆ ಪಡೆದವು. ಸಾರ್ವಜನಿಕವಾಗಿ ಈ ನ್ಯಾಯವನ್ನು ಎಲ್ಲರು ಒಪ್ಪಿದರು. ಆದರೆ ಭೂಮಾಲೀಕರು ತಲೆ ತಲಾಂತರಗಳಿಂದ ನಡೆದು ಬಂದ ಗೇಣಿ ರೈತರ ಮೇಲೆ ಸರ್ವಾಧಿಕಾರದ ಜಗಿಯನ್ನು ಸಡಲಿಸಲು ಒಪ್ಪಲಿಲ್ಲ. ೧೯೫೧ ರಲ್ಲಿ ಬೇಡಿಕೆ ಈಡೇರುವವರೆಗೆ ಗೇಣಿ ಕೊಡಕೂಡದೆಂದು ಸಂಘದಿಂದ ಕರೆ ನೀಡಿದರು. ಚಳುವಳಿ ಪ್ರಾರಂಭವಾಯಿತು. ಭೂ ಒಡೆಯರು ತಮ್ಮ ಅಧಿಕಾರ ಚಲಾಯಿಸಲು ಪ್ರಾರಂಭಿಸಿದರು. ತಮ್ಮ ಭೂಮಿಗೆ ಗೇಣಿದಾರರು ಇಳಿಯಬಾರದೆಂದು ನಿರ್ಬಂಧಿಸಿದರು. ಇಡೀ ತಾಲೂಕಿನಲ್ಲಿ ಹಾಹಾಕಾರ ಉಂಟಾಯಿತು. ಪತ್ರಿಕೆಗಳ ತುಂಬ ಸುದ್ದಿಯಾಯಿತು. ಪ್ರತಿಗ್ರಾಮದಲ್ಲಿ ಗೇಣಿ ರೈತರಿಗೆ ಹೊಡೆತ, ಸುಳ್ಳು ಕೇಸುಗಳು, ಮುಂದಾಳುಗಳ ನಿಂದನೆಗಳು ಪ್ರಾರಂಭವಾದವು. ಉಳುಮೆಯ ಎತ್ತುಗಳು ಸರ್ಕಾರಿ ದೊಡ್ಡಿಗಳನ್ನು ಸೇರಿದವು.

ಮತ್ತೆ ಮಹಾಸಭೆ ಸಾಗರದಲ್ಲಿ ಸೇರಿಸಿದರು. ಮುಂದಿನ ಹೋರಾಟದ ರೂಪುರೇಷೆ ಸಿದ್ಧಪಡಿಸಲಾಯಿತು. ಎಲ್ಲಾ ಭೂ ಒಡೆಯರಿಗೆ ನಾಯಕರೂ, ಪ್ರಭಾವಶಾಲಿಗಳು ಆದವರೆಂದರೆ ಕಾಗೋಡ್‌ಒಡೆಯರು. ಅವರ ಭೂಮಿಯಲ್ಲಿಯೇ ಸತ್ಯಾಗ್ರಹ ಹೋರಾಟ ಪ್ರಾರಂಭಿಸುವುದು ಸೂಕ್ತವೆಂದು ಎಚ್.ಗಣಪತಿಯಪ್ಪನವರು ಸೂಚಿಸಿದರು. ಅದಕ್ಕೆ ಜನಮನ್ನಣೆ ಅನುಮೋದಿಸಿತು. ಸಹಸ್ರಾರು ಜನ ಗೇಣಿದಾರರು ಕಾಗೋಡಿನ ಒಡೆಯರ ಭೂಮಿಗೆ ನುಗ್ಗತೊಡಗಿದರು. ಕರ್ನಾಟಕದ ಜವಾಬ್ದಾರಿ ಸರಕಾರ ಕಾಗೋಡಿನ ಒಡೆಯರ ಸರಕಾರವೆಂಬಂತೆಯೇ ನಡೆದುಕೊಂಡು ತನ್ನೆಲ್ಲಾ ಪೋಲೀಸ್ ಬಲವನ್ನು ರೈತರ ಮೇಲೆ ಬಿಟ್ಟಿತು. ದಿನ, ದಿನಕ್ಕೂ ಹೆಚ್ಚುತ್ತಾಹೋದ ಪೋಲೀಸ್ ಹಿಂಸೆ, ಬಂಧನ, ಲಾಠಿಛಾರ್ಜ್, ಇಡೀ ರಾಜ್ಯದ ರಾಷ್ಟ್ರದ ಗಮನ ಸೆಳೆಯಿತು. ಸಂಘದ ರೈತರು ಸೆರೆಮನೆ ಸೇರಿದರು. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕಾಂಗ್ರೆಸ್ ಪಕ್ಷ ಇಲ್ಲಿ ಮಾತ್ರ ಸ್ವಾತಂತ್ರ್ಯಹರಣ ಮಾಡುವ ದಬ್ಬಾಳಿಕೆಯನ್ನೇ ಬೆಂಬಲಿಸಿತು. ಆದರೆ ಸತ್ಯದ ಮುಂದೆ ಅದಕ್ಕೆ ಸೋಲು ಪ್ರಾಪ್ತವಾಯಿತು. ನಂತರ ಗೇಣಿದಾರರ ಶಕ್ತಿಕುಂದಿದಾಗ ರಾಜ್ಯದಲ್ಲಿ ಹೊಸದಾಗಿ ಪ್ರಾರಂಭವಾಗಿದ್ದ ಸಮಾಜವಾದಿಪಕ್ಷ ರೈತರ ಬೆಂಬಲಕ್ಕೆ ಧಾವಿಸಿ ಬಂದು ತಮ್ಮ ರಾಜಕೀಯ ಪ್ರಭಾವ ಬೆಳೆಯಿಸಿಕೊಂಡಿತು. "ನಂತರ ಇಂದಿನವರೆಗೂ ಕಾಗೋಡ್ ಹೆಸರನ್ನು ಬಳಸಿಕೊಳ್ಳುತ್ತಾ ಅಂದಿನ ಸಮಾಜವಾದಿಗಳು ಅಧಿಕಾರ ಸ್ಥಾನಮಾನಗಳನ್ನು ಅನುಭವಿಸಿದರು. ಆದರೆ ಕಾಗೋಡ್ ಹೋರಾಟ ಮಾಡಿದ ಗೇಣಿ ರೈತರ ಸಾಮಾಜಿಕ ಸ್ಥಿತಿಗತಿ ಸುಧಾರಣೆಗಾಗಿ ಶ್ರಮಿಸಲಿಲ್ಲ ಎಂಬುದನ್ನು ಇಲ್ಲಿ ವಿಷಾದದಿಂದ ಹೇಳಬೇಕಾಗಿದೆ."[೨೦]

ಆದರೂ ಉಳುವವನೇ ಹೊಲದೊಡೆಯನಾಗಬೇಕೆಂಬ ಮೂಲ ಸಿದ್ಧಾಂತದ ಕೂಗೂ ದಿಕ್ಕು ದಿಕ್ಕಿಗೂ ಪ್ರಸರಿಸಿತು. ಜೊತೆಗೆ ಸಮಾಜವಾದಿ ಸಿದ್ಧಾಂತ ಕಾಗೋಡ್ ಸತ್ಯಾಗ್ರಹದ ಕಹಳೆಯ ಮೂಲಕವಾಗಿ ಹೊರಹೊಮ್ಮಲು ಕಾರಣವಾಯಿತು ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಡಿ.ದೇವರಾಜ್ ಅರಸ್‌ರವರ ಆಡಳಿತ ಕಾಗೋಡ್ ಹೋರಾಟಕ್ಕೆ ಪ್ರತ್ಯಕ್ಷಫಲನೀಡಿತು. ಗೇಣಿಪದ್ಧತಿ ರದ್ದಾಗಿ ಗೇಣಿದಾರರೆಲ್ಲಾ ಭೂಮಾಲೀಕರಾದರು. ದೀರ್ಘ ಹೋರಾಟ ಯಶಸ್ವಿಯಾಯಿತು. ಇದರಲ್ಲಿ ದೊರೆತ ಆರ್ಥಿಕ ಲಾಭಕ್ಕಿಂತ, ಸಾಮಾಜಿಕವಾಗಿ ಅನಿಷ್ಟ ಗುಲಾಮಪದ್ಧತಿಯ ಆಡಳಿತದಿಂದ ಹೊರಬಂದು

ಸ್ವತಂತ್ರವಾಗಿರುವುದೇ ಮಹತ್ವದ ಅಂಶವಾಗಿದೆ ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಒಟ್ಟಿನಲ್ಲಿ ಕಾಗೋಡು ರೈತ ಚಳುವಳಿ ಇಡೀ ದೇಶದ ಗಮನ ಸೆಳೆಯುವಲ್ಲಿ ಒಂದು ಮಹತ್ವದ ಸಾಧನೆ ಮೆರೆದಿದೆ. ಜೊತೆಗೆ ಶಾಂತವೇರಿ ಗೋಪಾಲಗೌಡರು ಮತ್ತು ಎಚ್.ಗಣಪತಿಯಪ್ಪನವರು ಹೋರಾಟದ ಸ್ಫೂರ್ತಿಯ ನೆಲೆಗಳಾಗಿದ್ದರೆಂಬುದನ್ನು ಈ ಮೂಲಕ ಸ್ಮರಿಸಿಕೊಳ್ಳಬಹುದು.

**ಅಡಿಟಿಪ್ಪಣಿಗಳು**

೧. ವೆಂಕಟರಾವ್ ಡಿ., (೧೯೮೫), ಕೃಷಿಬೆಳವಣಿಗೆ, ಪು. ೮

೨. ಅದೇ., ಪು. ೩೫

೩. ಸಸ್ಯಕಾಶಿ (ಬಾನುಲಿಪಾಠಗಳು) (೧೯೮೮), ಪು. ೧೨

೪. ಅದೇ., ಪು. ೧೮

೫. ವೆಂಕಟರಾವ್ ಡಿ., (೧೯೮೫), ಕೃಷಿಬೆಳವಣಿಗೆ, ಪು. ೩೭

೬. ಅದೇ., ಪು. ೩೫

೭. ಮೃತ್ಯುಂಜಯ ಹೊರಕೇರಿ., (೧೯೯೬), ರೈತಜಾನಪದ, ಪು. ೩

೮. ವಿಲಾಸ್‌ರಾವ್ ಶಂಕ್ರಪ್ಪ ಮಾಗಿ., (೧೯೯೪), ಇಸ್ರೇಲ್ ಕೃಷಿದರ್ಶನ, ಪು. ೧೦

೯. ಜಾನಪದ ಸಾಹಿತ್ಯದರ್ಶನ, (೧೯೮೭), ಪು. ೩೦

೧೦. ಮೃತ್ಯುಂಜಯ ಹೊರಿಕೇರಿ., (೧೯೯೬), ರೈತಜಾನಪದ, ಪು. ೬

೧೧. ವಿಲಾಸ್‌ರಾವ್ ಶಂಕ್ರಪ್ಪ ಮಾಗಿ., (೧೯೯೪), ಇಸ್ರೇಲ್ ಕೃಷಿದರ್ಶನ, ಪು.೧೮

೧೨. ಮೃತ್ಯುಂಜಯ ಹೊರಿಕೇರಿ., (೧೯೯೬), ರೈತಜಾನಪದ, ಪು.೫

೧೩. ಅದೇ., ಪು. ೬

೧೪. ಭೂಮಿಹುಣ್ಣಿಮೆ ಲೇಖನ, ದೀಪಾವಳಿ ವಿಶೇಷಾಂಕ, ೨೦೦೪,

೧೫. ಶ್ರೀಪತಿ ಕಲ್ಲೂರಾಯ., ಕೃಷಿರಂಗ ಒಂದು ಅವಲೋಕನ, ಪು. ೩೫

೧೬. ಬೋರಲಿಂಗಯ್ಯ ಹಿ.ಚಿ., ಎನ್. ಹುಚ್ಚಪ್ಪಮಾಸ್ತರ್., (೨೦೦೨), ಕಾಗೋಡು ಚಳುವಳಿ ಸುವರ್ಣಸಂಪುಟ,ಪು.೩೮

೧೭. ಗ್ರಾಮಸಂಸ್ಕೃತಿ ಮಾಲೆ-೧, (೨೦೦೦),ಗ್ರಾಮೀಣ ವೃತ್ತಿಗಳು, ಪು. ೭೮

೧೮. ವಿಶ್ವಕೋಶ, ಪು. ೬೧೭

೧೯. ಮಧುಗಣಪತಿರಾವ್ ಮಡೆನೂರು., ಆರ್ಯಈಡಿಗ ಸಮಾವೇಶ, ಪು. ೬೮

೨೦. ಗಣಪತಿಯಪ್ಪ ಹೆಚ್., ಹೇಳಿಕೆ,

## ಅಧ್ಯಾಯ ೫

## ದೀವರು ಮತ್ತು ಮಳೆ

ದೀವರಲ್ಲಿ ಮಳೆಸಂಬಂಧಿತ ನಂಬಿಕೆಗಳು

ದೀವರಲ್ಲಿ ಮಳೆ ಸಂಬಂಧಿತ ಆಚರಣೆಗಳು

ಆರಿದ್ರ ಮಳೆ ಹಬ್ಬ

ಗಂಗೆ - ಗೌರಿ ಕಥೆ: ನೀರು ಪೂಜೆ

ಮಳೆಯು ಇಡೀ ನಾಡಿನ ಜನರ ಜೀವನವನ್ನು ಬದುಕಿಸುವ ಜಲಮಾತೆ. ಮಳೆಯಿಂದ ಸಕಲ ಜೀವರಾಶಿಗಳು ತಮ್ಮ ಬದುಕನ್ನು ನಿರ್ವಹಿಸುತ್ತವೆ. ಮಳೆ ಇಲ್ಲದೆ ಮಾನವನೇ ಅಲ್ಲ ಯಾವುದೇ ಪ್ರಾಣಿಯು ಕೂಡ ಬದುಕಲು ಸಾಧ್ಯವಿಲ್ಲ. ಇದರಿಂದಾಗಿ ಇಡೀ ನಾಡಿನ ಪ್ರತಿಜೀವಿಯು ಗಂಗೆಯನ್ನು ಆಧರಿಸಿ ಆರಾಧಿಸಿ ಬದುಕಬೇಕಿದೆ. ಇಲ್ಲಿ ಪ್ರಮುಖವಾಗಿ ಮಳೆ ಮತ್ತು ರೈತರು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಮಳೆ ಬಂದರೆ ಬೆಳೆ. ಬೆಳೆ ಇದ್ದರೆ ರೈತರು ಮತ್ತು ನಾಡಿನ ಸಕಲ ಜನರು ಇದರ ಮೂಲಕ ಬದುಕುವವರಾಗಿದ್ದಾರೆ. ಹಾಗಾಗಿ ರೈತರು ಮಳೆ ಪರಸ್ಪರ ಸಾಮರಸ್ಯ ಕೆಲಸ ಕಾರ್ಯ ದ್ವಿಮುಖ ಪ್ರಕ್ರಿಯೆಗಳಾಗಿವೆ. ಇಡೀ ನಾಡಿನ ರೈತರು ಮಳೆಯನ್ನು ಭಕ್ತಿ, ಗೌರವ, ಮತ್ತು ಶ್ರದ್ಧೆಯಿಂದ ಆರಾಧಿಸುತ್ತಾರೆ. ವಿವಿಧ ರೈತ ಸಮುದಾಯಗಳೂ ಮತ್ತು ಬುಡುಕಟ್ಟು ಸಮುದಾಯಗಳು ಮಳೆಯನ್ನು ತಮ್ಮದೇ ಆದ ವಿಭಿನ್ನ ನೀತಿ ನಿಯಮಗಳ ಮೂಲಕ ತಾವು ಕಂಡು ಕೊಂಡ ಆಚರಣೆಗಳು ಮತ್ತು ನಂಬಿಕೆಗಳನ್ನು ಕುರಿತ ಹಬ್ಬ ಹರಿದಿನಗಳನ್ನು ಆಚರಿಸುವರು. ಅದರಲ್ಲಿ ಬುಡಕಟ್ಟು ಸಮುದಾಯವಾದ ದೀವರು ಮಳೆಯನ್ನು ಕುರಿತ ಕಲ್ಪನೆ ಮತ್ತು ಅದಕ್ಕೆ ಸಂಬಂಧಪಟ್ಟ ಎಲ್ಲಾ ನಿಯಮಾಚರಣೆಗಳನ್ನು ತಮ್ಮದೇ ಆದ ದೃಷ್ಟಿಕೋನದಲ್ಲಿ ಹೆಣೆದುಕೊಂಡಿದ್ದಾರೆ. ಅಂತಹ ಕೆಲವು ವಿಶಿಷ್ಟ ಆಚರಣೆಗಳನ್ನು ಈ ಸಮುದಾಯದಲ್ಲಿ ಕಾಣಲಾಗಿದೆ. ಮಳೆ ಒಂದು ವೈಶಿಷ್ಟ್ಯಪೂರ್ಣ ಪ್ರಕೃತಿಯ ಚಿತ್ರಣ ಮಳೆ ಜೀವನಕ್ಕೆ ಆಧಾರ 'ಜೀವನ' ಎನ್ನುವುದು ನೀರಿಗೆ ಇನ್ನೊಂದು ಹೆಸರು. ನೀರಿನ ಮೂಲವನ್ನು ದೇವಮಾತೃಕ, ನದಿಮಾತೃಕವೆಂದು ಎರಡು ಬಗೆಯಾಗಿ ವಿಂಗಡಿಸುತ್ತಾರೆ. ಇದರಲ್ಲಿ ದೇವಮಾತೃಕವೆನ್ನುವುದೇ ಮಳೆ. ಅಂತರ್ಜಲಕ್ಕಾದರೂ ಇದೇ ಮೂಖ್ಯ ಮೂಲವಾಗಿದೆ.

ಮಳೆಯನ್ನು ಕುರಿತಂತೆ ದೀವರು ಬೆಳೆಸಿಕೊಂಡ ನಂಬಿಕೆ, ಆಚರಣೆಗಳಿಗೂ ಮತ್ತು ಕೃಷಿಗೂ ನೇರ ಸಂಬಂಧವಿದೆ. ಮಾನವ ಅಲೆಮಾರಿಯಾಗಿದ್ದಾಗ ಕೃಷಿಕನಲ್ಲದ್ದರಿಂದ ಅವನಿಗಿರುತ್ತಿದ್ದ ನೀರಿನ ಅಗತ್ಯ ಕಡಿಮೆ ಇತ್ತು. ಆದರೆ ಕೃಷಿಕನಾಗಿ ಸ್ಥಿರ ಜೀವನ ಆರಂಭಿಸಿದ ಮೇಲೆ ಕಾಲ ಕಾಲಕ್ಕೆ ಮಳೆ ಬರಬೇಕಾದುದರ ಅಗತ್ಯವಿದೆ. ಅದು ಹೆಚ್ಚಾದರೆ ಅಥವಾ ಕಡಿಮೆಯಾದರೆ ಆಗುವ ವಿಕೋಪವೆಲ್ಲ ಅವನಿಗೆ ಅನುಭವ ವೇದ್ಯವಾಗುತ್ತ ಬಂದಿತು. ಮಳೆಯನ್ನು ಕುರಿತ ಪ್ರಾರ್ಥನೆ, ಲೆಕ್ಕಾಚಾರಗಳು, ಶಕುನಗಳು, ನಂಬಿಕೆಗಳು ಇತ್ಯಾದಿಗಳೆಲ್ಲ ಅಂದಿನಿಂದ ಬೆಳೆದು ಬಂದಿರುವ ಹಾಗೆ ಕಾಣುತ್ತದೆ.

''ಕೃಷಿ ಎನ್ನುವುದು ಜಗತ್ತಿನಲ್ಲಿ ಆರಂಭವಾಗಿ ಸುಮಾರು ಹತ್ತುಸಾವಿರ ವರ್ಷಗಳಾದವೆಂಬುದನ್ನು ತಿಳಿಯಬಹುದಾಗಿದೆ. ಹಾಗೆಯೇ ಮಳೆಯನ್ನು ಕುರಿತ ನಂಬಿಕೆ ಆಚರಣೆಗಳು ಇಷ್ಟೇ ಹಳೆಯವಾಗಿರಬೇಕು. ಈ ಆಚರಣೆಗಳು ಜಗದ ಎಲ್ಲಡೆ ಕಂಡು ಬರುತ್ತವೆ. ಆದರೆ ಮಳೆಯನ್ನು ಕುರಿತ ತೀವ್ರಲೆಕ್ಕಾಚಾರ, ಶಾಸ್ತ್ರಗಳು, ಭಾರತ, ಚೀನಾ, ಈಜಿಪ್ಟಿನಂತಹ ಕೆಲವೇ ದೇಶಗಳಲ್ಲಿ ಉತ್ತಮ ಬೆಳವಣಿಗೆ ಹೊಂದಿರುವಂತೆ ಕಾಣುತ್ತದೆ'' ಜೊತೆಗೆ ಕಾಡಿನ ಪರಿಕರಗಳನ್ನು ನಂಬಿ ಬದುಕುವ ಬುಡಕಟ್ಟು ಸಮುದಾಯಗಳು ಮತ್ತು ಗ್ರಾಮೀಣ ಪ್ರದೇಶಗಳಲ್ಲಿನ ಎಲ್ಲ ಮಳೆ ಸಂಬಂಧಿ ಆಚರಣೆಗಳಿಗೂ ಕೃಷಿಕರು ಮತ್ತು ಕೃಷಿ ಕಾರ್ಮಿಕರೇ ಮೂಲ. ಈ ಆಚರಣೆಗಳ ಏರ್ಪಾಟುಗಳನ್ನು ಮಾಡಲು ಮುನ್ನುಗ್ಗುವವರೂ ಅವರೇ ಆಗಿದ್ದಾರೆ. ಮತ್ತು ವಿಭಿನ್ನ ಮಳೆ ಸಾಂಕೇತಿಕ ಆಚರಣೆಗಳನ್ನು ಹೊಂದಿರುವವರು ಅವರೆ ಆಗಿರುತ್ತಾರೆ. ಆದರೆ ನೀರು ಎಲ್ಲರ ಜೀವನಾಧಾರವಾದ್ದರಿಂದ ಈ ಆಚರಣೆ ವ್ಯವಸ್ಥೆಗಳಲ್ಲಿ ಇಡೀ ಗ್ರಾಮ ಸಮುದಾಯ ಪಾಲ್ಗೊಳ್ಳುತ್ತದೆ.

## ದೀವರಲ್ಲಿಯ ಮಳೆಯ ನಂಬಿಕೆಗಳು

ವಿವಿಧ ಮಳೆಗಳನ್ನು ಕುರಿತಂತೆ ರೈತರಲ್ಲಿ ಮತ್ತು ಬುಡುಕಟ್ಟು ಸಮುದಾಯವಾದ ದೀವರಲ್ಲಿ ನಿರ್ದಿಷ್ಟ ಲೆಕ್ಕಾಚಾರ ಪದ್ಧತಿ ಮೊದಲಿಂದಲು ಬೆಳೆದು ಬಂದಿದೆ. ಇದಕ್ಕೆ ಸಂಬಂಧಪಟ್ಟಂತೆ ದೀವರ ಅನುಭವ ಆಧಾರಿತ ನಂಬಿಕೆಗಳು ಬೆಳೆದು ಬಂದಿವೆ. ದೀವರು ಮಳೆಯ ರಾಶಿಗಳನ್ನು ಹೇಗೆ ನೋಡುತ್ತಾರೆಂಬುದವುದನ್ನು ಈ ಮೂಲಕ ತಿಳಿಯಲಾಗಿದೆ.

ಬುಡಕಟ್ಟು ಸಮುದಾಯದವರಾದ ದೀವರಿಗೆ ಎಲ್ಲಾ ಮಳೆಗಳು ಬಹಳ ಮುಖ್ಯ. ಮಳೆಗಳನ್ನು ತಮ್ಮದೇ ಆದ ಅನುಭವ ಮತ್ತು ರಾಶಿಚಕ್ರದ ಮೂಲಕ ಗುರುತಿಸಿಕೊಂಡಿರುತ್ತಾರೆ. ರಾಶಿಚಕ್ರದಲ್ಲಿ ಅಶ್ವಿನಿಯಿಂದ ರೇವತಿಯುವರೆಗೆ ಇಪ್ಪತ್ತೇಳು ನಕ್ಷತ್ರಗಳು ಇವೆ. ಈ ಎಲ್ಲಾ ನಕ್ಷತ್ರಗಳ ಹೆಸರಲ್ಲಿ ಮಳೆಯನ್ನು ಹೇಳಲಾಗುತ್ತದಾದರೂ ಅದರಲ್ಲಿ ನಿಜವಾಗಿ ಮಳೆಯಾಗುವುದು ಮೊದಲ ಹದಿನೈದು ನಕ್ಷತ್ರಗಳ ಅವಧಿಯಲ್ಲಿ ಮಾತ್ರ ಎಂದು ದೀವರ ಅಭಿಪ್ರಾಯವಾಗಿದೆ. ಸೂರ್ಯ ಒಂದು ನಕ್ಷತ್ರ ರಾಶಿಯನ್ನು ಪ್ರವೇಶಿಸಿ ಅಲ್ಲಿರುವ ಕಾಲದಲ್ಲಿ ಆಗುವ ಮಳೆಯನ್ನು ನಕ್ಷತ್ರದ ಮಳೆ ಎನ್ನಲಾಗುತ್ತದೆ. ೨೭ ನಕ್ಷತ್ರಗಳ ಹೆಸರಲ್ಲಿ ಮಳೆಯನ್ನು ಹೇಳಿದರೂ ಇವುಗಳ ಪೈಕಿ ಮೊದಲ ಹದಿನೈದು ನಕ್ಷತ್ರಗಳನ್ನು ಮಾತ್ರ ಅಶ್ವಿನಿಯಿಂದ ಸ್ವಾತಿಯವರೆಗೆ ಗಂಭೀರವಾಗಿ ಮಳೆ ನಕ್ಷತ್ರಗಳೆಂದು ಪರಿಗಣಿಸುತ್ತಾರೆ. ಅಂದರೆ ಈ ನಕ್ಷತ್ರಗಳ ಉದಯ ಅಸ್ತದ ನಡುವಣ ಅವಧಿಯಲ್ಲಿ ವಿವಿಧ ಪ್ರಮಾಣದಲ್ಲಿ ಮಳೆ ಬೀಳುತ್ತದೆ ಎಂಬುದು ದೀವರ ಅನುಭವಟ ಮಾತಾಗಿದೆ. ಈ ೧೫ ನಕ್ಷತ್ರಗಳ ಮಳೆಯ ಕಾಲ ಎಂದರೆ ಚೈತ್ರದಿಂದ ಹಿಡಿದು ಕಾರ್ತಿಕದ ವರೆಗಿನ ಕಾಲ (ಏಪ್ರಿಲ್ ನವಂಬರ್) ಇದರಲ್ಲಿ ಎಲ್ಲವೂ ಮುಖ್ಯ ಅಲ್ಲ.

ಎಲ್ಲಾ ಮಳೆಗಳನ್ನು ವಿಶೇಷವಾಗಿ ದೀವರು ಲೆಕ್ಕಕ್ಕೆ ಹಿಡಿಯುವರು. ಅದರಲ್ಲಿ ಪ್ರಮುಖವಾಗಿ ಅಶ್ವಿನಿ, ಭರಣಿ, ಕೃತಿಕಾ, ರೋಹಿಣಿ, ಮೃಗಶಿರ, ಆರಿದ್ರಾ, ಪುನರ್ವಸು, ಪುಷ್ಯ, ಆಶ್ಲೇಷ ಮತ್ತು ಮಾಘ ನಕ್ಷತ್ರಗಳ ಅವಧಿಯಲ್ಲಾಗುವ ಮಳೆಗಳು ಮುಖ್ಯವಾದವು. ಇವುಗಳಲ್ಲಿ ಮೊದಲ ೫ನ್ನು ಅಶ್ವಿನಿ, ಭರಣಿ, ಕೃತಿಕಾ, ರೋಹಿಣಿ, ಮೃಗಶಿರಾ ಮೃಗಪಂಚಕ ಎನ್ನುತ್ತಾರೆ. ಈ ಶಬ್ದಗಳು ಸಾಮಾನ್ಯ ರೈತರಲ್ಲೂ ಚಾಲ್ತಿಯಲ್ಲಿವೆ.

ಚೈತ್ರದಿಂದ ಶ್ರಾವಣದ ಕೊನೆವರೆಗೆ ಈ ಹತ್ತು ಮಳೆಗಳು ಬೀಳುತ್ತವೆ. ಮುಖ್ಯವಾದ ಕೃಷಿ ಕಾರ್ಯಗಳು ಬೆಳೆಗಳ ಫಲ-ಎಲ್ಲ ನಿರ್ಣಯವಾಗುವುದು ಈ ಮಳೆಗಳಿಂದ, ಇಲ್ಲಿಂದ ಮುಂದಿನ ಐದು ಮಳೆಗಳು ಹುಬ್ಬಿ, ಉತ್ತರ, ಹಸ್ತ, ಚಿತ್ತ, ಸ್ವಾತಿ ಪೂರ್ಣ ಖಚಿತವಲ್ಲ. ಇವುಗಳ ಪ್ರಮಾಣ ಪ್ರದೇಶವಾರಾಗಿ ಬೇರೆಯದಾಗಿ ಆಯಾ ರೈತರು ಅದಕ್ಕೆ ತಕ್ಕ ಹಾಗೆ ತಮ್ಮ ಕೆಲಸದ ಸ್ವರೂಪವನ್ನು ನಿರ್ಧರಿಸಿಕೊಂಡಿರುತ್ತಾರೆ. ಸ್ವಾತಿಯ ನಂತರವಂತೂ ಮಳೆ ಇಲ್ಲ ಆದ್ದರಿಂದಲೇ "ಸ್ವಾತಿ ಮಳೆ ಆದಮ್ಯಾಲೆ ಯಾವ ಮಳೆ" ಎಂಬ ಗಾದೆಯನ್ನು ದೀವರಲ್ಲಿ ಕಾಣಬಹುದಾಗಿದೆ.

ಮಳೆಯನ್ನು ಕುರಿತು ಹಲವು ನಂಬಿಕೆಗಳು ರೈತರ ಜೀವನ ಕ್ರಮವನ್ನು ಕೆಲಸದ ಸ್ವರೂಪವನ್ನು ರೂಪಿಸಿವೆ. ಮಳೆಯಷ್ಟೇ ಅಲ್ಲ ಅದಕ್ಕೆ ಕಾರಣವಾದ ಮೋಡ, ಗುಡುಗು, ಸಿಡಿಲು, ಮಿಂಚುಗಳ ಬಗ್ಗೆಯು ದೀವರಲ್ಲಿ ಹಲವು ಬಗೆಯ ನಂಬಿಕೆಗಳಿವೆ. ಮೋಡಗಳು ಕಟ್ಟಿಕೊಳ್ಳುವ ದಿಕ್ಕು ಹಾಗೂ ಅವುಗಳ ದವಣೆಯನ್ನು ಅನುಲಕ್ಷಿಸಿ ಮುಂದಿನ ಮಳೆ ದಿನಗಳು ಹೇಗೆ ಇರುತ್ತವೆ ಎಂದು ದೀವರನ್ನೊಳಗೊಂಡ ಎಲ್ಲಾ ರೈತ ಸಮುದಾಯಗಳ ನಂಬಿಕೆಯಾಗಿದೆ.

ಉತ್ತರ ಕನ್ನಡ ಜಿಲ್ಲೆಯ ಜನ "ಕಡಲ ಮೇಲೆ ಮೋಪರ್ಕಟ್ಟಿದರೆ ಮಳೆ ಇಲ್ಲ ಗುಡ್ಡೆ ಮೇಲೆ ಕಟ್ಟಿದರೆ ಮಳೆ ಉಂಟು" ಎಂದು ನಂಬಿದ್ದಾರೆ. ಇದಕ್ಕೆ ಸಂವಾದಿಯಾದ ನಂಬಿಕೆ ಶಿವಮೊಗ್ಗ ಜಿಲ್ಲೆ ಮತ್ತು ಮೈಸೂರು ಜಿಲ್ಲೆಯಲ್ಲಿದೆ. ಅದೇ ರೀತಿ ತುಂಬ ಮುಗಿಲುಗಳು ಒಂದೆಡೆ ಸೇರಿದರೆ ಮಳೆಯಾಗುತ್ತದೆ "ಕೋಟೆ ಮುಗಿಲೆದ್ದರೆ ಮಳೆ" ಎಂಬ ನಂಬಿಕೆಯು ಉತ್ತರ ಕನ್ನಡ ರೈತರಲ್ಲುಂಟು.[೨]

ವಿವಿಧ ಮಳೆಗಳನ್ನು ಕುರಿತ ದೀವರ ನಂಬಿಕೆಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ನೋಡಬಹುದು. ಅಶ್ವಿನಿ ಮಳೆ ಅಡಿಕೆ ತೆಂಗಿಗೆ ಕೇಡು "ಅಶ್ವಿನಿ ಸಸ್ಯ ನಾಶಿನಿ" ಎಂಬ ನಂಬಿಕೆಗಳಿರುವಂತೆಯೇ (ಉ.ಕ ಮತ್ತು ದ.ಕ) ಈ ಮಳೆ ಅರಿಶಿಣಕ್ಕೆ ಒಳ್ಳೆಯದೆಂಬ ನಂಬಿಕೆಯೂ ಇದೆ. ಆದರೂ ಈ ಮಳೆ ವಿಫಲವಾಗಬಾರದೆನ್ನುವುದು ರೈತರ ಅಭಿಪ್ರಾಯವಾಗಿದೆ. ಯಾಕೆಂದರೆ ಇದು ಹೋದರೆ ಮುಂದಿನ ಆರು ಮಳೆಗಳೂ ಸರಿಯಾಗಿ ಬರುವುದಿಲ್ಲ ಎಂಬ ನಂಬಿಕೆ ಇದೆ. ಮಲೆನಾಡಿನ ದೀವರಲ್ಲಿ ಇದೇ ಅರ್ಥದ ಅಶ್ವಿನಿ ಹೋದ್ರೆ ಮೇಲಿನ ಮಳೆಗಳೂ ಇಲ್ಲ ಎಂಬ ಗಾದೆ ಬಳಕೆಯಲ್ಲಿದೆ.

ಆದರೆ "ಭರಣಿ ಮಳೆ ಬಗ್ಗೆ ದೀವರನ್ನೊಳಗೊಂಡಂತೆ ಕರ್ನಾಟಕದ ಎಲ್ಲ ಕಡೆ ವಿಶೇಷವಾಗಿ ಅದರಲ್ಲೂ ಮಲೆನಾಡಿನ ರೈತರಲ್ಲಿ ಹೆಚ್ಚಿನ ಆದರವಿದೆ. "ಈ ಮಳೆ ಧರಣೀಗೊಳ್ಳೋದು" ಎಂದು ತುಮಕೂರು ಜಿಲ್ಲೆಯಲ್ಲಿ ನಂಬಿಕೆ ಇದ್ದರೆ, ಕೋಲಾರದಲ್ಲಿ "ಭರಣಿ ಬಂದರೆ ಧರಣಿ ಎಲ್ಲಾ ಬೆಳೆ" ಎನ್ನುತ್ತಾರೆ. ಉತ್ತರ ಕರ್ನಾಟಕದಲ್ಲಿ 'ಭರಣಿ ಬಂಗಾರದ ಕರಣಿ' ಎನ್ನುತ್ತಾರೆ. ಶಿವಮೊಗ್ಗ ಜಿಲ್ಲೆಯಲ್ಲಿ "ಭರಣಿ ಮಳೆ ಚಿನ್ನದ ಮಳೆ" ಅನ್ನುತ್ತಾರೆ. ಹೀಗೆ ಭರಣಿ ಮಳೆಯು ಎಲ್ಲ ವಿವಿಧ ಬೆಳೆಗಳಿಗೂ ಒಳಿತೆಂದು ಭಾವಿಸುತ್ತಾರೆ."[೩] ಆದರೆ ವಾಸ್ತವವಾಗಿ ಏಪ್ರಿಲ್ ಕೊನೆ ಮೇ- ಆರಂಭದಲ್ಲಿ ಬೀಳುವ ಈ ಮಳೆ ಕೃಷಿಕ ಕಾರ್ಯಕ್ಕೆ ಭೂಮಿಯನ್ನು ಹದಗೊಳಿಸುವ ಕೆಲಸ ಮಾಡುತ್ತದೆ. ಬೇಸಿಗೆ ಬೆಳೆ ಇರುವಲ್ಲಿ ಈ ಮಳೆ ಫಸಲಿನ ವಿಷಯದಲ್ಲೂ ನಿರ್ಣಾಯಕ ಪಾತ್ರ ವಹಿಸುತ್ತದೆ.

ಕೃತಿಕೆ ಮಳೆಯು ಎಲ್ಲ ಬೆಳೆಗಳಿಗೂ ಒಳ್ಳೆಯದು ಹಾಗೂ ಕಾಡಿನಲ್ಲಿ ಹುಲ್ಲು ಸಮೃದ್ಧವಾಗಿ ಬೆಳೆದು ಪಶುಗಳಿಗೂ ಆಹಾರ ಸಮೃದ್ಧಿಯನ್ನುಂಟು ಮಾಡುತ್ತದೆ ಎಂಬುದನ್ನು ದೀವರು ಮನಗಂಡಿದ್ದಾರೆ. ಆದರೆ ಇದರ ಬಗ್ಗೆ "ಕೃತ್ತಿಕ ಮಳೇನ ಕೇಳುವರೆ" ಇಲ್ಲ ಎಂಬ ಗಾದೆಯೊಂದಿದೆ. ಇದು ಕರ್ನಾಟಕದ ಎಲ್ಲಾ ಭಾಗದಲ್ಲಿದ್ದು, ಅಷ್ಟೇನು ಲೆಕ್ಕಕ್ಕಿಲ್ಲದ್ದು ಎಂಬ ಭಾವನೆ ಮೂಡಿಸಿದರೆ "ಕೃತ್ತಿಕ ಬೀಳ್ದಿದ್ರೆ ಬಾಯಿಗೆ ಮೃತ್ತಿಕೆ" ಎಂಬ ಇನ್ನೊಂದು ಗಾದೆಯೂ ಇದೆ. ಈ ಎರಡನೇ ಗಾದೆ ಪ್ರಾಸಪ್ರಿಯತೆಯಿಂದ ಬಂದಿರಬಹುದಾದರೂ ದೀವರನ್ನೊಳಗೊಂಡ ಎಲ್ಲಾ ರೈತರು ಈ ಮಳೆಯನ್ನು ನಂಬಿದ್ದಾರೆ. ರೋಹಿಣಿ- ದೀವರಿಗೆ ಅಗತ್ಯವಾದ ಮಳೆ. ಮೇ ಕೊನೆ ವಾರದ್ದು, ಎಲ್ಲಡೆ ಬಿತ್ತನೆಗೆ ಸಿದ್ಧ ಮಾಡಿಕೊಳ್ಳುವ ಕಾಲ- ಈ ಮಳೆ ಆಗದಿದ್ರೆ ಬಿತ್ತನೆಗೆ ತಡೆ. ಈ ಮಳೆ ಸರಿಯಾಗಿ ಆದ್ರೆ ಫಸಲು ಉತ್ತಮವಾಗಿರುತ್ತದೆಂದು ದೀವರ ನಂಬಿಕೆ. ಈ ದಿನಗಳಲ್ಲಿ ಬಿತ್ತಿದರೆ ಬೆಳೆಗಳಿಗೆ ರೋಗವಿಲ್ಲವೆಂದು ಕೆಲವು ಕಡೆ ನಂಬಿಕೆ ಇರುವುದನ್ನು ಕಾಣಬಹುದಾಗಿದೆ.

ಮೃಗಶಿರ- ಎಳ್ಳು ಭತ್ತಗಳಿಗೆ ಒಳ್ಳೆಯದೆಂದು ದೀವರ ನಂಬಿಕೆ. ಈ ದಿನಗಳಲ್ಲಿ ಪೈರನ್ನು ದನಗಳು ಮೇಯ್ದರೆ ನಷ್ಟವೇನಿಲ್ಲವೆಂಬ ನಂಬಿಕೆ ಅವರದಾಗಿದೆ. ಹೊಸ ಹೂಗಿಡಗಳನ್ನು ನೆಡಲು ಟೊಂಗೆಗಳನ್ನು ಕತ್ತರಿಸಲು ಇದು ಸಕಾಲವಂತೆ. ಈ ನಕ್ಷತ್ರದ ನಾಲ್ಕು ಐದನೇ ಚರಣಗಳಲ್ಲಿ ಮಿಂಚು ಕಾಣಿಸಿದರೆ ಮುಂದಿನ ಮಳೆಗಳೆಲ್ಲವೂ

ಸೂಸೂತ್ರವಾಗುವುದಂತೆ. ಒಂದನೇ ಪಾದದಲ್ಲಿ ಮಾತ್ರ ಮಿಂಚು ಕಾಣಿಸಿದ್ರೆ, ಆರಿದ್ರಾ, ಪುನರ್ವಸು ಮಳೆ ಬರುವುದಿಲ್ಲ. ಹೀಗೆ ದೀವರ ರೈತರಲ್ಲಿ ನಂಬಿಕೆ ಇದೆ.

ವ್ಯವಸಾಯದ ಯಶಸ್ಸಿಗೆ ತುಂಬ ಮುಖ್ಯವಾದ ಮಳೆ 'ಆರಿದ್ರಾ'. ಆದರೆ ಆರಿದ್ರ ಆಗದಿದ್ರೆ ದರಿದ್ರ; ಈ ಮಳೆಯಂತೆಯೆ ಮುಂದಿನ ಆರು ಮಳೆಗಳು ಬರುತ್ತವೆ. ಎಂಬುದು ದೀವರ ನಂಬಿಕೆ. ಈ ಮಳೆಯ ಆರಂಭದಲ್ಲಿ ಗುಡುಗು ಮಿಂಚುಗಳಾದರೆ ಮುಂದಿನ ಆರು ಮಳೆಗಳು ಕೈಕೊಡುತ್ತವೆಂದು ಶಿವಮೊಗ್ಗ ಜಿಲ್ಲೆಯ ಕೆಲ ಭಾಗದಲ್ಲಿನ ರೈತರ ನಂಬಿಕೆ.

ಮಲೆನಾಡಿನಲ್ಲಿ ಈ ಮಳೆಯಿಂದ ಬಿರುಸಾದ ಮಳೆಗಾಲ ಆರಂಭ ಆದ್ದರಿಂದ ಇದಕ್ಕೆ ಸ್ವಾಗತ ಕೋರುವ 'ಮಳೆ ಹಬ್ಬದ' ಆಚರಣೆಯೊಂದು ಸಾಗರ ತಾಲೂಕಿನ ದೀವರಲ್ಲಿ ಆಚರಣೆಯಲ್ಲಿದೆ. (ಶಿವಮೊಗ್ಗ ಜಿಲ್ಲೆ) ಈ ಮಳೆ ದಿನಗಳಲ್ಲಿ ಬರುವ ತುಂಬ ಶೀತದಿಂದ ಕೂಡಿದ ಗಾಳಿಯನ್ನು ಆದಿಗಾಳಿ ಎನ್ನುತ್ತಾರೆ.

ಪುನರ್ವಸ್ಸು, ಪುಷ್ಯ ಮಳೆಗಳನ್ನು ಒಟ್ಟಾಗಿ ಹಿರೇಪುಷ್ಯ ಚಿಕ್ಕಪುಷ್ಯ ಎಂದು ಕರೆಯುವುದು ದೀವರಲ್ಲಿದೆ. (ಶಿವಮೊಗ್ಗ ಜಿಲ್ಲೆ) ಇದನ್ನೆ ಸಣ್ಣಪುಂಡ ದೊಡ್ಡಪುಂಡ ಎಂದು ಕರೆಯುವುದು ದೀವರಲ್ಲಿಯ ವಾಡಿಕೆಯಾಗಿದೆ. ಇವು ಒಂದಕ್ಕೊಂದು ಪೂರಕವಾಗಿ ಒಂದಕ್ಕಿಂತ ಒಂದು ಬಿರುಸಾಗಿ ಬರುತ್ತವೆಂದು ಅಲ್ಲಿನ ರೈತರ ಅನುಭವವಾಗಿದೆ. ''ನೀ ನೇಗಿಲ ನೊಗಸಂದ್ರೆ ನಾ ಎತ್ತು ಹೂಟಿ ತಗಂಬರ್ತಿನಿ'' ಎಂದು ಪುಷ್ಯ ಪುರ್ನವಸುವಿಗೆ ಹೇಳುತ್ತದಂತೆ. ಪುಷ್ಯ ಮಳೆ ಹೆಚ್ಚು ಬಂದರೆ ಬೆಳೆಗಳಿಗೆ ಹುಳು ಬೀಳುತ್ತದೆಂಬುದು ರೈತರ ಅಭಿಪ್ರಾಯವಾಗಿದೆ. ಇದು ಫಸಲಿಗೆ ವಿಫಲತೆಯನ್ನು ತಂದು ಕೊಡುತ್ತದೆನ್ನುವ ನಂಬಿಕೆ ಹಲವು ಕಡೆಯಲ್ಲಿದೆ. ''ಅಸಲಿ ಮಳೆಗೆ ನೆಲಪೆಲ್ಲ ಹಸನೆ'' ಅಸಲೆ ಮಳೆ ಬಿದ್ದರೆ ಭೂಮಿಯೆಲ್ಲಾ ಹಸಿರು, ''ಅಸಲೆ ಮಳೆ ಕೈಕೊಟ್ಟು ಮೀಸಲಾಯ್ತು ಬೆಳೆ'' ಅಸ್ಲಿ ಮಳೆಗೆ ಅಸಲು ಬಡ್ಡಿ ಕೂಡೇ ಬರುತ್ತವೆ ಎಂಬಂಥ ಗಾದೆಗಳೆಲ್ಲ ಇದನ್ನು ಹೇಳುತ್ತವೆ. ಈ ಮಳೆ ತಪ್ಪಿ ಹೋದರೆ ಧಾರಣೆ ಏರುತ್ತೆ ಎಂಬ ನಂಬಿಕೆ ಅವರದಾಗಿದೆ.

ಹತ್ತನೆಯ ಮಳೆಯೇ ಮಗಿ ಮಳೆ. ಇದು ಎಷ್ಟು ಹೊಯ್ದರೂ ಒಳ್ಳೆಯದೇ ಎಂಬ ಭಾವನೆ ದೀವರದಾಗಿದೆ. ''ಮಗೆ ಮಳೆ ಹುಯ್ದ್ರೆ ಕೇಡಲ್ಲ'' ''ಮನೆ ಮಗ ಬಂದ್ರೆ ಕೇಡಲ್ಲ'' ''ಮಗೆ ಮಳೆ ಹುಯ್ಯೋ ಮಗೆ ಗಾತ್ರದ ತೆನೆ'' ''ಮಗೆ ಮಳೆ ಬಿದ್ರೆ ಮುಗಿಲು ನೀರು ಸುರುವಿದಾಂಗ'' ಇತ್ಯಾದಿ ಗಾದೆಗಳು ಈ ನಂಬಿಕೆಗೆ ಸಾಕ್ಷಿಗಳಾಗಿವೆ. ಮಗೆ ಪಂಚಕದ ಕೊನೆ ಮಳೆ ಆಗಿರುತ್ತದೆ.

ಹುಬ್ಬಿ ಮಳೆಯ ಬಗ್ಗೆ ಬುಡುಕಟ್ಟು ಸಮುದಾಯವಾದ ದೀವರನ್ನೊಳಗೊಂಡ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ತರದ ನಂಬಿಕೆಗಳಿವೆ. 'ಈ ಮಳೆ ಬೆಳೆಗೆ ಒಳ್ಳೆಯದು' ಎಂಬ ನಂಬಿಕೆ ದೀವರಲ್ಲಿದೆ. ಈ ಮಳೆಯಿಂದ ಕ್ರಿಮಿಕೀಟಗಳು ಮತ್ತು ಗುಬ್ಬಿಗಳು ಸಾಯುತ್ತವೆ ಎಂಬ ನಂಬಿಕೆ ಇದೆ. ಈ ಮಳೆಯ ಅವಧಿಯಲ್ಲಿ ಬಿತ್ತಿದರೆ ಏನು ಬೆಳೆ ದಕ್ಕದು ಎಂಬ ಭಾವನೆಯೂ ಇನ್ನೂ ಕೆಲವು ಕಡೆ ಇದೆ.

ಉತ್ತರೆ ಮಳೆ ಬಗ್ಗೆ ''ಉತ್ತರೆ ಬೀಳದಿದ್ರೆ ಹೆತ್ತವ್ವ ತೊರೆದ್ಹಾಂಗೆ'' ಆದರೆ ಉತ್ತರಿ ಆಗದಿದ್ರೆ ಕತ್ತರಿ ''ಉತ್ತರಿ ಮಳೆ ಬಂದರೆ ಕೂತಲ್ಲಿ ಕೂಳು'' ಈ ಎಲ್ಲ ಗಾದೆಗಳು ಈ ಮಳೆ ತುಂಬ ಅಗತ್ಯ, ಫಲದಾಯಕ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತವೆ. ಸಾಧ್ವಿಯೊಬ್ಬರು ಗಂಡನ ಮನೆಯ ಉಪದ್ರವದಿಂದಾಗಿ ಆತ್ಮಹತ್ಯೆ

ಮಾಡಿಕೊಂಡು ಉತ್ತರೆ ಮಳೆಯೊಳಾ ಹೋದಳೆಂಬ ಕಥೆ ಹೇಳುವ ಉತ್ತರದೇವಿ ಹಾಡುಗಳು ಜನಪದರಲ್ಲಿ ದೊರೆಯುತ್ತವೆ. ಹೀಗೆ ವಿವಿಧ ಮಳೆಗಳ ಬಗ್ಗೆ ದೀವರ ರೈತರಲ್ಲಿ ಹಲವಾರು ತರಹ ಅಭಿಪ್ರಾಯಗಳಿದ್ದು ಅವು ಅವರ ಬೇಸಾಯದ ಕ್ರಮವನ್ನು ನಿರ್ಧರಿಸುತ್ತವೆ.

ಮಳೆ ಬರುವಾಗ ಶಕುನ ನೋಡುವ ಹಲವಾರು ಪದ್ಧತಿಗಳು ದೀವರನ್ನೊಳಗೊಂಡ ಎಲ್ಲಾ ರೈತರಲ್ಲಿ ಬೆಳೆದು ಬಂದಿವೆ. ಒಂದು ತುಂಬಿದ ಚರಗಿಯ ಬಾಯಿಗೆ ಎಲೆ ಅಂಟಿಸಿ, ಅದನ್ನು ತಲೆ ಕೆಳಗಾಗಿ ಹಿಡಿದು ನೆಡೆಯುತ್ತಾ, ಯಾವಾಗ ಆ ಎಲೆ ಬೀಳುತ್ತೋ ಅಷ್ಟು ಕಾಲದಂತರದಲ್ಲಿ ಮಳೆ ಎಂದು ಊಹಿಸುವ ಒಂದು ವಿಧಾನ ಇದೆ. ಹರವಿದ ಜೋಳದ ವೃತ್ತದ ಮೇಲೆ ತುಂಬಿದ ಕೊಡವನ್ನಿಟ್ಟು, ಸಂಜೆ ಹೊತ್ತು ಐದು ಮಂದಿ ಮುತ್ತೈದೇರು ಅದರ ಸುತ್ತ ಕೂತು ಅದರ ಮೇಲೆ ಬೆರಳು ಅಡ್ಡವಾಗಿಟ್ಟು, ಹಾಡು ಹೇಳುತ್ತಾ ಆ ವರ್ಷ ಯಾವ ಮಳೆ ಎಂದು ಕೇಳುವುದು ಆಗ ಕೊಡ ತಿರುಗುವುದು. ಅದು ಎಷ್ಟು ಮುಂದೆ ಹೋಗುತ್ತೋ ಎಷ್ಟು ವೇಗವಾಗಿ ತಿರುಗುತ್ತದೆಯೋ, ಆ ಕಾಲದಂತರದಲ್ಲಿ ಮಳೆ ಆಗುತ್ತೆ ಎಂದು ನಂಬಲಾಗಿದೆ.

ಮನುಷ್ಯನ ಮೇಲೆ ದೇವರು ದೆವ್ವವನ್ನು ಆಹ್ವಾನಿಸಿ ಮಳೆ ಶಕುನ ಕೇಳುವುದು ಅನೇಕ ಕಡೆ ರೂಢಿಯಲ್ಲಿದೆ. ಬಾಯಿ ಮೇಲಾಗಿ ಹುಟ್ಟಿದವನಿಂದ ಮಳೆ ಶಕುನ ಹೇಳಿಸಿದರೆ ನಿಜವಾಗುತ್ತದೆನ್ನುವ ನಂಬಿಕೆ ಕೆಲವಡೆ ಇದೆ. ಮಳೆ ಮಾಂತ್ರಿಕರೇ ಇರುವ ಪದ್ಧತಿ ದಕ್ಷಿಣ ಆಫ್ರಿಕಾದ ಅನೇಕ ಕಡೆಗಳಲ್ಲಿದೆ. ಆದರೆ ಭಾರತದಲ್ಲಿ ಅಂಥ ರೂಢಿ ಇದ್ದಂತಿಲ್ಲ.

**ದೀವರಲ್ಲಿಯ ಮಳೆ ಆಚರಣೆಗಳು**

ಅತಿವೃಷ್ಟಿ- ಅನಾವೃಷ್ಟಿ ಸಂದರ್ಭದಲ್ಲಿ-ರೈತರು ಮಳೆ ನಿಲ್ಲುವಂತೆ ಅಥವಾ ಮಳೆ ಬರುವಂತೆ ಮಾಡಲು ಹಲವಾರು ಬಗೆಯ ಪೂಜೆ, ವ್ರತ, ವಿಧಿಗಳನ್ನು ಆಚರಿಸುತ್ತಾರೆ. ಮಳೆ ಕರೆಯುವ ಆಚರಣೆಗಳಲ್ಲಿ, ಪ್ರಾಣಿಸಾಂಕೇತಿಕ ಆಚರಣೆಗಳೂ ಇವೆ. ಇದರಲ್ಲಿ ಕತ್ತೆ ಮೆರವಣಿಗೆ, ಕಪ್ಪೆ ಮೆರವಣಿಗೆ, ಕಪ್ಪೆ ಮದುವೆ ಇಂಥವೆಲ್ಲ ಸೇರಿವೆ. ಶಿವಮೊಗ್ಗ ಜಿಲ್ಲೆಯ ಕೆಲವು ಭಾಗಗಳಲ್ಲಿ ಮಳೆಬಾರದಿದ್ದಾಗ ಹಂದಿಯೊಂದನ್ನು ಕತ್ತಿನವರೆಗೂ ಜೀವಂತವಾಗಿ ಹೂಳಿ ಅದಕ್ಕೆ ನೀರು ಕೊಡದೆ ಅದು ಅರಚಾಡಿ ಹಾಗೆ ಪ್ರಾಣಬಿಡುವಂತೆ ಮಾಡುವ ಒಂದು ಪದ್ಧತಿಯೂ ಹಲವು ರೈತರಲ್ಲಿದೆ. ಆದರೆ ದೀವರಲ್ಲಿ ಈ ತೆರನಾದಂತಹ ಆಚರಣೆಗಳು ಕಂಡು ಬರುವುದಿಲ್ಲ.

ಇಂಥ ಸಮಾಂತರ ಆಚರಣೆಗಳು ವಿದೇಶಗಳಲ್ಲೂ ಇವೆ. ಪ್ರಾಣಿಗಳು ಹೀಗೆ ಆಕ್ರಂದಿಸುವ ಹಾಗೆ ಮಾಡುವುದರ ಮೂಲಕ ಮಳೆ ದೇವರ ಕರುಣೆಯನ್ನು ಕೆದಕುವುದು ಸಾಧ್ಯವೆಂಬ ನಂಬಿಕೆಯಿಂದ ಇಂಥ ಆಚರಣೆಗಳು ಹುಟ್ಟುತ್ತವೆ, ಎಂದು ಫ್ರೇಜರ್ ಅಭಿಪ್ರಾಯ ಪಡುತ್ತಾರೆ.

ಶಿವಮೊಗ್ಗ ಜಿಲ್ಲೆಯ ಕೆಲವಡೆ ಮಳೆ ಬಾರದಿದ್ದಾಗ ಬರಗಾಲ ಬಸಪ್ಪನಿಂದ ಹಾಗಾಗಿದೆ ಎಂದು ತಿಳಿದು ಯಾರಿಗೂ ಕಾಣದಂತೆ ರಾತ್ರಿಯಲ್ಲಿ ಅದನ್ನು ಗಡಿದಾಟಿಸಿ ಬರುವ ಪದ್ಧತಿ ಇದೆ.

ಮಳೆ ಕರೆಯುವ ಆಚರಣೆಗಳಿರುವಷ್ಟು ಮಳೆ ತಡೆಯುವ ಆಚರಣೆಗಳಿಲ್ಲ. ಹೀಗೆ ಮಳೆಯನ್ನು ಕುರಿತಂತೆ ಅನೇಕ ನಂಬಿಕೆಗಳೂ ಅವುಗಳ ಆಧಾರದ ಮೇಲೆ ಆಚರಣೆಗಳೂ ಲೆಕ್ಕಾಚಾರದ ಶಕುನ ನೋಡುವ ವಿಧಾನಗಳು ರೈತಸಮುದಾಯದಲ್ಲೂ, ಇತರೆ ಜನರಲ್ಲೂ ಸಹಸ್ರಾರು ವರ್ಷಗಳಿಂದ ಬೆಳೆದಿವೆ.

ಆಧುನಿಕತೆಯ ವಿಜ್ಞಾನದ ಪ್ರಭಾವದಿಂದ ಮಳೆಯ ಆಚರಣೆಗಳು ಕಡಿಮೆಯಾಗುತ್ತಿದ್ದರೂ ಗ್ರಾಮೀಣ

ಪ್ರದೇಶಗಳಲ್ಲಿ ಈಗಲೂ ಕೂಡ ಇವು ಜನ ಜೀವನದಲ್ಲಿ ಮಿಳಿತವಾಗಿರುತ್ತವೆ. ಜೀವನಾಧಾರವಾದ ವಿಷಯಗಳಲ್ಲಿ ಯಾರೂ ತಲೆ ಹಾಕುವ ಗೋಜಿಗೆ ಹೋಗುವುದಿಲ್ಲ. ಹಾಗಾಗಿ ಪೂರ್ಣ ನಂಬಿಕೆ ಇರಲಿ ಇಲ್ಲದಿರಲಿ ಇಂಥ ಆಚರಣೆಗಳನ್ನು ಕೃಷಿಕರು ತಮ್ಮ ಸುರಕ್ಷತೆಗೆಂದು ನೆಡೆಸುತ್ತಲೇ ಇರುತ್ತಾರೆ

**ಆರಿದ್ರ ಮಳೆ ಹಬ್ಬ**

ಆರಿದ್ರ ಮಳೆ ಅಥವಾ 'ಆದ್ರೆ' ಮಳೆ ಹಬ್ಬ ಬರುವುದು ಜುಲೈ-ಆಗಸ್ಟ್‌ರ ತಿಂಗಳಲ್ಲಿ ಆ ಮಳೆಯ ಮೊದಲು ಪಾದಕ್ಕೋ ಅಥವಾ ಎರಡನೇ ಪಾದಕ್ಕೂ ಆರಂಭವಾದ ಈ ಹಬ್ಬ ಮಳೆ ಮುಗಿಯುವವರೆಗೂ ಇರುತ್ತದೆ. ಆಗತಾನೆ ಗದ್ದೆ ಬಿತ್ತಿಗೆ ಆಣೆ ಹಾಕುವುದು, ಗದ್ದೆ ಹರಗಿಡುವುದು ಮುಂತಾದ ಕೆಲಸಗಳಲ್ಲಿ ದೀವರು ತೊಡಗಿಸಿಕೊಂಡಿರುತ್ತಾರೆ. ಇವರಿಗೆ ಎರಡು ತಿಂಗಳ ನಿರಂತರ ದುಡಿಮೆಯ ನಂತರ ವಿರಾಮ ಲಭಿಸಿರುತ್ತದೆ.

ಸತತ ಜಡಿಮಳೆ, ಬಿಡುವಿಲ್ಲದ ಕೆಲಸ ಕಚಪಿಚಿ ಕೆಸರು, ಕೊಟ್ಟಿಗೆ, ಮನೆ ಕಟ್ಟಿಗೆ ಮನೆ, ವಾಸದ ಮನೆ ಎಲ್ಲಾ ಹೊಚ್ಚಿ (ಹೊದಿಸಿ) ಗದ್ದೆ ಕೆಲಸ ಮಾಡಿಕೊಂಡು ಆರಾಮವಿರುವಾಗಲೇ ಆದ್ರೆ ಮಳೆ ಬರುತ್ತದ. ಹಾಗಾಗಿಯೆ ಇದನ್ನು ಹನಿಹಬ್ಬ ಎನ್ನುತ್ತಾರೆ. ಅಂದರೆ ಹನಿ ಹತ್ತುವಾಗ ಆಚರಿಸುವ ಹಬ್ಬ ಎಂದಿರಬೇಕು.

ಆರಿದ್ರ ಮಳೆಯಲ್ಲಿ ಎರಡು ವಿಧಾನಗಳನ್ನು ಅನುಸರಿಸುತ್ತಾರೆ. ಊರ ಸುತ್ತಲಿನ ಭೂತಪ್ಪ, ಚೌಡಮ್ಮ, ಹುಲಿಯಪ್ಪ, ಬೀರಪ್ಪ ಯಕ್ಷಿಗಳಿಗೆ ಬಲಿ ಕೊಡುವ ಆಚರಣೆ ಒಂದಾದರೆ; ಇನ್ನೊಂದು ಕೂರಿಗೆ ಪೂಜಿಸುವ ಕೂರಿಗೆ ಹಬ್ಬ ಏನೇ ಆದರೂ ಇಲ್ಲಿ ಮಾಂಸದಡಿಗೆ ಮಾತ್ರ ಕಡ್ಡಾಯ.

ಆರಿದ್ರ ಮಳೆ ಹಬ್ಬವನ್ನು ಸಾರ್ವಜನಿಕವಾಗಿ ತೀರ್ಮಾನಿಸಿಕೊಂಡು ವಾರದ ಮೊದಲೇ ಹಬ್ಬ ಸಾರುತ್ತಾರೆ. ಇದೇ ಸಂದರ್ಭದಲ್ಲಿ ಕೆಲವು ಊರುಗಳಲ್ಲಿ 'ಕುಮಾರ ರಾಮ' ಹಾಗೂ 'ಗ್ರಾಮ ದೇವರ' ಆಚರಣೆ ಕೂಡಾ ಸೇರಿಕೊಂಡಿದೆ. ಕುಮಾರ ರಾಮನ ಹಬ್ಬವಾದರಂತೂ ಮುಟ್ಟುಚಟ್ಟು ಆಗದಂತೆ ಅತ್ಯಂತ ಕಟ್ಟುನಿಟ್ಟಿನ ನಿಯಮಗಳನ್ನು ಆಚರಿಸಲಾಗುತ್ತದೆ.

ಗ್ರಾಮದೇವರ ಹಬ್ಬ ಮಾಡುವಾಗ ನಿಶ್ಚಯಿಸಿದ ದಿನದಂದೆ ಪ್ರತಿ ಮನೆಯವರು ಪ್ರತ್ಯೇಕವಾಗಿ ತಮ್ಮ ತಮ್ಮ ಮನೆಗೆ ಕುರಿ ತಂದುಕೊಂಡ ಹಾಗೆ ಊರೊಟ್ಟಿಗೆ ಎಂದು ೧ರಿಂದ ಮೂರ್ನಾಲ್ಕು ಕುರಿ ತಂದಿರುತ್ತಾರೆ. ಮನೆಗೊಬ್ಬರಂತೆ ''ಹೊರಬಾನ'' (ಊರಿನ ಹೊರಭಾಗದ ಅಡವಿಯ ಮಧ್ಯಭಾಗದಲ್ಲಿ ಅಡಿಗೆ ಮಾಡಿ ಉಣ್ಣುವುದು) ಕ್ಕೆ ಹೋಗಲು ತಯಾರಿ ನಡೆಸುತ್ತಾರೆ. ಡೊಳ್ಳು ವಾದ್ಯ ಸಮೇತ ಊರಿನ ಹಿರಿಯರು ಹೊರಟಾಗ ಒಬ್ಬರು ಕಾಕು ಹೊಡೆದು ಕರೆಯುತ್ತಾರೆ. ಊರಿನ ಅಗಸೆಯಲ್ಲಿರುವ ಚೌಡಮ್ಮ, ಭೂತಪ್ಪ, ಬೀರಪ್ಪ, ಹುಲಿಯಪ್ಪ ಸೇರಿದಂತೆ ಎಲ್ಲಾ ದೇವರಿಗೂ ಪೂಜೆ ಮಾಡಿ ಮುಖ್ಯವಾದ ದೀವರ ಬಳಿಗೆ ಬಂದು ಕುರಿ ಕಡಿದು 'ಕಳ್ಳು ಪಚ್ಚೆ'ಯನ್ನು ತೆಗೆದು ಸ್ವಚ್ಛಮಾಡಿ ಕಾರ ಹಾಕಿ (ಕೆಲವು ಊರುಗಳಲ್ಲಿ ಕಾರ ಹಾಕುವುದಿಲ್ಲ.) ಅಲ್ಲಿಯೇ ಬೇಯಿಸುತ್ತಾರೆ. ಊರೊಟ್ಟಿನ ಜನರಿಗಾಗಿ ಪ್ರತಿಮನೆಯಲ್ಲಿ ಅನ್ನ ರೊಟ್ಟಿ ಮಾಡಿಸಿರುತ್ತಾರೆ. ಅದನ್ನು ತೆಗೆದುಕೊಂಡು ಹೋಗಿ ಅಲ್ಲಿಯೇ ಹಿರಿಯರು ಊರಿ ಮಾಡುತ್ತಾರೆ. ಪ್ರತಿ ಮನೆಯಲ್ಲಿ ಇದೇ ತರಹ ಕುರಿ ಕಡಿದು ಹಬ್ಬಮಾಡಿ, ಹಿರಿಯರಿಗೆ ಎಡೆ ಹಾಕಿ ಬಂದ ನೆಂಟರಿಷ್ಟರೆಲ್ಲಾ ಊಟ ಮಾಡುತ್ತಾರೆ. ಬಹುತೇಕ ದೀವರ ಹೆಂಗಸರು ಕುರಿ ತಿನ್ನುವುದಿಲ್ಲ. ಅವರೇನಿದ್ದರೂ ಕೋಳಿ ಅಥವಾ ಮೀನು ಮಾತ್ರ ತಿನ್ನುತ್ತಾರೆ.

ಕೂರಿಗೆ ಹಬ್ಬ ಮಾಡುವುದಾದರೆ ಅಂದು ಬೆಳಿಗ್ಗೆ ಕುಂಟೆ-ನೇಗಿಲುಗಳನ್ನು ತೊಳೆದು ಮನೆಯ ಒಂದು ಭಾಗದಲ್ಲಿ ನೆಲವನ್ನು ಸಗಣಿಯಿಂದ ಸಾರಿಸಿ ರಂಗವಲ್ಲಿ ಹಾಕುತ್ತಾರೆ. ಅವುಗಳಿಗೆ ಜೇಡಿ, ಕೆಮ್ಮಣ್ಣು ಬಳಿದು, ವಿಭೂತಿ, ಕುಂಕುಮ ಹಚ್ಚಿ ಪೂಜಿಸುತ್ತಾರೆ. ಪರಿಕರಗಳ ಒಂದೆಡೆ ಅಗಲದ ಚೌಕವನ್ನು ಮಾಡಿ ಅದಕ್ಕೆ ಭತ್ತ, ರಾಗಿ ಬೀರುತ್ತಾರೆ.

ಹಲಸಿನ ಎಲೆಯಿಂದ 'ಎತ್ತುಗಳನ್ನು ತಯಾರಿಸಿ' (ಎಲೆಯನ್ನು ತೆಗೆದುಕೊಂಡು ತುದಿಯನ್ನು ಮಡಿಚಿ ಕಡ್ಡಿಯನ್ನು ಚುಚ್ಚಿ ಕೊಂಬುಗಳ ತರಹ ಆಕಾರ ಬರುವಂತೆ ಮಾಡುತ್ತಾರೆ.) ಬಾಳೆದಿಂಡಿನಲ್ಲಿ ಕೂರಿಗೆ, ನೇಗಿಲು, ನೊಗ ಮತ್ತು ಎಲೆಯಿಂದಲೇ ಗಾಡಿ ಮಾಡಿ ಅವುಗಳಿಗೂ ಜೇಡಿ ಕೆಮ್ಮಣ್ಣು ಮಾಡಿ ತೋರಣ ಕಟ್ಟಿ ಪೂಜಿಸುತ್ತಾರೆ.

ಮನೆಯ ಯಜಮಾನ ಉಪವಾಸವಿದ್ದು ಪೂಜೆ ಮಾಡುತ್ತಾನೆ. ಸಿಹಿ ಅಡುಗೆ ಎಡೆ ಹಾಕಿ ಹಣ್ಣು ಕಾಯಿ ಪೂಜೆ ನೆಡೆಯುತ್ತದೆ. ಇಡೀ ಹಬ್ಬದಲ್ಲಿ ಹಲಸಿನ ಹಣ್ಣಿನ ಕಡುಬು ಮುಖ್ಯವಾದುದು. ಮಧ್ಯಾಹ್ನದ ವೇಳೆಗೆ ಚೌಡಮ್ಮ, ಭೂತಪ್ಪ, ಯಕ್ಷಿ ಬೀರಪ್ಪ ಮುಂತಾದ ದೇವತೆಗಳಿಗೆ ಪೂಜಿಸಿ ಕುರಿ -ಕೋಳಿ ಕಡಿಯುತ್ತಾರೆ.

ಊರೊಟ್ಟಿನ ಕುರಿಯನ್ನು ಊರ ಹೊರಗಿನ ಭೂತಪ್ಪಗೆ ಕಡಿದು ಪಾಲು ಹಾಕುತ್ತಾರೆ. ಪ್ರತಿಮನೆಯವರು ಕುರಿ-ಕೋಳಿ ಕಡಿದು ಎಲ್ಲರಿಗೂ ಊಟ ಹಾಕುತ್ತಾರೆ. ಸಂಜೆ ೬ರಿಂದ ಶುರುವಾದ ಊಟ ರಾತ್ರಿ ಹತ್ತು ಘಂಟೆಯವರೆಗೆ ನೆಡೆಯುತ್ತಿರುತ್ತದೆ. ಬಂದ ನೆಂಟರು ಪ್ರತಿ ಮನೆಯಲ್ಲಿ ಸ್ವಲ್ಪ ಸ್ವಲ್ಪ ಕಡುಬು-ತುಕುಡಿ ಊಟ ಮಾಡುತ್ತಾರೆ. ಕಂಬಳಿ ಕೊಪ್ಪೆ, ಸಾರಾಯಿ, ಜೊತೆಗೆ ಮಳೆ, ಹಬ್ಬಕ್ಕೆ ಮೆರಗು ತಂದಿರುತ್ತದೆ. ಮಾಡಿದ ಅಡುಗೆಯನ್ನು ಇಡಕಲು ಕೆಳಗೆ ನೈವೇದ್ಯಕ್ಕೆ ಇಡುತ್ತಾರೆ. ಹೆಂಡವನ್ನು ಪಾತ್ರೆಯಲ್ಲಿ ತುಂಬಿಟ್ಟು ಊಟಕ್ಕೆ ತಯಾರಿಸುತ್ತಾರೆ.

ಕೆಲವು ಊರಗಳಲ್ಲಿ ಕುಮಾರ ರಾಮನ ಹಬ್ಬವನ್ನು ಇದರ ಜೊತೆಗೆ ಆಚರಿಸುತ್ತಾರೆ. ಕುಮಾರ ರಾಮನ ಹಬ್ಬವಾದರೆ ಅತ್ಯಂತ ಕಟ್ಟುನಿಟ್ಟಿನ ಆಚರಣೆ ಮಡಿ ಮೈಲಿಗೆಯಾದರೆ ಊರ ಹೊರಗೆ ಕಳಿಸಿಬಿಡುತ್ತಾರೆ. ಹೆರಿಗೆ ಆಗುವುದಿದ್ದರೆ ನೆಂಟರು ಮನೆಗೆ ಕಳಿಸುತ್ತಾರೆ. ಕೆಲವು ಊರುಗಳಲ್ಲಿ ಕುಮಾರ ರಾಮನಿಗೆ ಕುರಿ ಕಡಿದರೆ ಕೆಲವು ಊರುಗಳಲ್ಲಿ ಶೂಲಕ್ಕೆ ಅಥವಾ ಪಕ್ಕದ ಭೂತಪ್ಪನಿಗೆ ಕಡಿಯುತ್ತಾರೆ. ಎಡೆಯನ್ನು ಸಹ ಹಾಕುವಾಗ ಊರುಗಳಲ್ಲಿ ಮಾಂಸದ ಎಡೆ ಮಾಡಿದರೆ ಕೆಲವು ಊರುಗಳಲ್ಲಿ ಸಿಹಿ ಅಡುಗೆ ಎಡೆ ಹಾಕುತ್ತಾರೆ. ಕೆಲವು ಊರುಗಳಲ್ಲಿ ಊರೊಟ್ಟಿನ ಕುರಿಯ ಸಾರಿನ ಅಡುಗೆಯನ್ನು ದೇವಸ್ಥಾನಗಳಲ್ಲಿ ಮಾಡುತ್ತಿದ್ದರು. ಅಲ್ಲಿ ಋತುಮತಿಯಾಗದ ಹೆಣ್ಣಿಗಷ್ಟೇ ಪ್ರವೇಶ. ರಾಮುಗೊಂಡನ ಕೊಪ್ಪ (ಸೊರಬ ತಾಲೂಕು)ದಲ್ಲಿ ಮೈನೆರೆಯದ ದೀವರ ಹೆಣ್ಣು ಮಕ್ಕಳು ಬೆತ್ತಲೆಯಾಗಿಯೇ ಅಕ್ಕಿಕುಟ್ಟಿ ಕಡುಬು ಮಾಡಬೇಕು.

ಬಿಂಗಿ ಬಿಂಗಿ ಎಂದರೆ ಡೊಳ್ಳು ಕಟ್ಟಿಕೊಂಡು ಊರಿನ ಭೂತಪ್ಪನವರಿಗೆ ಮೆರವಣಿಗೆ ಮಾಡುತ್ತಾರೆ. ಅಲ್ಲಿ ಕುಡಿಯುವುದು ಮತ್ತು ಕುಣಿಯುವುದು ಇರುತ್ತದೆ. ಕೊನೆಯ ಹಂತಕ್ಕೆ ಡೊಳ್ಳು ಹೊಡೆಯುವುದು, ಗದ್ದೆಯಲ್ಲಿ ಬಿದ್ದು ಹೊರಳಾಡುವುದು, ನಡೆಯುವುದರಿಂದ ನೋಡಲು ಇದೊಂದು ಆಕರ್ಷಕ ನೃತ್ಯವೆನಿಸುತ್ತದೆ. ನಿರಂತರ ವಿಶ್ರಮ ರಹಿತ ಬದುಕು ಹಾಗೂ ದುಡಿಮೆಯಿಂದ ಬೇಸತ್ತಿರುವ, ರೇಜಿಗೆಗೊಂಡಿರುವ ದೀವರ ಸಮುದಾಯ ಈ ರೀತಿಯ ಹಬ್ಬಗಳನ್ನು ಸೃಜಿಸಿಕೊಂಡಿದೆ.

ಸಮುದಾಯದೊಂದಿಗೆ ಬೆರೆತು ಊಟ ಮಾಡುವುದಲ್ಲದೆ ಕೃಷಿ ಉಪಕರಣಗಳನ್ನು ಪೂಜೆ ಮಾಡುತ್ತಾರೆ. ಇವರ ಜೊತೆ ಅವರು ಇಟ್ಟುಕೊಂಡ ತಾಯ್ತನದ ಸಂಬಂಧವೇ ಆಗಿದೆ. ಮಳೆಯ ಭಿನ್ನತೆ, ನಿಗೂಢತೆಯ ಬಗ್ಗೆ ವಿಸ್ಮಯಗೊಂಡಿರುವ ಈ ಸಮುದಾಯ ಇಂತಹ ಹಬ್ಬಗಳನ್ನು ಆಚರಿಸುವುದರ ಮುಖಾಂತರ ಪ್ರಕೃತಿಯ ಜೊತೆ

ಅನುಸಂಧಾನ ಏರ್ಪಡಿಸಿಕೊಂಡಿದೆ. ಅಲ್ಲದೆ ಶಾಂತಿ ಸಂದೇಶ ಹಾಗೂ ಬಲಿ ಕೊಡುವುದರ ಮುಖಾಂತರ ಸಮಾಧಾನ ಪಟ್ಟುಕೊಳ್ಳುತ್ತದೆ.

ಬಿಂಗಿ ಎಂದರೆ ಫಲವಂತಿಕೆಗಾಗಿ ಬೀಜಬಿತ್ತಿದ ನಂತರ ಬುಡಕಟ್ಟು ಸಮುದಾಯ ಗದ್ದೆಯಲ್ಲಿ ಮದ್ಯ ಮೈಥುನದಂತಹ ಕ್ರಿಯೆಯಲ್ಲಿ ತೊಡಗಿದರೆ ಬೆಳೆ ಚೆನ್ನಾಗಿ ಬರುತ್ತದೆ ಎಂಬ ಭಾವನೆಯಿಂದ ಹಾಗೆ ಮಾಡುತ್ತಿರಬಹುದು. ಕೃಷಿ ಬಂದ ನಂತರ ತಮ್ಮ ಬೆಳೆಗೆ ಯಾವ ಅಡಚಣೆ, ತೊಂದರೆ ಬರಬಾರದು ಸುತ್ತಮುತ್ತಲಿನ ಭೂತಪ್ಪ, ಚೌಡಮ್ಮರು ಕಾಯಲಿ ಎಂಬ ಭಾವನೆ ಇರಬಹುದು. ಆ ಕಾರಣದಿಂದಲೇ ಮದ್ಯ ಮಾಂಸಗಳನ್ನು ಅರ್ಪಿಸಿ ರಕ್ತವನ್ನು ಭೂಮಿಗೆ ಚೆಲ್ಲಿ ಸಂತೃಪ್ತಿಪಡಿಸುವುದು. ಯಲಕುಂದ್ಲಿ (ಸಾಗರ ತಾ.) ಯ ರಾಚಮ್ಮನ ಬನದಲ್ಲಿ ಮಾವಿನಸೊಪ್ಪು, ವೀಳ್ಯದೆಲೆ, ಬಾಳೆಹಣ್ಣಿನ ಚೂರು ಅಕ್ಕಿಯನ್ನು ಇಡೀ ಬನಕ್ಕೆ ತೂರುತ್ತಾರೆ. ಇದು ಫಲವಂತಿಕೆಯ ಸಂಕೇತವಾಗಿದೆ.

**ಗಂಗೆ-ಗೌರಿ ಕಥೆ: ನೀರು ಪೂಜೆ**

ಗಂಗೆ ಗೌರಿ ಸಂವಾದವೆಂಬುದನ್ನು ಈವರೆಗಿನ ಎಲ್ಲಾ ವಿದ್ವಾಂಸರು, ದೇವರನ್ನು ಮಾನವ ತನ್ನ ಬದುಕಿನ ವಿಧಾನಕ್ಕೆ ಹೊಂದಿಸಿಕೊಂಡ ಕಥೆ ಎಂದೇ ಬಗೆದಿದ್ದಾರೆ. ದೇವರಲ್ಲಿಯೂ ಸಹ ಮಾನವ ಸಹಜ ದೌರ್ಬಲ್ಯವಿದೆ ಎಂಬುದನ್ನು ತಿಳಿಸುವುದರ ಮೂಲಕ ಮಾನವ ಲೋಕಕ್ಕೆ ದೇವರನ್ನು ಸರಿದೂಗಿಸಿಕೊಂಡ ಕಾವ್ಯವಿದು. ಒಟ್ಟು ಕಾವ್ಯವನ್ನು ಕಥನರೂಪಿಯಾಗಿ ಹ್ರಸ್ವಗೊಳಿಸಿ ಈ ರೀತಿ ಆಲೋಚಿಸಬಹುದು.

ಗಂಗೆಯು ಗೌರಿಯಂತೆ ಗಿರಿಜನ ಮಗಳಾದರೂ ಕೆಟ್ಟ ಗಳಿಗೆಯಲ್ಲಿ ಹುಟ್ಟಿದ ಪ್ರಯುಕ್ತ ಅವಳನ್ನು ಪೆಟ್ಟಿಗೆಯಲ್ಲಿಟ್ಟು ನದಿಯಲ್ಲಿ ಬಿಡುತ್ತಾರೆ. ಅಂಬಿಗರ ಕೈಗೆ ಸಿಕ್ಕ ಗಂಗೆ, ಅವರಾಶ್ರಯದಲ್ಲಿ ಬೆಳೆಯುತ್ತಾಳೆ. ಒಮ್ಮೆ ಗಂಗೆಯನ್ನು ನೋಡಿ ಮನಸೋತ ಶಿವ "ನನ್ನ ಜಡೆಯಲ್ಲಿ ಬಂದೊಪ್ಪು" ಎನ್ನುತ್ತಾನೆ. ನಾನು ಬೆಸ್ತರ ಹುಡುಗಿ ಅಶುದ್ಧಿ ಎಂದು ಶುಚಿತ್ವದ ಕಾರಣವನ್ನು ಮುಂದೊಡ್ಡುವಳು. ಆದರೂ ಶಿವನ ಒತ್ತಾಯದ ಮೇರೆಗೆ ಗಂಗೆ ಅವನನ್ನು ಸೇರುತ್ತಾಳೆ. ಈ ಸುದ್ದಿ ಗಿಳಿಗಳ ಮೂಲಕ ಗೌರಿಗೆ ಗೊತ್ತಾಯಿತು. ಕದ ಜಡಿದು ಮಲಗಿದಳು. ರಾತ್ರಿ ಶಿವ ಬಂದು ಕದ ಬಡಿದ. ಗೌರಿ ಸಿಟ್ಟಿನಿಂದ ಕದ ತೆಗೆದು ಗಿಂಡಿಯಲ್ಲಿ ನೀರಿಡುವಳು. ಶಿವ, ಎರಡು ಗಿಂಡೆಯಲ್ಲಿ ನೀರೇಕೆ? ನಿನಗೆಬ್ಬರೇನೇ ಪುರುಷಾರು? ಎಂದು ಪ್ರಶ್ನಿಸಿದ ತನ್ನ ಕಪಟಕ್ಕೆ ಮುಸುಕೆಳೆಯಲು ಪ್ರಯತ್ನಿಸುತ್ತಾನೆ. ಗೌರಿ "ನಿಮಗೊಂದು ನಿಮ್ಮ ಜಡೆಯಲ್ಲಿ ಮರೆಯಾದ ಸುರನಾರಿಗೆಂದು" ಎಂದಳು. ಶಿವ ಗಣಪನ ಮೇಲೆ ಆಣೆ ಮಾಡುತ್ತಾನೆ. ಆದರೆ ಗೌರಿ ಶಿವನ ಜಡೆಯಲ್ಲಡಗಿದ ಗಂಗೆಯನ್ನು ಹೊರಗೆಳೆಯುವಳು. ಗಂಗೆ ನಾಚಿ ಮಾನ ಕಳೆಯಬೇಡಿರೆಂದು ಅಂಗಲಾಚುವಳು. ಗೌರಿ ಸವತಿ ಮಾತ್ಸರ್ಯದ ಕಿಚ್ಚನ್ನು ಬಿಡಲಿಲ್ಲ. ತಿಂಗಳುರುಳಿದರೂ ಅವರಿಬ್ಬರ ಮಧ್ಯ ಸಾಮರಸ್ಯವೇರ್ಪಡಲಿಲ್ಲ. ನಿರುಪಾಯಳಾದ ಗಂಗೆ ತನ್ನ ತವರಿಗೆ ತೆರಳಲು ಪತಿಯ ಅಪ್ಪಣೆ ಪಡೆಯುತ್ತಾಳೆ. ಜೊತೆಯಲ್ಲಿ ನೀರು ಮಾಯವಾಗುತ್ತದೆ. ಅದೇ ವೇಳೆ ಗೌರಿ ಬಹಿಷ್ಠೆಯಾಗುವಳು. ಮಿಂದು ಒಳಗೆ ಬರಲು ಕೈಲಾಸದಲ್ಲಿ ಹನಿ ನೀರಿಲ್ಲ ಹಾಲು ತುಪ್ಪದಲ್ಲಿ ಮಿಂದರೆ ಅಶುಚಿ ತೊಲಗುವುದೇ? ಅವರಿಂದ ಗೌರಿಯ ಗರ್ವಭಂಗವಾಯಿತು. ಮುಂದೆ ಶಿವನ ಬುದ್ಧಿಮಾತಿನಂತೆ ಗಂಗೆ -ಗೌರಿಯರು ಅಕ್ಕ-ತಂಗಿಯರಾಗಿ ಅವನ ಜೊತೆ ಸುಖದಲ್ಲಿ ಬಾಳುವರು

ಒಂದು ಜನಾಂಗದ ಎರಡು ಭಿನ್ನ ಗುಂಪುಗಳ ನಡುವಿನ ಅನುಸಂಧಾನ ಚಿತ್ರಣವನ್ನು ಈ ಕಾವ್ಯ ಅತ್ಯಂತ ಮನೋಜ್ಞವಾಗಿ ಹೃದಯಕ್ಕೆ ಅರ್ಥವನ್ನು ನೀಡುತ್ತದೆ. ಮಾತೃಮೂಲೀಯ ಸಂಸ್ಕೃತಿಯ ರೂಢಿಸಿಕೊಂಡ ಕೌಟುಂಬಿಕ

ಬಂಧನಗಳು ಸ್ಥಿರೀಕರಣಗೊಳ್ಳುವ ಸಂದರ್ಭದಲ್ಲಿ ಉಗಮಗೊಂಡಿರಬಹುದಾದ ಕಥಾನಕ ಇದು ಎಂಬುದನ್ನು ಅಲ್ಲಗಳೆಯಲಾಗದು. ಈ ಕಾರಣದಿಂದಲೇ ದೀವರು ಗೌರಿ ತಂದ ನಂತರ ಗಂಗೆ ತಂದು ಸರಳವಾಗಿ ವಿಸರ್ಜಿಸುವುದು.

ಉತ್ಪಾದನಾ ವ್ಯವಸ್ಥೆಯಲ್ಲಿ ನೀರಿನಲ್ಲಿ (ಜಲಯುಗ) ಅಥವಾ ನೀರನ್ನು ನಂಬಿ ಬದುಕುವ ಸಮುದಾಯಗಳೆರಡು ಆರ್ಥಿಕ ಅಭಿವೃದ್ಧಿಯ ಕಾರಣದಿಂದ ತಮ್ಮ ಬದುಕಿನ ನೆಲೆಗಳನ್ನು ಬದಲಾಯಿಸಿಕೊಂಡಾಗ ಮತ್ತೆ ಸಂಸ್ಕೃತಿಗಳೆರಡು ಮುಖಾಮುಖಿಯಾದಾಗ ಸಂಘರ್ಷ ಏರ್ಪಡುತ್ತದೆ. ಗಂಗೆಯ ಮಕ್ಕಳೆಂದು ಕರೆದುಕೊಳ್ಳುವ ಬೋವಿ, ಮೀಂಗುಲಿಗ ಹರಿಕಂತ್ರರು, ಬೆಸ್ತರು ಕಡಲತಡಿಯಲ್ಲಿ ವಾಸಿಸುತ್ತಾರೆ.

ಗೌರಿ ಮಕ್ಕಳೆಂದು ಕರೆದುಕೊಳ್ಳುವ ದೀವರು ಕಡಲ ಬಿಟ್ಟು ವ್ಯವಸಾಯಕ್ಕೆ ಇಳಿದರೂ ಮೀನುಗಾರಿಕೆಯನ್ನು ಉಪವೃತ್ತಿಯನ್ನಾಗಿ ಇಟ್ಟುಕೊಂಡಿದ್ದಾರೆ. ಈ ದೀವರ ಶಬ್ದವು ಇತ್ತಲಾಗಿ ಅಪಭ್ರಂಶವಾಗಿ ದೀವರು ಎಂಥಾಗುತ್ತದೆ. ದೀವರು ಎಂಬ ಶಬ್ದವು ಅಂಬಿಗ ನೆಂಬ ಅರ್ಥವನ್ನು ಕೊಡುತ್ತದೆ. (ಅಭಿಜ್ಞಾನ ಶಾಕುಂತಲದಲ್ಲಿ ಉಂಗುರ ಸಿಕ್ಕ ಪ್ರಸಂಗದಲ್ಲಿ ದೀವರನೆಂಬುದು ಮೀನುಗಾರನಿಗೆ ಬಳಕೆಯಾಗಿದೆ.) ಅಂದರೆ ಈ ಹಳ್ಳೆಪೈಕದವರೆಂಬ ಜಾತಿಯವರು ಮೊದಲಿಗೆ ಅಂಬಿಗರು ಮಾಡುವ ಮೀನುಗಾರಿಕೆಯ ಕೆಲಸ ಮಾಡುತ್ತಿದ್ದಂತೆ ಕಾಣುತ್ತದೆ. ಇದಕ್ಕೆ ಸಮರ್ಥನೆಯಾಗಿ ಮಹರ್ಷಿ ವೇದವ್ಯಾಸನೆ ಈ ದೀವರ ಈಡಿಗರ ಮೂಲ ಪುರುಷನೆಂಬ ನಂಬಿಕೆಯನ್ನು ಲಕ್ಷಿಸಬಹುದು. "ಗೋದಾವರಿ ಜಿಲ್ಲೆಯ ಸನಿಹದಲ್ಲಿರುವ ವ್ಯಾಸನ ವಿಗ್ರಹಕ್ಕೆ ಈಡಿಗರು ಕೋಳಿಯ ಬಲಿ ಅದೇ ಆಗ ಇಳಿಸಿದ ಸೇಂದಿ ಅರ್ಪಿಸುತ್ತಾರೆ ಎನ್ನುವುದು ದೀವರು ಬೆಸ್ತರು ಆಗಿದ್ದರೆಂಬುದನ್ನು ದೃಢೀಕರಿಸುತ್ತದೆ."[೪] ಎಂದರೆ ಎರಡು ಜಾತಿಗಳು ಮೂಲದಲ್ಲಿ ಒಂದೇ ಸಂಸ್ಕೃತಿಯ ಲಕ್ಷಣಗಳನ್ನು ಹೊಂದಿದ್ದು ಉತ್ಪಾದನಾ ಚಟುವಟಿಕೆಗಳಲ್ಲಿ ಉಂಟಾದ ಬದಲಾವಣೆ ಅವರನ್ನು ವಿಭಾಗಿಸಿತು.

ನೀರಿನಲ್ಲಿ ಉಳಿದುಕೊಂಡಿದ್ದ ಸಮುದಾಯ ಬದಲಾದ ಕಾಲಮಾನದ ಸಂದರ್ಭದಲ್ಲಿ ವ್ಯವಸಾಯಕ್ಕೆ ಬಂದಿರಬೇಕು. ಈಗಾಗಲೇ ವ್ಯವಸಾಯಕ್ಕೆ ಇಳಿದಿದ್ದ ಸಮುದಾಯ ಇದನ್ನು ಪ್ರತಿಭಟಿಸಿರಬೇಕು. ಜೊತೆಗೆ ಅವರಿಬ್ಬರ ಮಧ್ಯ ಭೂಮಿ ಹಾಗೂ ಪ್ರಭುತ್ವಕ್ಕಾಗಿ ಹೋರಾಟ ನಡೆದಿರಬೇಕು. ಹಾಗೂ ಅನಿವಾರ್ಯವೂ ಕೂಡಾ. ಈ ರೀತಿಯ ಬುಡಕಟ್ಟು ಕುಲಗಳೆರಡರ ಹೋರಾಟ ಮತ್ತು ಮುಖಾಮುಖಿಯಿಂದ ಒಂದು ಅನುಸಂಧಾನ ಏರ್ಪಡುತ್ತದೆ. ಆಗ ಸಂಘರ್ಷದಿಂದ ಸಹಬಾಳ್ವೆ ಸಾಧ್ಯವಾಗಿರಬೇಕು.

ಈ ರೀತಿ ಎರಡು ಬಲಿಷ್ಠ ಗುಂಪುಗಳ ನಡುವಿನ ನಿರಂತರ ಸಂಘರ್ಷ ಎರಡು ಸಮುದಾಯದ ಆರ್ಥಿಕ ಸ್ಥಿತಿಗೆ ಮಾರಕವಾದಾಗ ಇಂತಹ ಕಥಾನಕಗಳು ರೂಪಗೊಳ್ಳುತ್ತದೆ. ಕಾವ್ಯದಲ್ಲಿ ಗಂಗೆಯು ಗೌರಿಯಂತೆ ಪರ್ವತರಾಜನ ಮಗಳೆಂದು ಕರೆಯುತ್ತಾರೆ. ಅಂತಿಮದಲ್ಲಿ ಶಿವ ಇಬ್ಬರನ್ನು ಮದುವೆಯಾಗಿ ಗಿರಿಗೆ ಕರೆದುಕೊಂಡು ಹೊರಡುತ್ತಾನೆ. ಗಂಗೆ -ಗೌರಿ ಬೇರೆನಲ್ಲ ಎಂಬುದಾಗಿ ಶಿವ ಸಮಾನ ದೃಷ್ಟಿಯಿಂದ ನೋಡುವುದರ ಮುಖಾಂತರ ಎರಡು ಕುಲಗಳಲ್ಲಿ ಯಾವುದು ಮೇಲಲ್ಲ, ಕೀಳಲ್ಲ ಎಂಬುದು ತೀರ್ಮಾನವಾಗಿ ಸಹಬಾಳ್ವೆ ಸಾಧ್ಯವಾಗುತ್ತದೆ. ಹಾಗಾಗಿ ಇದನ್ನು ಅಷ್ಟೇ ಸುಲಭವಾಗಿ ಎರಡು ಜನಸ್ತ್ರೀಯರ ಜಗಳವನ್ನಾಗಿ ಮಾತ್ರವೇ ನೋಡದೆ ಎರಡು ಸಮುದಾಯಗಳ ಅನುಸಂಧಾನದ ಸಮಗ್ರ ರೂಪವಾಗಿ ಗ್ರಹಿಸಬೇಕು.

ಶಿವ ದ್ರಾವಿಡನೆಂಬುದನ್ನು ನಾವು ಗ್ರಹಿಸುವುದಾದರೆ, ಗೌರಿ ದ್ರಾವಿಡರಿಗಿಂತಲೂ ಪೂರ್ವಜನಾಂಗದ ಮಗಳು ಎಂದು ಹೇಳಬೇಕಾಗುತ್ತದೆ. ಅವಳು ಶಿವನನ್ನು ಕಾಡಿ -ಬೇಡಿ ಮದುವೆಯಾಗುತ್ತಾಳೆ. ಈ ರೀತಿ ಕೊಡು - ಕೊಳ್ಳುವಿಕೆ ಆದಿ ಅನಾದಿ ಕಾಲದ ಅನಿವಾರ್ಯ ಒತ್ತಡಗಳು ಇವು ಜನಪದರಲ್ಲಿ ಸಹಜವಾಗಿ ಸಾಗಿ ಬಂದ ಸಾಂಸ್ಕೃತಿಕ

ಕಲಿಕೆಗಳು ಅಷ್ಟೇ ಅಲ್ಲದೆ ಒಂದು ಕಾಲಘಟ್ಟದಲ್ಲಿ ನಡೆಬಹುದಾದ ಸಮುದಾಯಿಕ ಘಟನೆಗಳು. ಆದ್ದರಿಂದಲೇ ಇವು ಆದಿಮ ಜಗತ್ತಿನ ಚಾರಿತ್ರಿಕ ಸಂಗತಿಗಳಾಗಿ ಕಾಣುತ್ತವೆ.

**ನೀರುಪೂಜೆ**

ಮಲೆನಾಡಿನ ದೀವರಿಗೂ, ನೀರಿಗೂ ನಿಕಟ ಸಂಬಂಧವಿದೆ. ನೀರನ್ನು ಅವರು ಕೇವಲ ದಿನ ಬಳಕೆಯ ದ್ರವ್ಯವನ್ನಾಗಿ ಮಾತ್ರವೇ ಗ್ರಹಿಸದೇ ಅಥವಾ ಅದೊಂದು ಬದುಕಿಗೆ ಜೀವಜಲವೆಂದು ಮಾತ್ರ ತಿಳಿದುಕೊಳ್ಳದೆ, ಸಂಸ್ಕೃತಿಯ ಮೂಲ ಬೇರುಗಳನ್ನು ಸೃಷ್ಟಿಸಿದ ಜೀವದಾಯಕವೆಂಬುದಾಗಿ ಪರಿಭಾವಿಸುತ್ತಾರೆ. ಹುಟ್ಟು, ಸಾವು, ಮದುವೆ, ಹಬ್ಬ, ಆಚರಣೆಗಳಲ್ಲಿ ಎಡೆ ಇಡುವ ಪದ್ಧತಿಯೊಂದಿಗೆ ಪ್ರಾರಂಭವಾಗಿ ಪ್ರತಿಯೊಂದರಲ್ಲಿ ನೀರನ್ನು ಹೊರತುಪಡಿಸಿ ದೀವರನ್ನು ನೋಡಲಾಗುವುದಿಲ್ಲ. ಅಷ್ಟರಲ್ಲಿ ಜಗತ್ತಿನ ಬಹುತೇಕ ಬುಡಕಟ್ಟುಗಳ ಅಂತಃಸತ್ವವು ನೀರಿನಿಂದಲೇ ರೂಪಗೊಂಡಿರುವುದರಿಂದ ಅವರ ಬಹಿರ್ ಮತ್ತು ಅಂತರಂಗಗಳ ಆಕೃತಿಗಳಲ್ಲಿ ನೆಡೆದ ಮಥನ ಕ್ರಿಯೆಯೇ ಆದಿಮಜ್ಞಾನಿಯ ಮೂಲಗಳು. ಶೋಧಿಸುವ ದರ್ಶನಕ್ಕೆ ನೀರು ಉತ್ತರ ನೀಡಬಲ್ಲದು. ಮತ್ತು ಈ ಹೊತ್ತಿನ ಬದುಕಿನ ಚಿಂತನೆಗೆ ವಿಭಿನ್ನ ಆಶಯ ಕೊಡಬಲ್ಲದು.

ಈವರೆಗಿನ ಬದುಕಿನ ಆಲೋಚನೆಗಳು, ಈ ಜನಾಂಗದ ಬದುಕಿನ ವಿಧಾನಗಳನ್ನು ರೂಪಿಸುವ ಅಂತಃ ಸತ್ವದ ಕ್ರಿಯೆಯಾಗಿರುವುದರಿಂದ ಬದುಕಿನ ವಿಧಾನಗಳ ಮೂಲಕ ಈ ಜನಾಂಗದ ಮೂಲಗಳನ್ನು ಶೋಧಿಸಬೇಕಿದೆ. ಆಗ ಮಾತ್ರ ಈ ಜನಾಂಗದ ಬದುಕಿನ ಸಮಷ್ಠಿಯ ಅಂತರಂಗ ಸ್ಪಷ್ಟವಾಗುತ್ತದೆ. ಹಬ್ಬ ಆಚರಣೆಗಳು ದಿಡೀರ್ ಎಂದು ಈ ಕ್ಷಣದ ಚಡಪಡಿಕೆಯಾಗಿ ಹುಟ್ಟಿದವುಗಳಲ್ಲ. ಅದಕ್ಕೆ ಬದಲಾಗಿ ಸಮುದಾಯಗಳು ಕಂಡುಕೊಂಡು ಜೀವನ ದರ್ಶನವೇ ಇಲ್ಲಿ ಮೈತಳೆದು ನಿಂತಿದೆ. ಆ ಕಾರಣದಿಂದಲೇ ಇದು ಪ್ರಧಾನ ಸಂಸ್ಕೃತಿಯೊಂದಿಗೆ ನಿರಂತರ ಸಂಘರ್ಷವನ್ನು ಹೊಂದುತ್ತಲೇ ಬಂದಿದೆ. ಸಂಸ್ಕೃತೀಕರಣದ ಸಂದರ್ಭದಲ್ಲಿ ಇವೆಲ್ಲವೂ ಒಂದಾದಂತೆ ಕಂಡರೂ ದೀವರ ಈಗಿನ ಹಬ್ಬ ಆಚರಣೆ ಮದುವೆಗಳಲ್ಲೆಲ್ಲಾ ಪವಿತ್ರ ರೂಪದಲ್ಲಿ 'ನೀರು' ಕಂಡು ಬಂದಿದೆ.

ನಮ್ಮಲ್ಲಿ ಎರಡು ಬಗೆಯ ಜಲಪ್ರಳಯದ ಪರಿಕಲ್ಪನೆಗಳಿವೆ.

೧. ಏಕಾದಶ ರುದ್ರಸೂರ್ಯರು ಕಾಣಿಸಿಕೊಂಡು, ಭಸ್ಮವಾಗಿ, ಪ್ರಳಯವಾಗುವುದು.

೨. ಪ್ರಳಯ ಮೇಘಗಳು ಸುರಿದು ಲೋಕ ಮುಳುಗುವುದು.

"ಸೂರ್ಯನ ಕಾರಣದಿಂದ ಪ್ರಳಯವಾಗುವ ಕಲ್ಪನೆ ಆರ್ಯರದು. ಕಾರಣವೆಂದರೆ ಅಗ್ನಿಯಾರಾಧನೆ, ಜಲಪ್ರಳಯ, ಚಂದ್ರ ಕುಲದವರು ಅಂದರೆ ಬುಡಕಟ್ಟಿನವರದು. ಆರ್ಯರು ಅಗ್ನಿ ಆರಾಧಕರು, ನೀರು ಹಾಲದೇವರ ಉಪಾಸನಾ ಸಂಪ್ರದಾಯವೊಂದು ಸ್ವತಂತ್ರವಾಗಿ ಆ ಕಾಲದಲ್ಲಿ ಇತ್ತೆಂಬುದನ್ನು ಇನ್ನೂ ಯಾರು ಗಮನಿಸಿಲ್ಲ. ಕಾರಣವೆಂದರೆ ಭಾರತೀಯ ಸಂಸ್ಕೃತಿಯನ್ನಾಳುವ ಪ್ರಬಲ ಆಲೋಚನಾ ಕ್ರಮವೇ ಅಗ್ನಿಮೂಲದಿಂದ ಸೃಷ್ಟಿಯಾಗಿತ್ತು"[೯] ಆರ್ಯರು ಬಂದ ನಂತರ ದ್ರಾವಿಡರ ಮೇಲೆ ನೆಡೆದ ದಬ್ಬಾಳಿಕೆ ಮತ್ತು ದೌರ್ಜನ್ಯದ ಪ್ರಯೋಗದಿಂದ ಬುಡಕಟ್ಟು, ಸಮುದಾಯದ ಆಲೋಚನಾ ವಿಧಾನಗಳು ಮತ್ತು ಬದುಕಿನ ಕ್ರಮಗಳನ್ನು ಆರ್ಯೀಕರಣಗೊಳಿಸುವ ಅಥವಾ ಆ ಮಾಧ್ಯಮದ ಮೂಲಕ ನೋಡುವ ಕಾರಣಗಳಿಂದ ಈ ರೀತಿಯ ಚಿಂತನ ಗಂಗೆಯೊಂದು ಹರಿದುಬಂತು. ಇದು ಬುಡಕಟ್ಟು, ಸಮುದಾಯದ ಸ್ಮೃತಿಜಗತ್ತನ್ನು ತೇಲಿಸುವುದರ ಮೂಲಕ ತನ್ನ ಛಾಪನ್ನು ಒತ್ತಿಬಿಟ್ಟಿತ್ತು.

ಬಹುತೇಕ ಬುಡಕಟ್ಟಿನಲ್ಲಿ ಪ್ರಳಯದ ಕಲ್ಪನೆ ನೀರಿನಿಂದಲೇ ಆರಂಭವಾಗುತ್ತದೆ. ಇದನ್ನು ಜಲಪ್ರಳಯ ಎನ್ನಬಹುದು. ಹಾಗಂತ ವೈದಿಕ ಪುರಾಣದಲ್ಲಿಯೂ ಕೂಡಾ ಈ ಬಗ್ಗೆ ಉಲ್ಲೇಖವಿದೆ. ಮನುವಿಗೆ ಜಲಪ್ರಳಯದ ಸುದ್ದಿಯನ್ನು ಹೇಳಿದ್ದು ಮೀನು ಎಂಬುದನ್ನು ಶತಪತ ಬ್ರಾಹ್ಮಣ ತಿಳಿಸುತ್ತದೆ.

ಜೇನುಕುರುಬರಲ್ಲಿ ಜಲಪ್ರಳಯದ ಕತೆ ಉಲ್ಲೇಖಾರ್ಹ. ನೀರಿನಲ್ಲಿ ತೇಲುವ ಸೋರೆಬುರುಡೆ ಮತ್ತು ಅದರಲ್ಲಿ ಬದುಕುವ ಅಣ್ಣತಂಗಿಯರು ಗಂಡು ಹೆಣ್ಣನ್ನು ಸೃಷ್ಠಿಸಿದರೆಂದು ಆ ಮೂಲಕ ಜಗತ್ತಿನ ಹುಟ್ಟನ್ನು ವಿಸ್ತರಿಸಿದರೆಂದು ಹೇಳಲಾಗಿದೆ. ಕಾಡುಕುರುಬರಲ್ಲಿಯೂ ಕೂಡಾ ಇದೇ ರೀತಿ ಸೃಷ್ಠಿ ಪುರಾಣವಿದೆ.

ಅಲ್ಲಿ- ಅಣ್ಣ -ತಂಗಿಯರಲ್ಲಿಯೇ ಸಂಬಂಧ ಬೆಳೆಯುತ್ತದೆ. ಹಾಲಕ್ಕಿ ಒಕ್ಕಲಿಗರಲ್ಲಿ ಹಕ್ಕಿಯ ಮೊಟ್ಟೆಯಿಂದ ಜಗತ್ತು ಸೃಷ್ಠಿಯಾಗುತ್ತದೆ. ಹರಕಂತ್ರರಲ್ಲಿ ದೋಣಿಯಲ್ಲಿ ಪಯಣಿಸುವ ಅಣ್ಣ-ತಂಗಿಯರೇ ಸೃಷ್ಠಿಗೆ ಕಾರಣರಾಗುತ್ತಾರೆ. ಹಸಲರು ದರ್ಬೆಯಿಂದ ಹುಟ್ಟುತ್ತಾರೆ. ಕಾಡುಗೊಲ್ಲರಲ್ಲಿ ಈಶ್ವರಿನ ಬೆವರಿನಿಂದ ಸೃಷ್ಠಿಯಾರಂಭವಾಗುತ್ತದೆ.

ಕುರುಬರಲ್ಲಿ ಪಾರ್ವತಿಯ ಮಣ್ಣಿನಿಂದ ಮಾಡಿದ ಗೊಂಬೆಯಿಂದ ಸೃಷ್ಟಿಯಾಗುತ್ತದೆ. ಎಂಬ ನಂಬಿಕೆಗಳಿವೆ. ಅದೇ ರೀತಿ ದೀವರಲ್ಲಿಯೂ ಸಹ ಅವರ ಸೃಷ್ಠಿ 'ಕಾರೇಡಿ' (ಏಡಿ) ಯಿಂದ ಆಯಿತೆಂಬುದು ಉಲ್ಲೇಖನೀಯ. ದೀವರಲ್ಲಿ ನೀರು ''ಪೂರ್ಣತತ್ವ''ದ ಪ್ರತೀಕ. ಹುಟ್ಟು -ಸಾವು, ಮದುವೆಗಳಲ್ಲಿ, ಹಬ್ಬಗಳಲ್ಲಿ ನೀರಿನ ಪೂಜೆಯಿಲ್ಲದೆ ದೀವರನ್ನು ನೋಡಲಾಗುವುದಿಲ್ಲ. ''ಜಲಪ್ರಳಯ ಆಗಿ ಲೋಕವೆಲ್ಲ ನಾಶವಾದಾಗ ಮನುಷ್ಯ ಮೀನಿನ ಹೊಟ್ಟೆಯಲ್ಲಿ ಅಡಗಿಕೊಂಡ, ನೀರೆಲ್ಲ ಇಳಿದ ಮೇಲೆ ಮನು ಯಜ್ಞ ಮಾಡಿದಾಗ ಇಡಾದೇವಿಯು ಅವತರಿಸಿದಳು. ಇವಳಿಂದ ಉಂಟಾದುದು ಮನುಕುಲ.

''ಇಡಾ ಎಂಬುದು ಹಾಲು ಪೇಯ ಎಂಬ ಅರ್ಥದಲ್ಲಿದೆ.''[೬]ಹಾಲು ಎಂಬುದು ಮಾತೃತ್ವದ ಜೀವದ್ರವ್ಯವಾಗಿ ಕಾಣಿಸಿಕೊಂಡ ಈ ಪುರಾಣದ ಎಳೆಗಳು ಬುಡಕಟ್ಟು ಮೂಲದಲ್ಲಿರಬಹುದಾದುದನ್ನು ಗುರುತಿಸಬಹುದು.''

ಶಕ್ತಿವರ್ಧಕ ಉತ್ತೇಜಕ ಪೇಯ ಹಾಲು ಎಂಬರ್ಥದಲ್ಲಿ ''ಇಡಾ'' ಶಬ್ದದ ಪ್ರಯೋಗಗಳು ವೇದದಲ್ಲಿವೆ. ರಸ ಎಂಬುದು ಪೃಥ್ವಿಯ ಪರ್ಯಾಯನಾಮ. ಆದ್ದರಿಂದ ಇಡಾ ಪುತ್ರರು ಹಾಲುಮತದವರಾಗಿರುತ್ತಾರೆ. ಇಡೈಯಾಡ್ (ಈಡಿಗರು) ಎಂದು ತಮಿಳಿನಲ್ಲಿ ದನಗಾರರಿಗೆ ಉಂಟು ಅಂದರೆ ಜನಾಂಗಗಳ ಏಕೀಕೃತ ಕಾಲಘಟ್ಟದಲ್ಲಿ ಈ ರೀತಿಯ ಆಲೋಚನೆಯನ್ನು ಮುಖ್ಯವಾಗಿಟ್ಟು ಗಮನಿಸಬೇಕು.

ಮೊತ್ತಮೊದಲು ಆಹಾರ ಸಾಮಗ್ರಿಯಾಗಿ ಕುರಿದನಗಳನ್ನು ಸಾಕಲಾಗುತ್ತಿತ್ತು. ತಮಗಾಗಿ ಹಾಲು ಕರೆವುದು ಗೊತ್ತೆ ಇರಲಿಲ್ಲ. ಅದಕ್ಕೂ ಮೊದಲೇ ಹಾಲು ಎಂಬುದು ಬಳಕೆಯಲ್ಲಿದ್ದರೆ, ಅದು ಗಿಡದ ರಸ ರೂಪದ ಹಾಲೇ ಇರಬೇಕು. ಅತ್ತಿ, ಹಾಲ, ಅರಳಿಯಂತಹ ಗಿಡಗಳನ್ನು ''ಕ್ಷೀರ'' ವೃಕ್ಷಗಳೆಂದು ಬರೆಯಲಾಗಿದೆ. ಮದುವೆಗೆ ಮುಂಚೆ ತಮ್ಮ ಬೆಡಗಿನ ಗಿಡದ ಪೂಜೆ ಮಾಡಿ ಅದರ ಕೊಂಬೆಯನ್ನು ಹಂದರಕ್ಕೆ ಹಾಕುವುದು ವಾಡಿಕೆ. ಅದಕ್ಕೆ ''ಹಾಲುಗಂಭ'' ಎನ್ನುತ್ತಾರೆ. ಇದು ಬುಡಕಟ್ಟಿನಲ್ಲಿ ಎಲ್ಲೂ ಪ್ರಚಲಿತದಲ್ಲಿದೆ.

ಇದಕ್ಕೆ ದೀವರು ಹೊರತಾಗಿಲ್ಲ ''ವೈದಿಕ'' ಆರ್ಯ ಜೀವನಾರ್ತಗಳಲ್ಲಿ ಸಂಕೇತಿಸುವ ರೂಪಗಳನ್ನು ಜನಪದರ ಜೀವನಾರ್ತಗಳಲ್ಲಿ ''ನೀರು'' ನಿರ್ವಹಿಸುತ್ತದೆ. ''ವೈದಿಕರ ಪುರುಷರ ಕೇಂದ್ರಿತ ಚಿಂತನೆಗಳು ''ಅಗ್ನಿ'' ಸಂಸ್ಕೃತಿ ಆದರೆ ಜನಪದ ಸಂಸ್ಕೃತಿ ಪ್ರಕೃತಿ ಅಥವಾ ಸ್ತ್ರೀಕೇಂದ್ರಿತ ಚಿಂತನೆಯಾದ ಜಲಸಂಸ್ಕೃತಿಯಾಗಿದೆ.''[೭]

ಮಾತೃ ಮೂಲೀಯ ಸಂಸ್ಕೃತಿಯಿಂದ ಬಂದ ದೀವರು ಈ ರೀತಿ ಸ್ತ್ರೀ ಕೇಂದ್ರಿತ ಜಲಸ್ವರೂಪಿಗೆ ತೀರಾ ಹತ್ತಿರವಾಗಿದ್ದು, ನೀರಿನ ಪೂಜೆ ಮಾಡುವುದರ ಮೂಲಕ ತಮ್ಮ ಹಬ್ಬಗಳನ್ನು ಆಚರಿಸುತ್ತಾರೆ. ದೀವರ ಸೃಷ್ಟಿಪುರಾಣಗಳಲ್ಲಿ ಮೊದಲು ಹೊನ್ನಿನ ಮಳೆ ಬಂದರೆ ನಂತರ ಅಗ್ನಿಯ ಮಳೆ ಸುರಿಯುತ್ತದೆ. ಅದರಿಂದ ಸುಟ್ಟು ಕರಕಲಾಗುವವರೆಗೂ ಜೀವದಾಹಿಯಾಗಿ ಜಲಪ್ರಳಯ ಸಂಭವಿಸುತ್ತದೆ. ಬೆಂಕಿ ದಹಿಸುವ ಮತ್ತು ಆಕ್ರಮಣದ ಸೂಚನೆ ನೀಡಿದರೆ, ನೀರು ಬೆಂಕಿಯನ್ನು ಆರಿಸುತ್ತಾ, ಜೀವದ್ರವ್ಯವಾಗಿ ಕೆಲಸ ಮಾಡುತ್ತದೆ. ದೀವರು ಇಂತಹ ಜೀವ ದ್ರವ್ಯದ ಮೂಲದಿಂದ ತಮ್ಮ ಬದುಕಿನ ಸೃಷ್ಟಿಯನ್ನು ಆರಂಭಿಸಿಕೊಂಡಿದ್ದಾರೆ.

ಅಡಕಲು ಅಥವಾ ಇಡಕಲು ಎಂದು ಕರೆಯಲ್ಪಡುವ ನೀರು ತುಂಬಿಡುವ ಜಾಗ ದೀವರ ಪವಿತ್ರ ಕೇಂದ್ರ. ಹೊಸ ಅಡುಗೆ ಮಾಡಿದಾಗ ಅಲ್ಲಿಯೇ ಆ ಅಡುಗೆಯನ್ನು ಹಿರಿಯರಿಗೆಂದು ಇಡುತ್ತಾರೆ. ಮಣ್ಣಿನ ಅಥವಾ ತಾಮ್ರದ ಹಂಡೆಯೇ ಹೆಣ್ಣು ಪಕ್ಕದ ಕೊಡ ಗಂಡು. ಅವರಿಬ್ಬರು ದೀವರ ಹಿರಿಯರು ಅವರಿಗೆ ಪೂಜೆ ಇಲ್ಲದೆ ಏನು ನಡೆಯುವುದಿಲ್ಲ ಹೊಸ ಮದುವಣಗಿತ್ತಿ ಬಂದಾಗ ಮೊದಲು ಪೂಜೆ ಇಡಕಲಿಗೆ ಮಾಡುತ್ತಾರೆ. ಹಾಗಾಗಿ ಇಡಕಲು ಮತ್ತು ನೀರಿಗೆ ಹೆಚ್ಚು ಆದ್ಯತೆ.

ದೀವರ ಹಿಂದಿನ ಕಾಲದ ಮನೆಗಳಲ್ಲಿ ಅಡುಗೆ ಮಾಡುವ ಒಲೆ ಒಂದು ಮೂಲೆಯಲ್ಲಿದ್ದರೆ ಆ ಒಲೆಗೆ ಹೊಂದಿಕೊಂಡೇ ಇಡಕಲು, ಆ ಇಡಕಲು ತುದಿಗೆ ನೀರಿನ ಹರವಿ ಇರುತ್ತಿತ್ತು. ಆಶ್ಚರ್ಯವೆಂದರೆ ಒಂದು ತುದಿಗೆ ಬೆಂಕಿ, ಒಂದು ತುದಿಗೆ ನೀರು ಮತ್ತು ಜೀವ ಜಗತ್ತನ್ನು ಸೃಷ್ಟಿಸಿ ಹೋದ ಹಿರಿಯ ಪರಂಪರೆ, ದಹನಶೀಲ ಬೆಂಕಿ ಇಲ್ಲಿ ಬದುಕಿನ ಚೈತನ್ಯದ ಮೂಲಸ್ಫೂರ್ತಿ.

ನೀರು ಜೀವದಾಹಿ. ಇವೆರಡನ್ನು ಸಮತಲದಲ್ಲಿಡುವ ಕ್ರಿಯೆ ಒಂದು ಕಾಲದಲ್ಲಿ ಒಂದು ಸಮುದಾಯದ ಆಲೋಚನಾ ವಿಧಾನಗಳ ಮೇಲೆ ನಡೆದಿರಬಹುದಾದಂತ ಸಂಗತಿಯಾಗಿದೆ. ತನ್ನ ಮೂಲ ಚೈತನ್ಯದ ಸೆಲೆಗಳನ್ನು ಬತ್ತಿಸಿಕೊಳ್ಳಲಾರದೇ ಇಡಿಕಲ್ಲಿನಲ್ಲಿ ಪ್ರತಿಷ್ಠಾಪಿಸಿಕೊಳ್ಳುತ್ತದೆ. ಆದ್ದರಿಂದ ನೀರು ದೀವರಿಗೆ ಪವಿತ್ರ.

ಮದುವೆಯ ಆಚರಣ ವಿಧಿಗಳು ಆರಂಭವಾಗುವುದೇ ನೀರು ತರುವುದರ ಮುಖಾಂತರ. ಅದನ್ನು ದೇವಗೌರ ನೀರು ಎನ್ನುತ್ತಾರೆ. ಮದುವೆ ನಡೆದಾಗ ಧಾರೆ ಎರೆವುದೇ ಈ ನೀರಿನಲ್ಲಿ ಹೊಸ ಮದುವಣಗಿತ್ತಿ ಗಂಡನ ಮನೆಯ ಬದುಕನ್ನು ಆರಂಭಿಸುವುದು ನೀರು ತರುವುದರ ಮುಖಾಂತರ.

ಗೌರಿಹಬ್ಬದಲ್ಲಿ ಗೌರಿತರುವುದೆಂದರೆ, ಬೂರೆ ಕುಂಭದಲ್ಲಿ ನೀರು ತರುವುದೆಂದೇ ಆಗಿದೆ. ಅಂತಿಮವಾಗಿ ಅದು ನೀರು ಪೂಜೆಯೆ ಆಗಿರುತ್ತದೆ. ಗೌರಿ ಹಾಗೂ ಬೂರಜ್ಜಿಯನ್ನು ನೀರಿನ ಮೂಲಕ ಪೂಜಿಸುವುದು ಅತ್ಯಂತ ಗಮನಾರ್ಹವಾದದ್ದು.

ನೀರು ದೀವರ ಆರಾಧ್ಯವಾಗಲಿಕ್ಕೆ ಕಾರಣವೇನಿರಬಹುದು ಎಂಬ ಪ್ರಶ್ನೆಗೆ:

೧. ದೀವರು ಬುಡಕಟ್ಟಿನ ಜಲಮೂಲಕ್ಕೆ ಸೇರಿದವರು.

೨. ವೈದಿಕರ ಅಗ್ನಿಗೆ ವಿರುದ್ಧವಾಗಿ ಚಂದ್ರನ ಕತ್ತಲ ಲೋಕಕ್ಕೆ ಸೇರಿದವರು.

೩. ನೀರಿನಿಂದ ಸೃಷ್ಟಿಯಾದ ಪುರಾಣಗಳ ಒಳಾವರಣದಲ್ಲಿ ದೀವರು ನೀರಿನಿಂದ ಬಂದವರಿರಬಹುದು ಎಂಬುದಕ್ಕೆ ಇನ್ನಷ್ಟು ಪುಷ್ಟಿ ಕೊಡುತ್ತದೆ. ದೀವರು; ದ್ವೀಪವಾಸಿಗಳು, ಈಗಲೂದೀವ್ ಎಂಬ ಪ್ರದೇಶವೇ ಕಡಲ ತೀರಗಳಲ್ಲಿ ಕಂಡು ಬರುತ್ತದೆ. ಉದಾ: ಅಂಜದೀವ್, ದಮನ್‌ದೀವ್.

೪. ತಮ್ಮ ಬದುಕಿನ ಬಹುಭಾಗವನ್ನು ಉತ್ತರಭಾರತ, ಉತ್ತರ ಕರ್ನಾಟಕದಲ್ಲಿ ಕಳೆದುದರಿಂದ ನೀರಿಗೆ

ಬರಗಾಲ ಬಂದಿದ್ದರಿಂದ ಅಥವಾ ಅಲ್ಲಿ ನೀರಿಗೆ ಬರವಿದ್ದರಿಂದ ನೀರು ಹೆಚ್ಚು ಪವಿತ್ರವಾಗಿರಬೇಕು ಎಂಬ ಭಾವಗಳಿದ್ದರೂ, ದೀವರು ನೀರಿನ ಮೂಲದಿಂದ ಬಂದವರಾದ್ದರಿಂದ ಅನಿವಾರ್ಯವಾಗಿ ಜನ ಕೇಂದ್ರಿತ ಸಾಂಪ್ರದಾಯಿಕ ಆಚರಣೆಗಳನ್ನು ಹೆಚ್ಚು ರೂಢಿಗೊಳಿಸಿಕೊಂಡಿರಬೇಕು.

ಪ್ರಧಾನಧಾರೆಯ ಅವಿರತ ದಮನದ ಪುರಾಣ ಕಥೆಗಳು, ಆಚರಣೆಗಳು, ಹೇರುವಿಕೆಯ ಮಧ್ಯೆಯೂ ತನ್ನ ತನವನ್ನು, ಸಾಂಸ್ಕೃತಿಕ ವಿಶಿಷ್ಟಾಂಶಗಳನ್ನು, ನಿಸರ್ಗದ ನೆಲೆಗಳೊಂದಿಗೆ ಏಕೀಭವಿಸಿ, ಸಾಂಕೇತವಾಗಿಯಾದರೂ ಆಚರಣೆಗಳಲ್ಲಿ ಉಳಿಸಿಕೊಂಡಿರುವುದು ಬಹುಮುಖ್ಯ ಆಲೋಚನೆ ಎಂದುಕೊಂಡಿದ್ದೇನೆ. ಇದನ್ನೇ ಸಂಸ್ಕೃತಿಯ ಪರಿಕಾರ ಎನ್ನುವುದು. ವಸಾಹತುಶಾಹಿ, ನವವಸಾಹತುಶಾಹಿ, ಆಧುನಿಕತೆ, ವೈದಿಕ ಪ್ರಲೋಭನೆ ಮುಂತಾದ ಜಾಣತನದ ಧಾಳಿಯ ಮಧ್ಯಯು ಗಾಢ ಅವಿಸ್ಮರಣೆ ಹೊಂದಿರುವುದೇ ಒಂದು ಜೀವಂತ ಸಮುದಾಯದ ಚಲನಶೀಲತೆ ಎನ್ನಬಹುದು.

### ಅಡಿ ಟಿಪ್ಪಣಿಗಳು

೧. ವೆಂಕಟರಾವ್ ಡಿ., (೧೯೮೫), ಕೃಷಿಬೆಳವಣಿಗೆ, ಪು. ೮

೨. ಮೃತ್ಯುಂಜಯ ಹೊರಿಕೇರಿ., (೧೯೯೮), ರೈತ ಜಾನಪದ, ಪು. ೧೭

೩. ಅದೇ., ಪು. ೧೮

೪. ಆರ್ಯ ಈಡಿಗ ಸಮಾವೇಶ, ಪು. ೩೭

೫. ಕಾರವಾರ ಜಿಲ್ಲೆಯ ಜಾನಪದ ಗೀತೆಗಳು, (೧೯೮೨), ಪು. ೭೫

೬. ಮಧುಗಣಪತಿರಾವ್ ಮಡೆನೂರು., ದೀವರ ಮೂಲ ಯಾವುದು, ಪು. ೭೮

ಕೃಷಿಯ ಮೂಲವನ್ನು ನಿಖರವಾಗಿ ಹೇಳಲು ಅಸಾಧ್ಯ ಏಕೆಂದರೆ ಕೃಷಿನಾಗರೀಕತೆ ಪ್ರಾಚೀನವಾದುದು. ಕೃಷಿಯು ಮನುಷ್ಯನ ಅತೀ ಪ್ರಾಚೀನ ಉದ್ಯೋಗವೆಂದು ಪರಿಗಣಿಸಲ್ಪಟ್ಟಿದೆ. ಭೂಮಿ ರಚಿತವಾದ ಮೇಲೆ ಸಸ್ಯ ಹಾಗೂ ಪ್ರಾಣಿವರ್ಗಗಳು ಕಾಣಿಸಿಕೊಂಡಾಗಿನಿಂದ ಇದುವರೆಗೆ ಆಗಿರುವ ಬೆಳವಣಿಗೆಗಳ ಕಥೆ ಕುತೂಹಲಕಾರವಾಗಿದೆ. ಮೊದಲು ಸಸ್ಯ ಹೇಗೆ ಉದ್ಭವಿಸಿತು? ಯಾವ ರೀತಿಯ ಅದರ ಬೆಳವಣಿಗೆ ಪ್ರಾರಂಭವಾಯಿತು? ಮುಂದೆ ಅದು ಹೇಗೆ ಅಭಿವೃದ್ಧಿ ಹೊಂದಿತು? ಸಸ್ಯ ಜಾತಿಗಳಲ್ಲಿಯ ಸಹಸ್ರಾರು ವೈವಿಧ್ಯತೆಗಳ ಗುಟ್ಟೇನು? ಇವೆಲ್ಲ ಪ್ರಶ್ನೆಗಳಿಗೆ ಉತ್ತರ ಕೊಡಲು ಸಾಧ್ಯವಾಗಿಲ್ಲ. ಈ ಬಗ್ಗೆ ಸತ್ಯಾಂಶವನ್ನು ಕಂಡುಹಿಡಿಯಲು ಅನೇಕ ಸಂಶೋಧನೆಗಳನ್ನು ಕೈಗೊಳ್ಳಲಾಗುತ್ತದೆ. ಆದರೂ ನಿರ್ಧಿಷ್ಟ ಫಲ ದೊರೆತಿಲ್ಲ. ಒಟ್ಟಿನಲ್ಲಿ ಸಸ್ಯಶಾಸ್ತ್ರದ ಗಹನತೆ ಸಾಮಾನ್ಯರ ತಿಳುವಳಿಕೆಗೆ ಮೀರಿದೆ ಎನ್ನಬಹುದು. ''ಆತ್ಮದಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ಪೃಥ್ವಿ ಇದು ಸೃಷ್ಟಿನಿಯಮದ ಕ್ರಮವೆಂದು ಹೇಳಲಾಗಿದೆ.''[೧]

ಸುಮಾರು ೧೦ವರ್ಷಗಳ ಹಿಂದೆ ಮಾನವನು ಹಲವಾರು ಪ್ರಾಣಿಪಕ್ಷಿಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ಹಸಿಯಾಗಿಯೇ ತಿಂದು ಜೀವಿಸುತ್ತಿದ್ದ. ಇದರಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಆಹಾರ ಹುಡುಕುತ್ತ ಸಂಚಾರ ಮಾಡುತ್ತಿದ್ದ, ಕ್ರಮೇಣ ಅವನ ಬಯಕೆಗಳು ಹಲವಾರು ಸ್ವರೂಪಗಳನ್ನು ತಾಳಿ ಅಲೆದಾಟ ನಿಲ್ಲಿಸಿ, ಸಮೃದ್ಧವಾಗಿ ತನಗೆ ದೊರೆಯುವ ಸಂಪನ್ಮೂಲಗಳ ಹತ್ತಿರ ಜೀವಿಸಿ, ಬುದ್ಧಿ ವಿಕಾಸವಾದಂತೆಲ್ಲ ಅವಶ್ಯಕತೆಗೆ ತಕ್ಕಂತೆ ಕೃಷಿಯನ್ನು ರೂಢಿಸಿಕೊಂಡನು. ಬರುಬರುತ್ತಾ ಮಾನವನಿಗೆ ಕೃಷಿ ಒಂದು ಜೀವನ ಕ್ರಮವೇ ಆಯಿತು. ಇದೇ ಸಮಯದಲ್ಲಿ ಪಶುಪಾಲನೆಯು ಪ್ರಾರಂಭವಾಯಿತು. ಇತ್ತೀಚಿಗೆ ದೊರೆತಿರುವ ''ಪ್ರಾಚೀನ ಸಂಶೋಧನೆಗಳಿಂದ ಇರಾಕಿನ ಕಝಿಕಿಸ್ಥಾನದ 'ಜಾರ್‌ಮೋ' ಎಂಬ ಸ್ಥಳದಲ್ಲಿ ಮತ್ತು ಝಾಗ್ರೋಸ್ ಗುಡ್ಡಗಾಡು ಪ್ರದೇಶದಲ್ಲಿ ಸುಮಾರು ಕ್ರಿ.ಪೂ. ೬೦೦೦ ಮತ್ತು ೭೦೦೦ವರ್ಷಗಳ ಹಿಂದೆ ಕೃಷಿ ಪಶುಪಾಲನೆ ಸಾಕಷ್ಟು ಮಟ್ಟಿಗೆ ಇತ್ತೆಂದು ತಿಳಿದುಬಂದಿದೆ.''[೨]

ಕ್ರಿ.ಪೂ. ೬೦೦೦ರಲ್ಲಿ ಮೆಕ್ಸಿಕೋ ದೇಶದಲ್ಲಿ ಕುಂಬಳ, ಮೆಣಸು ಇತ್ಯಾದಿಗಳನ್ನು ಬೆಳಯಲಾಗುತ್ತಿತ್ತು. ಕ್ರಿ.ಪೂ. ೩೦೦೦ ವರ್ಷಗಳಷ್ಟು ಹಿಂದೆಯೇ ಚೀನಾದಲ್ಲಿ ಭತ್ತ ಬೆಳೆಯುತ್ತಿದ್ದರೆಂದು ಹೇಳಲಾಗಿದೆ. ''ಮೆಕ್ಸಿಕೋ, ಈಜಿಪ್ತ್, ಯುನೈಟೆಡ್, ಸಿಂಧು ಬಯಲು ನಾಗರೀಕತೆ, ಗಂಗಾನದಿಯ ಬಯಲುಗಳಲ್ಲಿ, ಕೃಷಿಯ ಕುರುಹುಗಳು ಕಾಣಿಸಿವೆ.''[೩] ಈಜಿಪ್ತ್ ದೇಶದಲ್ಲಿ ನೈಲ್‌ನದಿಯು ಬೆಬಿಲೋನಿಯಾದಲ್ಲಿ ಯುಫ್ರಟೀಸ್ ಮತ್ತು ಟೈಗ್ರೀಸ್ ನದಿಗಳು ಬೆಳೆಗೆ ಬೇಕಾದ ನೀರನ್ನು ಒದಗಿಸುತ್ತಿದ್ದವು. ಮಹಾಪೂರಕಗಳಿಂದ ಭೂಮಿಗೆ ಫಲವತ್ತತೆಯ ಸಾರ ದೊರೆಯುತ್ತಿತ್ತು. ''ಯಾಂಗ್, ಸಿಕಿಯಾಂಗ್ ನದಿಯ ಕೊಳ್ಳದಲ್ಲಿ, ಪುರಾತನ ಪ್ರದೇಶ ಚೀನಾ, ಸಿಂಧೂ, ಗಂಗಾನದಿಗಳ ಕೊಳ್ಳದಲ್ಲಿ, ಭಾರತ, ನೈಲ್‌ನದಿಯ ಕೊಳ್ಳಗಳಲ್ಲಿ, ನೆಲಸಿದ ಗ್ರೀಕ್ ಸಾಮ್ರಾಜ್ಯ ಇವು ಆಗಿನ ಕಾಲದಲ್ಲಿ ''ಸಭ್ಯತೆಯ ತೊಟ್ಟಿಲು'' ಗಳೆಂದು ಹೆಸರು ಪಡೆದಿದ್ದವು.''[೪]

ಪ್ರಾಚೀನ ಕಾಲದಲ್ಲಿ ಪ್ರದೇಶಗಳು ಕೃಷಿಕೇಂದ್ರೀಕೃತವಾಗಿದ್ದವು ಎನ್ನುವುದಕ್ಕೆ ಇದು ಸ್ಪಷ್ಟನಿದರ್ಶನ. ಈ ರೀತಿಯ ತಲತಲಾಂತರಗಳಿಂದಲೂ ಮಾನವನ ಬದುಕಿನಲ್ಲಿ ಕೃಷಿಮಂತ್ರ ನುಡಿಯುತ್ತ ಬಂದಿದೆ. ಅನಾದಿಕಾಲದಿಂದಲೂ ಕೃಷಿ ಮಾನವನ ಬದುಕಿನ ಜೀವನಾಡಿಯಾಗಿದೆ ಎಂದು, ಅಂದಿನಿಂದಲೇ ಕೃಷಿಯ ಜೊತೆಗೆ ಕೃಷಿ ಉಪಕರಣಗಳ ಬಳಕೆ ಇತ್ತು ಎಂಬುದನ್ನು ತಿಳಿಯಬಹುದು. "ಕೃಷಿಕರ ಕೈಗಳ ಮುಂದುವರಿಕೆಯೇ ಕೃಷಿ ಉಪಕರಣಗಳ ಕೃಷಿತಂತ್ರ ಜ್ಞಾನದ ಮುಖ್ಯನೆಲೆಗಳು,"[೫] ಈ ಉಪಕರಣಗಳ ವಿನ್ಯಾಸದಲ್ಲಿ ಸಿದ್ಧಗೊಳಿಸುವ ವಸ್ತುಗಳ ಬಳಕೆಯಲ್ಲಿ ಕಂಡುಬರುತ್ತವೆ. ಕೊಯ್ಯುವ ಚಿಕ್ಕಕುಡುಗೋಲಿನಿಂದ ಹಿಡಿದು ಹಲವಾರು ಸಂಕೀರ್ಣ ಆಶೆಗಳಿರುವ ನೇಗಿಲುಗಳಿಂದ ಹಿಡಿದು ಬಂಡಿಗಳವರೆಗೂ ಉಪಕರಣಗಳ ವ್ಯಾಪ್ತಿ ಹರಡಿದೆ. ಈ ವಿಭಾಗದಲ್ಲಿ ಕೃಷಿ ಉಪಕರಣಗಳ ವೈವಿಧ್ಯಮಯವನ್ನು ಪ್ರತಿನಿಧಿಸುವ ಪದರಚನೆಗಳನ್ನು ನಾವು ನೋಡಬಹುದು. ಈ ಎಲ್ಲಾ ಕೃಷಿ ಉಪಕರಣಗಳ ಜೊತೆಗೆ ದೀವರು ಪ್ರಮುಖ ಪಾತ್ರವನ್ನು ವಹಿಸುತ್ತಾರೆ. ನಾಡಿನ ಜನಜೀವನದ ಮುಖ್ಯವೃತ್ತಿಗಳಲ್ಲಿ ಕೃಷಿಯು ಒಂದು. ಕೃಷಿಯ ಸಂಸ್ಕೃತಿಯ ಆರ್ಥಿಕ ಚಟುವಟಿಕೆಗಳಲ್ಲಿ ಮಾನವ ಶಾಸ್ತ್ರಜ್ಞರು ಹೇಳುವಂತೆ ಪಶುಪಾಲನೆಯ ಹಂತ ಕಳೆದ ಮೇಲೆ ಕೃಷಿಯು ಅದರೊಟ್ಟಿಗೆ ಬೆಳೆದು ಬಂದಿದ್ದಾಗಿದೆ. ಉತ್ಪಾದನೆಯ ಮುಖ್ಯಗುರಿಯಾಗಿಸಿಕೊಂಡಿದ್ದ ಈ ಚಟುವಟಿಕೆಯ ಸ್ವರೂಪ ಸಹಸ್ರಾರು ವರ್ಷಗಳಿಂದ ತೀವ್ರರೂಪದ ಬದಲಾವಣೆಗೆ ಒಳಗಾಗದೇ ಉಳಿದಿದೆ. ಆದರೆ ಆಧುನಿಕ ತಂತ್ರಜ್ಞಾನದ ಪ್ರವೇಶದಿಂದಾಗಿ ಕೃಷಿ ತನ್ನ ಸಂಪ್ರದಾಯಿಕ ಲಕ್ಷಣಗಳನ್ನು ಬಿಟ್ಟುಕೊಡುವುದು ಅನಿವಾರ್ಯವಾದರೂ ತಮ್ಮ ಮೂಲಸ್ಥಿತಿಯನ್ನು ನಾವು ಹಳ್ಳಿಗಳಲ್ಲಿ ಈಗಲೂ ನೋಡಬಹುದು. ಕೃಷಿಗೆ ಪೂರಕವಾದ ಉಪಕರಣಗಳ ಸ್ವರೂಪದಲ್ಲಿ ಪ್ರಾದೇಶಿಕ ಭಿನ್ನತೆ ಇರುತ್ತದೆ. ಈ ಭಿನ್ನತೆ ಆಯಾ ಪ್ರದೇಶದ ಕೃಷಿಯ ವಿಧಾನ ಅವಶ್ಯಕತೆಯನ್ನು ಅವಲಂಬಿಸಿರುವುದು ಸಹಜವಾಗಿದೆ.

**ಕೃಷಿ ಉಪಕರಣಗಳ ರೂಪಾಂತರ**

ಕೃಷಿಕನ ಬದುಕಿಗೆ ವ್ಯವಸಾಯದ ಸಾಧನಸಾಮಗ್ರಿಗಳು ಅತ್ಯಗತ್ಯವಾದವುಗಳು. ಊಳಲು ನೇಗಿಲು, ಹರಗಲು ಕುಂಟೆ, ಬಿತ್ತಲು ಕೂರಿಗೆ, ಸಾಲುಮುಚ್ಚಲು ಕೊರಡು, ಎತ್ತುಗಳ ಕೊರಳಿಗೆ ಹಾಕಲು ನೊಗ, ಕೇರಲು ಮೊರ ಹೊತ್ತಯ್ಯಲು ಬುಟ್ಟಿ, ಕೊಯ್ಯಲು ಕುಡುಗೋಲು, ಕತ್ತರಿಸಲು ಕೊಡಲಿ, ಧಾನ್ಯ ರಕ್ಷಿಸಲು ಕಣಜ ಹೀಗೆ ಅವನ ಸಾಧನ ಸಾಮಗ್ರಿಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಇವುಗಳ ಅಗತ್ಯವೆಷ್ಟೆಂಬುದನ್ನು ಮನದಟ್ಟು ಮಾಡಲು "ಹತಾರ ಇಲ್ಲದವನು ಹೊತಾರೆ ಬಾ" "ಮುಟ್ಟು ಇಲ್ಲಂತ ಮೂರು ಮನೆಗೆ ಹೋದರೆ ಕೆಟ್ಟಿತವನ ಒಕ್ಕಲುತನ" ಮುಂತಾದ ಗಾದೆ ಮಾತುಗಳೇ ಸೃಷ್ಟಿಯಾಗಿವೆ. ರೈತನ ಬದುಕಿನ ಅಂಗಗಳಾಗಿರುವ ಈ ಸಾಧನ ಸಾಮಗ್ರಿಗಳು ಮಾನವನ ತಾಂತ್ರಿಕ ಅವಿಷ್ಕಾರದ ವಿಕಾಸವನ್ನೇ ಸೂಚಿಸುತ್ತವೆ.

ರೈತನ ವ್ಯವಸಾಯ ಎಂದ ಕೂಡಲೇ ನಮ್ಮ ಕಣ್ಣದುರು ನಿಲ್ಲುವ ಉಪಕರಣ ನೇಗಿಲು. ವ್ಯವಸಾಯದ ಬೆಳವಣಿಗೆಯಲ್ಲಿ ಸಾಧನ ಸಾಮಗ್ರಿಗಳ ಇತಿಹಾಸ ನೋಡಿದರೆ, ನೇಗಿಲು ಇತ್ತೀಚಿನದು. ವ್ಯವಸಾಯ ಹೇಗೆ ಪ್ರಾಗೈತಿಹಾಸಿಕ ಕಾಲಕ್ಕೆ ಸೇರುತ್ತವೆ. ವ್ಯವಸಾಯದ ಮೊಗಲ ಹಂತದಲ್ಲಿ "ಶಿಲಾಯುಗದ ಮಾನವನು ಮೊದಲು ಬಳಸಿರಬಹುದಾದ ಉಪಕರಣ ಗುಳಿದಸಿ (Diddle)ಅಥವಾ ಚೂಪಾದ ಕೋಲು(Pointed Stick) ಇದು ಒಂದು ಕಟ್ಟಿಗೆಯ ತುಂಡು. ಒಂದು ಕಡೆ ಚೂಪಾಗಿರುತ್ತಿತ್ತು ಉದ್ದವಾಗಿರುತ್ತಿದ್ದ, ಇದನ್ನು ಕಂದ ಮೂಲಗಳನ್ನು ಅಗೆಯಲು ಮರದೊಳಗಿನ ಹಣ್ಣು ಹಂಪಲುಗಳನ್ನು ಬೀಳಿಸಲು, ಉರುವಲಿಗಾಗಿ ಒಣಗಿದ ಕಂಟಿಗಳನ್ನು ಕೆಡವಲು ಬಳಸಲಾಗುತ್ತಿತ್ತು."[೬] ಈ ಆಯುಧವನ್ನು ಹೆಚ್ಚಾಗಿ ಸ್ತ್ರೀಯರು ಉಪಯೋಗಿಸುತ್ತಿದ್ದರು.

ಪಶುಪಾಲನೆಯ ಸಂದರ್ಭದಲ್ಲೂ ಬಳಕೆಗೆ ಬರುತ್ತಿದ್ದ ಈ ಚೂಪಾದ ಕೋಲು ರಕ್ಷಣಾತ್ಮಕ ಆಯುಧವಾಗಿ ಬಳಕೆ ಆದದ್ದು ಇದೆ. ಈ ರೀತಿಯ ಕೃಷಿಪದ್ಧತಿಯನ್ನು ರೈತ ಪ್ರಾಗೈತಿಹಾಸಿಕ ಕಾಲದಿಂದಲೂ ಅನುಸರಿಸಿಕೊಂಡು ಬಂದಿರುವಂತದ್ದನ್ನು ಕೃಷಿಪರಿಕರಗಳ ನಿಯಮಕ್ಕನುಸಾರವಾಗಿ ತಿಳಿಯಬಹುದಾಗಿದೆ. ಕೃಷಿಯು ಒಂದು ಸಮುದಾಯದ ಬದುಕಿನ ರೂಪರೇಷೆಗಳನ್ನು ಅವತರಿಸಲು ಪ್ರಮುಖ ಕಾರಣವಾಗಿದೆ. ಎನ್ನುವುದನ್ನು ಮನಗಾಣಬಹುದಾಗಿದೆ. ಉಪಕರಣದ ಬೆಳವಣಿಗೆಯ ಎರಡನೆಯ ಹಂತವೆಂದರೆ ಗುದ್ದಲಿ (Hole)ಇದೊಂದು ಮುಂಬಾಗದಲ್ಲಿ ಬಾಗಿದ ಉಪಕರಣ ಅಥವಾ ಬಾಗಿದ ಮರದ ತುಂಡು. ಚೂಪಾದ ಕೋಲು ಅಗೆಯುವ ಸಾಧನವಾದರೆ ಇದು ಕಡಿಯುವಂತದ್ದು ಮತ್ತು ಅದಕ್ಕಿಂತ ಪರಿಣಾಮಕಾರಿಯಾದುದು. ನೆಲವನ್ನು ಆಳಕ್ಕೆ ಅಗೆಯುವುದಷ್ಟೇ ಅಲ್ಲದೆ ಜೊತೆಗೆ ಮಣ್ಣನ್ನು ತಿರುವಿ ಹಾಕಲು ಈ ಉಪಕರಣದಿಂದ ಸಾಧ್ಯವಾಯಿತು. ಈ ಆಯುಧವೇ ಮುಂದೆ ''ಅಗಲವಾದ ಗುದ್ದಲಿಯಾಗಿ, ಕೊಡಲಿಯಾಗಿ ಬೆಳವಣಿಗೆಯಾಗಿರುವಂತೆ ತೋರುತ್ತದೆ.''[೬] ಕಾಲಕ್ರಮೇಣ ಮರದ ಬಾಗಿದ ತುಂಡು ಕೆಲಸಕ್ಕೆ ಅಸಮರ್ಥ ಎನಿಸಿದಾಗ ಮುಂಭಾಗಕ್ಕೆ ಚೂಪುಗಲ್ಲುಗಳನ್ನು ಪ್ರಾಣಿಗಳ ಮೂಳೆಗಳನ್ನು ಕಟ್ಟಿ ಭದ್ರವಾಗಿ ಕಟ್ಟಿ ಬಳಸಲಾಯಿತು. ಲೋಹಯುಗಕ್ಕೆ ಮನುಕುಲವು ಕಾಲಿಡುವವರಿಗೂ ಈ ಪ್ರಯತ್ನ ಸತತವಾಗಿ ನೆಡೆದಿರುವಂತೆ ತೋರುತ್ತದೆ. ''ಮರದ ತುಂಡೊಂದಕ್ಕೆ ಎಮ್ಮೆಯ ಬುಜದ ಮೂಳೆಯನ್ನೋ, ಆಮೆಯ ಚಿಪ್ಪಿನ ತುಂಡಾದ ಭಾಗವನ್ನೋ ಕಟ್ಟಿ ಗುದ್ದಲಿಯಾಗಿ ಬಳಸಿರುವ ಪ್ರಾಚೀನ ಉದ್ಧಾಹರಣೆಗಳು ಸಿಗುತ್ತವೆ. ಇವು ಸಾಧನ ಸಾಮಗ್ರಿಗಳು. ರಕ್ಷಣಾತ್ಮಕ ಆಯುಧಗಳಷ್ಟೇ ಅಲ್ಲದೇ ವಿನಿಮಯದ ಸಾಧನಗಳು ಆಗಿದ್ದವು.''[೭] ಎಂಬುದನ್ನು ನಾವು ಗಮನಿಸಬೇಕಾಗಿದೆ. ಅಂದರೆ ಸಾಧನ ಸಾಮಗ್ರಿಗಳಿಗೆ ಆರ್ಥಿಕ ಮಹತ್ವವು ಇತ್ತು. ಈ ವಕ್ರ ಆಕಾರದ ಮರದ ತುಂಡೇ ಮುಂದೆ ನೇಗಿಲಾಗಿ ಪರಿವರ್ತನೆಯಾಗಿದೆ. ಅದನ್ನೇ ನಿಧಾನವಾಗಿ ದೊಡ್ಡ ಆಕಾರಕ್ಕೆ ತಂದುಕೊಂಡಂತೆ ಕಾಣುತ್ತದೆ. ಈಜಿಪ್ಟಿನ ಸಂಸ್ಕೃತಿಯಲ್ಲಿ ದೊರಕುವ ಚಿತ್ರಗಳು ಮತ್ತು ಆಧಾರಗಳು ಈ ಅಂಶವನ್ನು ಸಮರ್ಥಿಸುತ್ತವೆ. ''ಶಿಲಾಯುಗ ಮತ್ತು ನವಶಿಲಾಯುಗದವರೆಗೆ ಮರದ ನೇಗಿಲು ಬಳಕೆಯಲ್ಲಿದ್ದು ಅದನ್ನು ಮನುಷ್ಯರೇ ಎಳೆದು ಉಳಿಮೆ ಮಾಡುತ್ತಿದ್ದರೆಂದು''[೮] ವಿದ್ವಾಂಸರು ಪ್ರತಿಪಾದಿಸುತ್ತಾರೆ.

ಇಂತಹ ನೇಗಿಲು ಮನುಕುಲದ ಇತಿಹಾಸದಲ್ಲಿ ಪಶುಪಾಲನೆಯ ಜೊತೆಗೆ ಬೆಳೆದು ಬಂದಿದೆ. ಉಳುಮೆಗೆ ತಯಾರಾದ ಈ ಉಪಕರಣ ಮೊದಲು ಮಾನವರಿಂದ ಎಳೆಯಲ್ಪಡುತ್ತಿದ್ದು, ಕಾಲಕ್ರಮೇಣ ಮನುಷ್ಯ ಪಳಗಿಸಿದ ಕುದುರೆ, ಎತ್ತು ಮುಂತಾದ ಪ್ರಾಣಿಗಳಿಂದ ಎಳೆಯುವಂತಾಯಿತು. ನೇಗಿಲು ಮತ್ತು ಪ್ರಾಣಿಗಳ ಸಂಯೋಜನೆಯ ಈ ವ್ಯವಸ್ಥೆ ಪುರಾತನ ಕಾಲದಿಂದ ಬಂದಿದೆ. ಮನುಷ್ಯನು ಲೋಹವನ್ನು ಕಂಡುಕೊಂಡ ಮೇಲಂತೂ ನೇಗಿಲು ಉಳಿಮೆಯ ಸಾರ್ಥಕ ಮತ್ತು ಸಮರ್ಥ ಏಕೈಕ ಉಪಕರಣವಾಗಿ ಮುಂದುವರಿದಿದೆ. ಜನಕ ಮಹಾರಾಜನು ಸಂತಾನರ್ಥವಾಗಿ ಯಜ್ಞ ಮಾಡಲು ಭೂಮಿಯನ್ನು ಶುದ್ಧಮಾಡುತ್ತಿದ್ದಾಗ ಸೀತೆಯಿಂದ ಅಂದರೆ ನೇಗಿಲಿನಿಂದ ಉತ್ತ ಭೂಮಿಯ ಸಾಲಿನಿಂದ ಹೊರಬಿದ್ದ ಕಾರಣಕ್ಕೆ ಸೀತೆ ಎಂದು ಹೆಸರು ಬಂತು. ಮಹಾಭಾರತದ ಪ್ರಕಾರ ಬಲರಾಮ ನೇಗಿಲನ್ನು, ಕೃಷ್ಣಕೊಳಲನ್ನು ಹಿಡಿದಿದ್ದಾರೆ. ಶ್ರೀಕೃಷ್ಣನಿಗೆ ಇನ್ನೊಂದು ಹೆಸರು ಗೋಪಾಲ ಎಂದೂ ಅಂದರೆ, ಒಂದು ವ್ಯವಸಾಯವನ್ನು ಇನ್ನೊಂದು ಪಶುಪಾಲನೆಯನ್ನು ಸೂಚಿಸುವಂತೆ ಕಾಣುತ್ತದೆ.

ನೇಗಿಲು ಮತ್ತು ಕೊಳಲು ಇವೆರಡು ಮಾನವನ ನಾಗರೀಕತೆಯ ವಿಕಾಸದಲ್ಲಿ ಭೌತಿಕ ಹಾಗೂ ಸೌಂದರ್ಯೋಪಾಸನೆಯ ಸಂಕೇತಗಳಾಗಿರುವಂತೆ ತೋರುತ್ತವೆ. ಎಂಬ ಅಭಿಪ್ರಾಯಗಳಿದ್ದರೂ ವೇದಗಳು,

ಉಪನಿಷತ್ತುಗಳು, ಸ್ಮೃತಿಗಳು, ಪುರಾಣಗಳು, ಕಾವ್ಯಗಳು, ಐತಿಹ್ಯಗಳು ನೇಗಿಲನ್ನು ಕುರಿತು ಹಾಡಿ ಹೊಗಳಿರುವುದಲ್ಲದೆ ಅದು ದೇವತೆಯೆಂಬಷ್ಟರ ಮಟ್ಟಿಗೆ ಪೂಜ್ಯನೀಯ ಸ್ಥಾನ ನೀಡಲಾಗಿದೆ. ವ್ಯವಸಾಯದ ಸಾಧನ ಸಾಮಗ್ರಿಗಳ ಅವಿಷ್ಕಾರವು ಮನುಷ್ಯನ ಬುದ್ಧಿವಂತಿಕೆಯ ದ್ಯೋತಕ. ನೇಗಿಲಿನಂತೆಯೇ ಗಾಡಿಯ ಶೋಧನೆಯೂ ಅವನ ಪ್ರತಿಭೆಗೆ ಹಿಡಿದ ಕನ್ನಡಿಯಾಗಿದೆ. ಗುದ್ದಲಿಯು ತದನಂತರದಲ್ಲಿ ನೇಗಿಲಾಗಿ ಬೆಳೆದಿರುವಂತೆ, ಪರ್ವತ ಪ್ರದೇಶಗಳಲ್ಲಿ ಅಥವಾ ಕಾಡುಗಳಲ್ಲಿ ವಾಸಿಸುತ್ತಿದ್ದ ಮಾನವ ಮರದ ದಿಮ್ಮಿಗಳನ್ನೂ ಸಾಗಿಸಲು ಉರುಳು ಪದ್ಧತಿಯನ್ನು ಕಂಡುಕೊಂಡಿರಬಹುದು. ಈ ಆಧಾರದ ಮೇಲೆ ಒರಟು ಚಕ್ರಗಳನ್ನು ರೂಪಿಸಿರುವಂತೆ ಕಾಣುತ್ತದೆ. ಮೊದಲು ಚಕ್ರಗಳ ಜೊತೆಗೆ ಮಧ್ಯದ ಮರದ ತುಂಡೂ ಸಹ ತಿರುಗುತ್ತಿತ್ತು. ಎನ್ನುವ ಅಭಿಪ್ರಾಯ ಬರುವ ಅವಶೇಷಗಳು ನಮಗೆ ದೊರಕುತ್ತವೆ. ಹರಪ್ಪ ಮತ್ತು ಮೆಹೆಂಜೋದಾರೋ ಉತ್ಖನನದಲ್ಲಿ ದೊರಕಿರುವ ಚಕ್ರದ ಗಾಡಿಯು ಸಹ ಕ್ರಿ.ಪೂ. ೩೦೦೦ಕ್ಕೂ ಹಿಂದಿನದು. ಟೈಕ್ರಿಕೋಟದಿಂದ ಮಾಡಿರುವ ಈ ಮಕ್ಕಳ ಆಟಿಕೆಯ ಗಾಡಿಯಲ್ಲಿ ನೊಗವಿಲ್ಲ. ಈ ಆಟಿಕೆಯನ್ನು ಗಮನಿಸಿದರೆ ಪ್ರಯಾಣಕ್ಕೆ ಮತ್ತು ಸಾಗಣೆಗೆ ಬಳಸುತ್ತಿದ್ದು ಕಂಡು ಬರುತ್ತದೆ.

**ಶಾಸನ, ಕಾವ್ಯ, ಪುರಾಣಗಳಲ್ಲಿ ಕೃಷಿಉಪಕರಣಗಳ ಪ್ರಸ್ತಾಪ**

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ವ್ಯವಸಾಯದ ಉಪಕರಣಗಳ ಉಲ್ಲೇಖಗಳು ವಿಪುಲವಾಗಿ ದೊರಕುತ್ತವೆ. ''ಕನ್ನಡದ ಮೊದಲ ಕೃತಿಯಾದ ಕವಿರಾಜಮಾರ್ಗದಲ್ಲಿ (ಕ್ರಿ.ಶ. ೮೫೦) ಸಮಾಜದ ನಾಲ್ಕುವರ್ಗಗಲ್ಲಿ ಒಂದಾದ ಕುಡಿಯರ ಅಂದರೆ ರೈತರ ಕೆಲಸ 'ಕ್ಷೇತ್ರಕರ್ಷಣರಿಗಳ್' ಎಂದು ವಿಧಿಸುತ್ತಾನೆ.''[೨೦] ವಡ್ಡಾರಾಧನಾಕಾರನು (ಕ್ರಿ.ಶ. ೯೨೦) ಕೃಷಿಕರಿಗೆ ಸಂಬಂಧಿಸಿದ ಅನೇಕ ಉಪಮೆಗಳನ್ನು ತನ್ನ ಕಥೆಗಳಿಗೆ ಬಳಸಿಕೊಳ್ಳುತ್ತ 'ತನ್ನಾರಂಭದ ಕಯ್ಯ್ಗಳನೊಕ್ಕು ಮೆವ್ವಿಗಳ ಬಾಯಂ ಕಟ್ಟೆಯೊಕ್ಕಿಸುಗಂ ಎಂದು ಬರೆಯುವಲ್ಲಿ ಇಂದಿಗೂ ದನಕರುಗಳ ಬಾಯಿಗೆ ಕಟ್ಟುವ ಬಾಯಿಕುಕ್ಕೆಯನ್ನು' ದಾಖಲಿಸುತ್ತಾನೆ.

''ನಾಗಚಂದ್ರನು ತನ್ನ 'ಪಂಪರಾಮಾಯಣದಲ್ಲಿ' (ಕ್ರಿ.ಶ.ಸು. ೧೧೦೦) ಒಂದೇ ಕುಠಾರದಿಂದಡವಿಯಂ ಕಡಿವಂತರೆ ಪೋಡುಗಾಟನ್, ಎಂದು ಕೊಡಲಿಯನ್ನು ದಾಖಲಿಸುತ್ತಾನೆ.''[೨೧] ಜನಜೀವನದ ಆಳವಾದ ಅರಿಯುಳ್ಳ ನಯಸೇನನು (ಕ್ರಿ.ಶ. ೧೧೧೨) ತನ್ನ ಧರ್ಮಾಮೃತದಲ್ಲಿ ಬಂಡಿಯ ತೀರದ ಜೋಳಮಂ ತೆಗೊಕೊಂಣಂ ಮೊರಂ ತೀವಿದ ಧಾನ್ಯಮಂ ತೆಗೆಯಲಾರದೇ ಮೂಗಿನೊಳುಳುವಾತರಿಗೆ ನೇಗಿಲಂ ಕೊಟ್ಟರೆಂಬಂತೆ ಪಕ್ಕದ ಮನೆಯ ಸೂಜಿಯು ಕೇಡಂ ಬಯಸುವ ಕಳ್ಳಂಗೆ ತನ್ನ ಮನೆಯ ಕುವಿಂ ಕಟ್ಟುದೆಂಬಂತೆ, ಮುಂತಾದ ಸಂದರ್ಭಗಳಲ್ಲಿ ಬಂಡಿ, ನೇಗಿಲು ಕುಳಗಳನ್ನು ಉಲ್ಲೇಖ ಮಾಡುತ್ತಾನೆ.

ಹೀಗೆಯೇ ಬಸವಣ್ಣ, ಕನಕದಾಸ ಮುಂತಾದವರು ರೈತನ ಸಾಧನ ಸಾಮಗ್ರಿಗಳನ್ನು ತಮ್ಮ ಅಭಿವ್ಯಕ್ತಿಯ ಸಾಮಗ್ರಿಗಳನ್ನಾಗಿ ಮಾರ್ಪಡಿಸಿಕೊಂಡಿರುವುದು ಕಂಡುಬರುತ್ತದೆ. ಕನಕದಾಸರ 'ರಾಮಧಾನ್ಯ ಚರಿತೆ'ಯಲ್ಲಿ, ಸ್ಪರ್ಧೆಯಲ್ಲಿ ವಿಜಯಿಯಾದ ಕಾಗಿಗೆ ದೇವಾನುದೇವತುಗಳು ಕೂರಿಗೆ, ಕಣ್ಣಿ, ದಂಡೆ ಮುಂತಾದ ಸಾಧನ ಸಾಮಗ್ರಿಗಳನ್ನು ಕೊಡುಗೆಯಾಗಿ ನೀಡುವುದು. ಒಂದು ವಿಶೇಷವೇ ಸರಿ.

**ಕೃಷಿಯ ಪರಿಕರಗಳು**

ರೈತನ ವ್ಯವಸಾಯದ ಬದುಕಿಗೆ ಅತ್ಯಗತ್ಯವಾದ ಸಾಧನಗಳು

೧. ಉಳಲು- ನೇಗಿಲು, ಹರಗಲು- ಕುಂಟೆ, ಬಿತ್ತಲು- ಕೂರಿಗೆ, ಸಾಲುಮುಚ್ಚಲು- ಕೊರಡು, ಎತ್ತುಗಳ ಕೊರಳಿಗೆ ಹಾಕಲು-ನೊಗ, ಕೇರಲು-ಮೊರ, ಹೊತ್ತೊಯ್ಯಲು ಬುಟ್ಟಿ, ಕೊಯ್ಯಲು- ಕುಡುಗೋಲು, ಕತ್ತರಿಸಲು ಕೊಡಲಿ, ಧಾನ್ಯರಕ್ಷಿಸಲು ಕಣಜ, ಆಲದಿಡಿ ಬಿದಿರಿನಿಂದ ಮಾಡುವರು, ಗದ್ಯ ಹೊಡೆಯುವುದು, ಅರ್ತೆಕುಂಟೆ- ಹಲ್ಕಿನ ಕುಂಟೆ-ಹೆಂಡಗೊಡತಿ- ಹೊಲದಲ್ಲಿರುವ ಹೆಂಡೆಗಳನ್ನು ಹೊಡೆದು ಸಮಮಾಡುವುದು. ಗುದ್ಲಿ- ಮಣ್ಣನ್ನು ಅಗೆಯಲು, ಕಂಟಿಯನ್ನು ಕಡಿಯಲು ಉಪಯೋಗಿಸುವರು. ಸಲ್ಕಿ- ಮಣ್ಣನ್ನು ತುಂಬಲು ಮತ್ತು ವಿವಿಧ ಕೆಲಸಕಾರ್ಯಗಳಿಗೆ ಬಳಸುವರು. ಮೆರೆಕೋಲು- ಹುಲ್ಲು ತೆಗೆಯುವುದು. ಬಂಡಿ- ಎತ್ತುಗಳನ್ನು (ಕಟ್ಟಿ) ಗಾಡಿಗೆ ಕಟ್ಟಿ ಓಡಿಸುವುದು. ಗಾಲಿ- ಬಂಡಿಗೆ ಎರಡು ಬದಿಯಲ್ಲಿ ಇರುವ ಚಕ್ರಗಳು. ಹಲ್ಕು-, ಹಣಿಗೆ-,ಸಲ್ಪಹಿಡಿ-, ಬಾಯಾಂಡ್ಲ- ಎತ್ತುಗಳು ಹೊಲದಲ್ಲಿ ಸಸಿಯನ್ನು ಕಡಿಯದ ಹಾಗೆ ಬಾಯಿಗೆ ಕುಕ್ಕೆ ಹಾಕುವುದು. ಮಿಣಿಹಗ್ಗ- ನೇಗಿಲು ಮತ್ತು ನೊಗಕ್ಕೆ ಸೇರಿ ಕಟ್ಟುವುದು. ಜೊತಗ- ನೊಗ ಮತ್ತು ಎತ್ತಿನ ಕೊರಳಿಗೆ ಕಟ್ಟುವುದು (ಗದ್ಯೆಕಟ್ಟುವ ಹಗ್ಗ) ಮೂಗುದಾರ- ಎತ್ತುಗಳ ಮೂಗಿಗೆ ಹಾಕುವ ಹಗ್ಗ. ಕೊರಳು ದಂಡೆ- ಎತ್ತುಗಳ ಕೊರಳಿಗೆ ಹಾಕುವ ದಂಡೆ. ದಾವಣಿ- ಒಕ್ಕಲಿನಲ್ಲಿ ಮೇಟಿಕಟ್ಟುವುದು. ಉಕ್ಕೇದ ಹಗ್ಗ- ಎತ್ತಿಗೆ ಬೇಸಾಯದ ಹಗ್ಗ. ನಳ್ಳಿ- ಬಿತ್ತುವ ಸಾಧನ. ಸಾವಳೆ- ರಾಗಿ ಬಡಿಯುವ ಉದ್ದನೆಯ ಕೋಲು. ಈ ಮೇಲಿನ ಎಲ್ಲಾ ಉಪಕರಣಗಳನ್ನ ದೀವರು ತಮ್ಮ ಕೃಷಿಯಲ್ಲಿ ಅಳವಡಿಸಿಕೊಂಡಿದ್ದಾರೆ.

**ದೀವರು ಕೃಷಿಯಲ್ಲಿ ಪ್ರಮುಖವಾಗಿ ಬಳಸುವ ಉಪಕರಣಗಳು**

ದೀವರು ತಮ್ಮ ಕೃಷಿಕಾರ್ಯಕ್ಕೆ ಬಳಸುವ ಸಾಧನ ಸಾಮಗ್ರಿಗಳನ್ನೂ ಹತಾರುಗಳು, ಮುಟ್ಟುಗಳು, ಗಳೇವುಗಳು ಮುಂತಾದ ಹೆಸರುಗಳಿಂದ ಕರೆದುಕೊಳ್ಳುತ್ತಾರೆ. ಅವೆಲ್ಲವನ್ನು ಪೂಜ್ಯಭಾವನೆಯಿಂದ ಕಾಣುತ್ತಾರೆ. ಅಗೌರವದಿಂದ ಕಾಣುವಂತಿಲ್ಲ. ನೇಗಿಲು, ಕುಂಟೆ, ಎಡಕುಂಟೆ, ಅರ್ತೆಕುಂಟೆ, ಕೂರಿಗೆ, ಕುಳ್ಳಗೂರಿಗೆ, ಕೊರಡು, ಸಡ್ಡೆ, ನೊಗ, ಹಲುಬೆ, ಜಂತುಗುಂಟೆ, ಮುಂತಾದವು ಉಳುಮೆಯ ಉಪಕರಣಗಳಾದರೆ, ರೋಣಗಲ್ಲು, ನೆರೆಕೋಲು, ನಾಗರಬೆತ್ತ, ಗೋರು, ಕೈಹಲುಬೆ, ಮೊರ, ತೂರುಬುಟ್ಟಿ, ಮುಳ್ಳುಗಡ್ಡಿ, ಒಡಲು ಇತ್ಯಾದಿ. ಇವುಗಳಲ್ಲಿ ನೊಗ ಮತ್ತು ನೇಗಿಲು ಪ್ರಮುಖವಾದವುಗಳು. ಇವೆಲ್ಲ ಕೃಷಿ ಸಂದರ್ಭದ ಉಪಕರಣಗಳಾಗಿವೆ. ವಾಡೆ, ಕಣಜ, ಮೂಡೆ, ಪಣತ, ಹಗೇವು ಮುಂತಾಗವುಗಳು ಧಾನ್ಯಸಂರಕ್ಷಣೆಯ ಸಾಧನ ಸಾಮಗ್ರಿಗಳಾಗಿವೆ. ಈ ಪ್ರಾಮುಖ್ಯವನ್ನು 'ನೊಗ ಇದ್ದರೆ ನೇಗಿಲು', 'ಮಗ ಇದ್ದರೆ ತಂದೆ ನೇಗಿಲು ಉತ್ತರೆ ಹೊಲ', ''ಹಾಲು ಇದ್ದರೆ ಗೋವು'' ಮುಂತಾದ ಗಾದೆಗಳಲ್ಲಿ ಕಾಣಬಹುದು. ಉಪಕರಣಗಳಿಂದ ಊಳಬೇಕಾದ ರೀತಿಯನ್ನು ಇಂತಹ ಮಾತುಗಳ ಮುಖಾಂತರವೆ ಸಾಂಪ್ರದಾಯಕವಾಗಿ ಉಳಿಸುರುವುದನ್ನು ಕಾಣಬಹುದು.

ಉಳುಮೆ ಎನ್ನುವುದು ಆಳವಾಗಿ ಆಗಬೇಕು, ಹೊಲದ ಸುತ್ತ ಮುತ್ತ ಕ್ರಮಬದ್ಧವಾಗಿ ಅಚ್ಚುಕಟ್ಟಾಗಿ ನಡೆಯಬೇಕು ಅದಕ್ಕಾಗಿ ''ಹೊಲನ ಒತ್ತಿ ಹೊಡಿ, ಮ್ಯಾರೆ ಹತ್ತಬಿತ್ತು'' ಎಂಬ ಮಾತನ್ನು ದೀವರು ಪ್ರಚಲಿತವಾಗಿಸಿಕೊಂಡಿದ್ದಾರೆ. ಯಾವ ಉಪಕರಣಗಳನ್ನೂ ಬಳಸುವಾಗ ಹೇಗೆ ಮತ್ತು ಎಷ್ಟು ಜಾಗೂರಕರಾಗಿರಬೇಕು ಎಂಬುದನ್ನು ದೀವರ ಕೃಷಿಕಾರ್ಯದಿಂದ ತಿಳಿಯಬಹುದು.

ಮಧ್ಯಂತರ ಬೇಸಾಯ ಮಾಡುವಾಗ ಎಳಕುಂಟೆ ಬಳಸಲಾಗುತ್ತದೆ. ಆಗ ನುರಿತ ಎತ್ತುಗಳೇ ಆಗಬೇಕು. ಬೇಸಾಯಗಾರನು ನುರಿತವನೇ ಆಗಿರಬೇಕು ಅದಕ್ಕಾಗಿ 'ಎಡೆಯಗೆ ಎತ್ತು ಹೊಡಿಬಾರದು' 'ಅಜ್ಜ್ಯಾಗೆ ಅಡಕಿ ಪೊಡೆಬಾರದು' ತೌರಿಗೆ ಮಡದಿ ಬಿಡಬಾರದು ಎಂಬ ಮಾತು ಮೂಡಿಬಂದಿದೆ. ಪ್ರತಿಯೊಬ್ಬ ರೈತನ ಹತ್ತಿರವೂ ಅಗತ್ಯವಾದ ಉಪಕರಣಗಳು ಇರಲೇಬೇಕು. "ಇದ್ದರೆ ಕೊಡಲಾಸಲ್ಲ, ಇಲ್ಲದಿದ್ದರೆ ತಿರಿಲಾಗದು", ಯಾಕೆಂದರೆ ಹದಬೆದೆಯ ಸಂದರ್ಭದಲ್ಲಿ ಬೇರೆಯವರಿಂದ ಅವುಗಳಿಗೆ ತಿರುಗಾಡುತ್ತಾ ನಿಂತರೆ ಕೆಲಸ ಹಿಂದಾಗುತ್ತದೆ. ಮಣ್ಣಿನ ಗುಣ ಮತ್ತು ಬೆಳೆಯ ಕ್ರಮಕ್ಕೆ ಅನುಗುಣವಾಗಿ ಸಾಧನ ಸಾಮಗ್ರಿಗಳು ಭಿನ್ನವಾಗುತ್ತವೆ. ನೇಗಿಲುಗಳಲ್ಲಿ ಸಣ್ಣನೇಗಿಲು ಮತ್ತು ದೊಡ್ಡನೇಗಿಲು ಅಥವಾ ಎಷ್ಟು ಎತ್ತುಗಳನ್ನು ಹೂಡುತ್ತಾರೆಂಬ ಆಧಾರದ ಮೇಲೆ ಎರಚರ ನೇಗಿಲು, ನಾಲ್ಕರ ನೇಗಿಲು ಹೀಗೆ ವಿಧಗಳಿವೆ. ಕುಂಟೆಯಲ್ಲಿ ಸಣ್ಣಕುಂಟೆ, ದೊಡ್ಡಕುಂಟೆ (ಹೆಗ್ಗುಂಟೆ) ಒಳಗುಂಟೆ, ಕಿರಿಗುಂಟೆ, ಎಡಗುಂಟೆ, ಹತ್ತಿಗುಂಟೆ ಮುಂತಾದ ವಿಧಗಳಿವೆ.

ನಾಲ್ಕು ಹಲುಕು ಇರುವ ಕೂರಿಗೆಯ ಜೊತೆಗೆ ತಾಳುಗಳಿರುವ ಕೂರಿಗೆಗಳು ಇವೆ. ಎರಡು ತಾಳು ಕೂರಿಗೆ, ಮೂರುತಾಳು ಕೂರಿಗೆಗಳು ಖುಷ್ಕಿ ಪದ್ಧತಿಯಲ್ಲಿ ಬಳಕೆಯಾಗುತ್ತವೆ. ಬಿತ್ತನೆಗೆ ಕೆಲವೊಮ್ಮೆ ಸಡ್ಡೆಗಳನ್ನೂ ಬಳಸುತ್ತಾರೆ. ಇದರಲ್ಲಿ ಒಂಟಿಸಡ್ಡೆ, ಜೋಡಿಸಡ್ಡೆ ಎಂಬ ಎರಡು ವಿಧಗಳಿವೆ. ಸಾಲು ಹತ್ತಿರ ಹತ್ತಿರ ಆದರೆ ದೊಡ್ಡಹಲುಬೆ, ಅಥವಾ ಮಳೆಕುಂಟೆ ಬಳಸಿ ಸರಿಮಾಡುತ್ತಾರೆ. (ಎಡೆಕುಂಟೆಯು) ಆಲದಹಿಡಿಯು ಸಾಲು ಮಧ್ಯದ ಕಳೆಯನ್ನು ನಿವಾರಿಸುವುದಲ್ಲದೆ, ಮಣ್ಣನ್ನು ಸಾಲುಗಳ ಪಕ್ಕಕ್ಕೆ ಹಾಕಿ ಬುಡಭದ್ರವಾಗುವಂತೆ ಮಾಡುತ್ತದೆ. ನೇಗಿಲು, ಕುಂಟೆ ಮತ್ತು ಕೂರಿಗೆಗೆ ಬಳಸುವ ನೊಗದ ಅಳತೆ ೪.೫.ಆಗಿರುತ್ತದೆ. ಎಡೆಕುಂಟೆಗಳಿಗೆ ಬಳಸುವ ನೊಗವು ದೊಡ್ಡದಿರುತ್ತದೆ. ಒಕ್ಕಲು ಸಂದರ್ಭದಲ್ಲಿ ಬಳಸುವ ಉಪಕರಣಗಳು ಯಾವಾಗಲೂ ತಯಾರಾಗಿರುತ್ತವೆ. ಹಂತೆ ಹೊಡೆಯಲು ಮೇಟಿ ನಡುತ್ತಾರೆ.

ಇತ್ತೀಚಿಗೆ ದೀವರಲ್ಲಿ ದ್ಯಾವಣಿ ಹೊಡೆಯದ ಪ್ರದೇಶಗಳಲ್ಲಿ ರೋಣಗಲ್ ಪ್ರಧಾನವಾಗಿರುತ್ತದೆ. ಕೋಲು, ನೆರೆಕೋಲು, ಕೈಹಲುಬೆ, ಮೊರ, ತೂರುಪುಟ್ಟಿ, ಬರಲು, ಮುಳ್ಳುಗಡ್ಡಿ ಮುಂತಾದವು ಒಕ್ಕಲು ಸಂದರ್ಭದ ಉಪಕರಣಗಳು. ತಮ್ಮ ಸುತ್ತಮುತ್ತ ದೊರಕುವ ಲಭ್ಯವಿರುವ ಗಿಡಮರಗಳಿಂದ ಇವುಗಳನ್ನು ತಯಾರುಮಾಡಿಸಿಕೊಳ್ಳುತ್ತಾರೆ. ತಮ್ಮ ಜೊತೆಗೆ ವಾಸಮಾಡುವ ಬಡಗಿ ಮತ್ತು ಕಮ್ಮಾರರು ಈ ಉಪಕರಣಗಳ ನಿರ್ಮಾಣಕ್ಕೆ ಮತ್ತು ದುರಸ್ತಿಗೆ ನೆರವಾಗುತ್ತಾರೆ. ಕೆಲವು ಪ್ರಮುಖ ಸಾಧನಸಾಮಗ್ರಿಗಳ ನಿರ್ಮಾಣ, ಅಳತೆ, ಸ್ವರೂಪ ಮುಂತಾದವುಗಳನ್ನು ಗಮನಿಸಬಹುದು.

ಕೃಷಿಯಲ್ಲಿ ಹೆಚ್ಚು ಪ್ರಮುಖವಾಗಿರುವ ಪರಿಕರಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ನೇಗಿಲು:** ವ್ಯವಸಾಯವು ಸ್ತ್ರೀಯಿಂದ ಪುರುಷನಿಗೆ ಹಸ್ತಾಂತರವಾಗಲು ಕಾರಣಕರ್ತವಾದ ಉಪಕರಣವೆಂದರೆ ನೇಗಿಲು. ಇದನ್ನು ರೈತನು ಪೂಜ್ಯಭಾವನೆಯಿಂದಲೂ ಮತ್ತು ಗೌರವದಿಂದಲೂ ಕಾಣುತ್ತಾನೆ. ಕೃಷಿ ಸಂಗ್ರಹದ ಕೃತಿಕಾರ ಪರಾಶರ ಕ್ರಿ.ಶ. ಸು. ೫೦೦ರಿಂದ ೧೦೦೦ ವಿವರಣೆಯಂತೆ ನೇಗಿಲು ಎಂಟು ಭಾಗಗಳನ್ನು ಹೊಂದಿರುತ್ತದೆ. ಇಸಯುಗ, ನಿರ್ಯೋಲ, ಪಸಿಕ, ಹಲಸ್ತೋನು, ಅಡ್ಡಚಲ್ಲ, ಸೌಲ ಮತ್ತು ಪಚ್ಚನಿ.

ಕೃಷಿಪರಿಕರವಾದ ನೇಗಿಲು ಎಂಟು ಭಾಗಗಳನ್ನೇ ಹೊಂದಿದೆ. ಮೇಣಿ, ಹಿಡಿಕೆ, ಬಾಳು, ಈಚು, ಕುಳ, ಬೆಗಣೆ, ಕಿಚಡಿಬೆಣೆ ಮತ್ತು ಚೆಕ್ಕೆ ಆಕಾರವೂ ಅಲ್ಪಸ್ವಲ್ಪ ಬದಲಾವಣೆಯಾಗಿರುವಂತೆ ಕಾಣುತ್ತದೆ. ಸಾಧಾರಣವಾದ ಅಳತೆ ಮೇಣಿ- ಮೂರುಗೇಣಿ, ಬಾಳು- ಮೂರುಗೇಣು, ಕುಳ- ಮೂರುಚೋಟು, ಬೆಗಣೆ -ಎರಡು ಇಂಚು ಮತ್ತು ಈಚು- ಆರುಮೊಳ ಈ ಪ್ರಮಾಣದಲ್ಲಿ ದೊಡ್ಡನೇಗಿಲು ಮಾಡುವುದಾದರೆ ಅಳತೆ ಹೆಚ್ಚಾಗುತ್ತದೆ.

ನೇಗಿಲ ತಯಾರಿಕೆಗೆ ದೀವರು ಗಟ್ಟಿಯಾದ ಮರವನ್ನೂ ಬಳಸುತ್ತಾರೆ. ಮತ್ತಿಹೊನ್ನೆ, ಜಾಲಿ, ಬೇವು, ತುಗ್ಗಲಿ, ಹೊಂಗೆ ಮುಂತಾದ ಮರಗಳು ನೇಗಿಲು ನಿರ್ಮಾಣಕ್ಕೆ ಸೂಕ್ತ ಎಂದಿದ್ದಾರೆ. ಇವುಗಳಲ್ಲಿ ಕೆಲವು ಕಡೆ ಜಾಲಿ ಮರದಿಂದ ಮಾಡಿದ ನೇಗಿಲು ಶ್ರೇಷ್ಠ ಏಕೆಂದರೆ ಜಾಲಿಮರ ಗಟ್ಟಿಯಾಗಿರುವಂತದ್ದು ಮತ್ತು ಧೀರ್ಘಕಾಲ ಬಾಳಿಕೆ ಬರುವಂತದ್ದು ಹೊಂಗೆಯಿಂದ ಮಾಡಿದ ನೇಗಿಲು ಬಳಸಿದರೆ ಕಳೆ ನಾಶವಾಗುತ್ತದೆ ಎಂಬ ನಂಬಿಕೆ ಪ್ರಾದೇಶಿಕವಾಗಿ ಭಿನ್ನವಾಗಿದೆ.

**ಕುಂಟೆ:** ಕೃಷಿಕರಾದ ದೀವರು ವ್ಯವಸಾಯದಲ್ಲಿ ಕುಂಟೆಗೆ ಪ್ರಮುಖ ಸ್ಥಾನ ನೀಡಿದ್ದಾರೆ. ಕುಂಟೆ ನೆಲವನ್ನು ಹಗುರು ಮಾಡಲು, ಹರಗಲು, ಹೆಂಟೆಗಳನ್ನು ಒಡೆಯಲು, ಸಾಲನ್ನು ಮುಚ್ಚಲು ಕುಂಟೆ ಬಳಕೆಯಾಗುತ್ತದೆ. ಇದರ ಅಂಗಗಳು ದಿಂಡು, ಮೇಣಿ, ಹಿಡಿಕೆ, ತಾಳು, ಬಳೆ, ಕುಡ, ಮತ್ತು ಈಚು ಸಾಧಾರಣವಾದ ಅಳತೆಯೆಂದರೆ, ಸಣ್ಣಕುಂಟೆ ದಿಂಡು ನಾಲ್ಕು ಗೇಣು, ತಾಳು ಎರಡು ಗೇಣು, ಮೇಣಿ ಮೂರು ಗೇಣು, ಕುಡ ಮೂರು ಗೇಣು-ನಾಲ್ಕು ಬೆರಳು, ಬಳೆ ಮೂರು ಇಂಚು. ಈಚುಗಳು ಐದ ರಿಂದ ಆರು ಮೊಳ, ದಿಂಡು ಬಲುಗಟ್ಟಿಯಾದ ಮರದಿಂದ ಮಾಡಿದುದೇ ಆಗಬೇಕಾಗಿರುವುದರಿಂದ ಜಾಲಿಯೇ ಶ್ರೇಷ್ಠ. ಅಳತೆಯ ಪ್ರಮಾಣಭರಿತವಾಗಿ ಜಾಸ್ತಿಯಾದರೆ ಹೆಗ್ಗುಂಟೆಯಾಗುತ್ತದೆ. ಕಡಿಮೆಯಾದರೆ ಎಡೆಕುಂಟೆ ಅಥವಾ ಹತ್ತಿಕುಂಟೆಯಾಗುತ್ತದೆ. ''ಈ ಉಪಕರಣ ದ್ರಾವಿಡ ಮೂಲವಾದುದೆಂದು ವಿದ್ವಾಂಸರು ಭಾವಿಸುತ್ತಾರೆ.''

**ಎಡೆಕುಂಟೆ:** ಮಧ್ಯ ಬೇಸಾಯಕ್ಕೆ ಅತ್ಯಗತ್ಯವಾದ ಉಪಕರಣ ರಾಗಿ, ಜೋಳ, ನವಣೆ, ಸಾವೆ, ಹಾರಕ, ಕೊರಲೆ ಮುಂತಾದವುಗಳು ಗೇಣುದ್ದ ಬೆಳೆದಾಗ ಎಡಕುಂಟೆ ಹೊಡೆಯುತ್ತಾರೆ. ''ಯಾತರ ಮುಟ್ಟೆ ಮಾಡಿದ್ರು ಸಾರಿಲ್ಲದೆ ಉಣ್ತೇವ ಹಂಗ ಯಾತರ ಬೇಸಾಯ ಮಾಡಿದರು ಎಡೆಕುಂಟೆ ಬೇಕೆ ಬೇಕು.'' ಎಂಬುದಾಗಿ ದೀವರು ತಮ್ಮದೇ ಯಾದ ಉಪಮೆಯೊಂದಿಗೆ ಎಡಕುಂಟೆಯ ಮಹತ್ವವನ್ನು ಗುರುತಿಸಿಕೊಂಡಿದ್ದಾರೆ. ಇದನ್ನು ಕಿರುಗುಂಟೆ, ಗೇಣಿನಕುಂಟೆ ಎಂದು ಕರೆಯುತ್ತಾರೆ. ಸಾಧಾರಣ ಅಳತೆ ದಿಂಡು ಒಂದು ಗೇಣು, ಮೂರು ಬೆರಳು ಮೇಣಿ, ಮೂರು ಗೇಣು ಕಬ್ಬಿಣದ ತಾಳು, ಎರಡು ಗೇಣು ಈಚುಗಳು, ಆರರಿಂದ ಏಳು ಮೊಳ ಜಾಲಿಮರದದ್ದಾರೆ ಅಥವಾ ತ್ಯಾಗದ ಮರದಾದ್ದರೆ ಗಟ್ಟಿಮುಟ್ಟಾಗಿರುತ್ತದೆ. ಹಾಗೆ ಎಡೆಕುಂಟೆಯನ್ನು ಸಮತೋಲನ ಮಾಡಲು ಮೂರು ಗೇಣಿನ ಕಲೆಗೋಲೊಂದು ಬಳಕೆಯಾಗುತ್ತದೆ.

**ಕೂರಿಗೆ:** ಬಿತ್ತನೆಯ ಸಂದರ್ಭದಲ್ಲಿ ಕಂಬಳಿಗದ್ದುಗೆಯ ಮೇಲೆ ತಳಿರುತೋರಣಗಳಿಂದ ಅಲಂಕೃತವಾಗಿ ಪೂಜಿತವಾಗುವ ಉಪಕರಣವೆಂದರೆ ಕೂರಿಗೆ, ಬೇವು ಅಥವಾ ಜಾಲಿಮರದಿಂದ ಮಾಡಿದ ದಿಂಡನ್ನು ಹೊಂದಿರುವ ಇದಕ್ಕ ಕೆಳಗಡೆ ನಾಲ್ಕು ಬಿದಿರಿನ ಹಲುಕುಗಳನ್ನು ಜೋಡಿಸುತ್ತಾರೆ. ಹಲಕುಗಳ ಹೆಜ್ಜೆಗಳಿಗೆ ಅಂದರೆ ರಂಧ್ರಗಳಿಗೆ ನಾಲ್ಕು ಕೊಳವೆ ಸಿಕ್ಕಿಸಿ, ಆ ಕೊಳವೆಗಳನ್ನು ಕೂರಿಗೆ ಬಟ್ಟಲು ತಲುಬಿಗೆ ಹಗ್ಗಗಳಿಂದ ಬಲವಾಗಿ ಬಿಗಿದಿರುತ್ತಾರೆ. ಕೂರಿಗೆ ಹೊಡೆಯುವವನು ನಿಪುಣ ರೈತನೇ ಆಗಿರಬೇಕು. ಏಕೆಂದರೆ ಸಾಲು ನೇರವಾಗಿ ಬಂದರೆ ಮಾತ್ರ ಮುಂದಿನ ಬೇಸಾಯದ ಕೆಲಸಕ್ಕೆ ಅನುಕೂಲವಾಗುತ್ತದೆ. ಇಲ್ಲದಿದ್ದರೆ ಬಿತ್ತಿದ ಕಾಳುಗಳು ಹುಟ್ಟುವುದಿಲ್ಲ ಎನ್ನುತ್ತಾರೆ.

ಬಟ್ಟಲನ್ನು ಮತ್ತು ದಿಂಡನ್ನು ಸೇರಿಸುವ ಬಿದಿರು ಕೊಳವೆಗಳನ್ನು ಕೆಲವಡೆ ಬಳಸಲಾಗುತ್ತದೆ. ಬಟ್ಟಲು ಕಲಾತ್ಮಕವಾದ ಸೌಂದರ್ಯವನ್ನು ಪಡೆದಿರುತ್ತದೆ. ಬಡಿಗೆಯೊಬ್ಬನ ಕುಶಲತೆಯು ಬಟ್ಟಲಿನ ನಿರ್ಮಾಣದಲ್ಲಿ

ವ್ಯಕ್ತವಾಗುತ್ತದೆ. ಕೂರಿಗೆಯ ಸಾಧಾರಣ ಅಳತೆ ದಿಂಡು ಮೂರು ಗೇಣು, ಮೇಣಿ-ಮೂರು ಗೇಣು, ಹಲುಕುಗಳು ಒಂದುವರೆ ಗೇಣು ಬಾಳ ಅಥವಾ ಕೊಳವೆಗಳು ಎರಡುವರೆ ಅಡಿ, ಬೇವಿನ ಮರದಿಂದ ಮಾಡಿದ ಕೂರಿಗೆ ಶ್ರೇಷ್ಠವಾದುದು. ಕೂರಿಗೆಯ ಹಿಂದೆ ಅಥವಾ ನೇಗಿಲಹಿಂದೆ ಅಕ್ಕಡಿಕಾಳುಗಳನ್ನೂ ಬಿತ್ತಲು ಅಥವಾ ದಪ್ಪನೆಯ ಬೀಜಗಳನ್ನು ಬಿತ್ತಲು ಸಡ್ಡೆ ಬಳಸುತ್ತಾರೆ. ಸಡ್ಡೆಯಲ್ಲಿ ಒಂಟಿಸಡ್ಡೆ ಮತ್ತು ಜೋಡಿಸಡ್ಡೆ ಎರಡು ವಿಧಗಳಿವೆ. ಕೂರಿಗೆಯ ಬಟ್ಟಲುಗಳನ್ನು ಪೇಟೆಗಳಿಂದ ಅಥವಾ ಜಾತ್ರೆಗಳಿಂದ ಕೊಂಡುತಂದರೆ ಸಡ್ಡೆಯ ಬಟ್ಟಲುಗಳನ್ನು ತಮ್ಮಲ್ಲೇ ಸಿಗುವ ತುಗ್ಗಲಿ ಅಥವಾ ಹೊಂಗೆ ಮರಗಳಿಂದ ಸಿದ್ಧ ಮಾಡಿಸಿಕೊಳ್ಳುತ್ತಾರೆ.

**ಕೊರಡು:** ಬಿತ್ತನೆಯ ಸಾಲುಗಳನ್ನು ಮುಚ್ಚಲು, ಹೆಂಡೆಗಳನ್ನು ಒಡೆಯಲು ಹಾಳೆಗಳನ್ನು ಸಮಮಾಡಲು ಕೊರಡು ಬೇಕೆಬೇಕು. ಸಾಧಾರಣ ಅಳತೆ ದಿಂಡು ನಾಲ್ಕು ಮೊಳ ಎತ್ತರ ಒಂದು ಅಡಿಯಾಗಿರುತ್ತದೆ. ದಪ್ಪನೆಯ ಮರವೊಂದನ್ನು ಮಧ್ಯಟೊಳ್ಳು ಮಾಡಿ ಹಿಂದೆ ಮುಂದೆ ಮತ್ತು ಮೇಲೆ ಎರಡು ಅಂಗುಲ ದಪ್ಪ ಬಿಟ್ಟಿರುತ್ತಾರೆ. ಮಧ್ಯಭಾಗಕ್ಕೆ ಎರಡು ಕೈ ಜೋಡಿಸಿರುತ್ತಾರೆ. ಕೊರಡಿನ ಕೈಗೆ ಕಟ್ಟುವ ಹಗ್ಗಗಳನ್ನು ಎತ್ತುಗಳ ಕೊರಳಿನ ನೊಗಕ್ಕೆ ಜೋಡಿಸಲಾಗುತ್ತದೆ. ಕೊರಡಿನ ಮಧ್ಯಭಾಗಕ್ಕೆ ಸಿಕ್ಕಿದ ಮಣ್ಣು ಅಥವಾ ಹೆಂಡೆಗಳು ಬೇರೆ ಬೇರೆ ಭಾಗಕ್ಕೆ ಬರುತ್ತದೆ. ಅಥವಾ ಒಡೆದುಕೊಳ್ಳುತ್ತದೆ. ಸಾಧಾರಣವಾಗಿ ಕೊರಡನ್ನು ತೆಂಗು ಅಥವಾ ಈಚಲು ಮರದಿಂದ ಮಾಡುವುದು ವಾಡಿಕೆ. ಬೇರೆ ಮರಗಳಿಂದಲೂ ಮಾಡುತ್ತಾರೆ. ಒಟ್ಟಿನಲ್ಲಿ ದೀವರ ಕೃಷಿ ಸಂಸ್ಕೃತಿಯಲ್ಲಿ ವಿಶೇಷ ಪ್ರಾಧಾನ್ಯತೆ ಪಡೆದುಕೊಂಡಿದೆ. ಎಲ್ಲದಕ್ಕೂ ಬೇಕಾದ ಉಪಕರಣವೆಂದರೆ ನೊಗ, ಎತ್ತಿನ ಹೆಗಲ ಮೇಲೆ ಹಾಕಬೇಕಾದುದರಿಂದ ನುಣುಪು ಬರುವ ಮರದಿಂದ ಇದನ್ನು ತಯಾರುಮಾಡಲಾಗುತ್ತದೆ. ನಾಲ್ಕು ಮೊಳ ಇರುವ ನೊಗವನ್ನು ಸಾಧಾರಣವಾಗಿ ಆಲ, ಹಲಸು, ಗೊಡ್ಡ, ಮಾವು, ಅರಬೇವು ಮುಂತಾದ ಮರಗಳಿಂದ ಮಾಡಲಾಗುತ್ತದೆ. ನೊಗದ ಆ ಕಡೆ ಈಕಡೆಗೆ ಎರಡೆರಡು ಹುಗಲು ಅಥವಾ ಹೆಜ್ಜೆಗಳಿರುತ್ತವೆ. ಆ ಹೆಜ್ಜೆಗಳು ಪಟಗಣ್ಣಿ ಕಟ್ಟಲು ಮತ್ತು ಒತ್ತುಗುಣುಕು ಹಾಕಲು ಅನುಕೂಲಕರವಾಗುರುತ್ತವೆ.

**ಬಂಡಿ:** ಗಾಡಿ ಎಂದು ಕರೆಯಿಸಿಕೊಳ್ಳುವ ಬಂಡಿಯು ಗೊಬ್ಬರದಗೋಡು, ಹುಲ್ಲು, ಮೇವು, ದವಸಧಾನ್ಯಗಳ ಸಾಗಣೆಗೆ ಬಳಕೆಯಾಗುವ ಕೃಷಿ ಶ್ರೀಮಂತಿಕೆ ಉಪಕರಣವಾಗಿದೆ. ತುಂಬಾ ದುಬಾರಿ ಬೆಲೆಯಾಗುವ ಈ ಉಪಕರಣವನ್ನೂ ಹೆಚ್ಚು ಜಮೀನಿರುವ ಶ್ರೀಮಂತರು ಮತ್ತು ಮಧ್ಯಮ ರೈತರು ಇಟ್ಟುಕೊಂಡಿರುತ್ತಾರೆ. ಗಾಡಿಯನ್ನು ತಯಾರು ಮಾಡಲು ನಿಪುಣನಾದ ಬಡಿಗೆಯೇ ಬೇಕು. ಅದರಲ್ಲಿ ಮುಖ್ಯವಾದ ಭಾಗ ಮಧ್ಯದ ದಪ್ಪನಾದ ಓಟಿಮರ ಅಥವಾ ಇರಚಿ, ಇರಚಿಯು ನಾಲ್ಕು ಅಡಿ ಉದ್ದವಿದ್ದು ಒಂದು ಅಡಿ ದಪ್ಪವಿರುತ್ತದೆ. ಅದರ ಮಧ್ಯಕ್ಕೆ ಒಂದು ಹುಗುಲು ಮಾಡಿ ಕಬ್ಬಿಣದ ತುಂಡು ಸಿಕ್ಕಿಸುತ್ತಾರೆ. ಆ ಕಡೆ ಈ ಕಡೆಗೆ ಕೀಲುಹಾಕಲು ಎರಡು ಹುಗುಲುಗಳಿರುತ್ತವೆ. ಒಂದು ಅಡಿ ಉದ್ದದ ಎರಡು ಕೀಲುಗಳು ಸಿದ್ಧವಾಗುತ್ತವೆ. ಅಚ್ಚುಸಮೇತದ ಓಟಿ ಮರದಲ್ಲಿ ಮೂರು ಹುಗುಲು ಇರುವುದರಿಂದ ಗಾಡಿಯು "ಮೂರು ಹುಗುಲಿನ ಮುಟ್ಟು" ಎಂಬ ವಿಶೇಷವಾದ ಹೆಸರನ್ನೂ ಪಡೆಯುತ್ತದೆ.

**ಕೃಷಿಯಲ್ಲಿ ಬಳಸುವ ನಾರಿನ ವಸ್ತುಗಳು**

ಎತ್ತಿನ ಹಿಡಿಹಗ್ಗ, ಸೇದುವ ಹಗ್ಗ, ಮಿಣಿ, ಬಂಡಿ ಮಿಣಿ, ಹೂಡುವ ಹಗ್ಗ, ಸಮುಕಟ್ಟು ಮಿಣಿ , ಸೆರಗಿನ ಮಿಣಿ, ಎಡೆಕುಂಟೆ, ಕಣ್ಣಿ, ಹಂತಿಕಣ್ಣಿ, ಕಡೆಗೋಲು ಹಗ್ಗ, ಹಾಗಡ, ಬಗ್ಗೇಲು ಹಗ್ಗ, ಗುದ್ದಿಕಣ್ಣಿ, ಜೋಲಿಹಗ್ಗ, ಮೂಗುದಾಣ, ಮಕಾಡ, ಹುರಿಚಾಲಿ, ಬಾರ್‌ಕೋಲ್‌ಚಾಟಿ, ಪಟಗಣ್ಣಿ, ಎತ್ತಿನ ಹಣೆಕಟ್ಟು, ಕೊಳ್ಳದಂಡೆ, ಕುಕ್ಕೆ

ಅರ್ಥಾತ್ ಬಾಯಿಕುಕ್ಕೆ. ಈ ಎಲ್ಲಾ ಉಪಕರಣಗಳನ್ನು ಮತ್ತು ಸಲಕರಣೆಗಳನ್ನೂ ದೀವರರೈತರು ಗೌರವದಿಂದ ಹಾಗೂ ಭಯಭಕ್ತಿಯಿಂದ ಕಾಣುತ್ತಾರೆ. ಹೊಸ ಕೃಷಿಪರಿಕರಗಳನ್ನು ತಯಾರು ಮಾಡಿಸಿದರೆ ಅವನ್ನು ಪೂಜಿಸಿದ ನಂತರವೇ ಬಳಕೆಗೆ ತೊಡಗಿಸುವುದು. ಅವುಗಳನ್ನು ಕಾಲಿನಿಂದ ಒದೆಯುವುದಿಲ್ಲ. ಅಕಸ್ಮಾತ್ ಅವುಗಳಿಗೆ ಕಾಲೇನಾದರೂ ತಗುಲಿದರೆ ಶರಣು ಮಾಡುತ್ತಾರೆ. ಮಕ್ಕಳು ಅವುಗಳನ್ನು ಹಾಗೆ ಒದೆಯದಂತೆ ಉಪದೇಶಿಸುತ್ತಾರೆ. ಯುಗಾದಿಯ ಮತ್ತು ದೀಪಾವಳಿ ಕಾರುಹುಣ್ಣಿಮೆಯ ಸಂದರ್ಭದಲ್ಲಿ ವಿಶೇಷವಾಗಿ ತಮ್ಮ ಸಾಧನ ಸಾಮಗ್ರಿಗಳನ್ನು ಪೂಜಿಸುವುದಲ್ಲದೆ ಪ್ರತಿಸೋಮವಾರ ಅಥವಾ ಪೂಜೆ ಮಾಡಿದ ದಿವಸ ಅವುಗಳಿಗೆ ನೀರು ಹೂ ಮುಟ್ಟಿಸುತ್ತಾರೆ. ಅವುಗಳ ಬಳಕೆಯ ಕಾಲ ಮುಗಿಯುತ್ತಿದ್ದಂತೆಯೇ ಬಿಚ್ಚಿ ತಮ್ಮ ಮನೆಯ ಅಟ್ಟದಲ್ಲಿ ಜೋಪಾನವಾಗಿ ಕಾಪಾಡಿಕೊಳ್ಳುತ್ತಾರೆ. ಅವು ಮುರಿಯಬಾರದು ಹಾಳಾಗಬಾರದು ಎಂದು ಆಶಿಸುತ್ತಾರೆ. ಅಕಸ್ಮಾತ್ ಹಾಗೇನಾದರೂ ಮುರಿದರೆ ತಮಗೆ ಮತ್ತು ತಮ್ಮ ಒಕ್ಕಲುತನಕ್ಕೆ ಕೇಡು ಎಂದು ಭಾವಿಸುತ್ತಾರೆ.

ಶಾಂತಿ ಉಪಶಮನಗಳ ಹಾದಿ ಹಿಡಿಯಲು ಉಪಕ್ರಮಿಸುತ್ತಾರೆ. ಈ ಭಾವನೆಗಳಿಗೆ ಅಭಿವ್ಯಕ್ತಿಯಾಗಿ ಅವರಲ್ಲಿ ಹಲವು ನಂಬಿಕೆಗಳು ಹುಟ್ಟಿಕೊಂಡಿರುವುದು ಕಂಡುಬರುತ್ತದೆ. ಅಂತಹ ಕೆಲವು ನಂಬಿಕೆಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ನೊಗ ದಾಟಿದರೆ ಎತ್ತಿಗೆ ಹೆಗಲು ಬರುತ್ತೆ.

೨. ನೊಗ ಮುರಿದರೆ ಅದನ್ನು ಮನೆಯೊಳಗಿಂದ ಬಾದಾಳಕ್ಕೆ ಎಸೆಯಬೇಕು.

೩. ವ್ಯವಸಾಯದ ಮುಟ್ಟುಗಲು ಮುರಿದರೂ ಅವನ್ನು ಒಲೆಗೆ ಹಾಕಬಾರದು.

೪. ಗಾಡಿಯ ನೊಗದ ಮೇಲೆ ಕಾಲಿಡಬಾರದು.

೫. ಎತ್ತುಗಳು ನೊಗಸಹಿತ ಊರೊಳಗೆ ಪ್ರವೇಶಿಸಬಾರದು, ಹಾಗೆ ಪ್ರವೇಶಿಸಿದರೆ ಊರಿಗೆ ಕೇಡಾಗುತ್ತದೆ.

೬. ನೊಗ, ಹಾರೆ ಮುಂತಾದವುಗಳನ್ನು ಬಾಗಿಲಿಗೆ ತಾಕಿಸಬಾರದು.

೭. ಹಾರೆ, ಗುದ್ದಲಿ, ಹೊತ್ತುಕೊಂಡೇ ಮನೆ ಪ್ರವೇಶಿಸಬಾರದು.

೮. ಮನೆ ಬಾಗಿಲಿನಲ್ಲಿ ನೊಗ ಮುರಿಯಬಾರದು. ಮನೆಗೆ ಕೆಡಕು.

೯. ಉಳುಮೆ ಮಾಡುವಾಗ ನೊಗ ಮುರಿದರೆ ಬೆಳೆಗೆ ಕೇಡು.

೧೦. ನೇಗಿಲ ಕುಳಕ್ಕೆ, ಗೊಟ್ಟೆ, ಚಿಪ್ಪು ಸಿಕ್ಕಿದರೆ ಮನೆತನಕ್ಕೆ ಕೇಡು.

೧೧. ಹೊಸಗಾಡಿಗೆ ಪ್ರಾಣಿಬಲಿ ಕೊಡಬೇಕು. ಇಲ್ಲದಿದ್ದರೆ ಯಾರನ್ನಾದರೂ ಬಲಿ ತೆಗೆದುಕೊಳ್ಳುತ್ತದೆ.

೧೨. ಗಾಡಿ ಮಾರಿದಾಗ ನೊಗ ಬಿಚ್ಚಿಕೊಳ್ಳಬೇಕು.

೧೩. ಕೆಲಸ ಮಾಡುವಾಗ ಮಂಕರಿ ದಬ ಹಾಕಬಾರದು.

೧೪. ಚಡಾವು ಹಾಕಿಕೊಂಡು ಕಣ ತುಳಿಯಬಾರದು.

೧೫. ಮೆಟ್ಟುಗಾಲಿನಲ್ಲಿ ತುಂಬಿದ ಹೊಲ ತುಳಿಯಬಾರದು.

ಈ ಮೇಲಿನ ಎಲ್ಲಾ ನಂಬಿಕೆಗಳನ್ನು ದೀವರ ಕೃಷಿಯ ಬದುಕಿನಲ್ಲಿ ಕಾಣಬಹುದಾಗಿದೆ.

ಪ್ರಾಚೀನ ಕಾಲದಿಂದಲೂ ಉಪಕರಣಗಳನ್ನೂ ಪವಿತ್ರವಸ್ತುಗಳೆಂದು ಪರಿಗಣಿಸಲಾಗಿದೆ. ಅವರಲ್ಲಿ
ನೆಯ ಸಾಧನ ನೇಗಿಲಿಗೆ, ನೇಗಿಲ ಕುಳಕ್ಕೆ ಬಂಗಾರದ ಹೊದಿಕೆ ಹಾಕಿದಾನ ಮಾಡಿದರೆ ಲಭಿಸುತ್ತಿದ್ದ
ಂತಾದವನ್ನು ಕುರಿತಂತೆ ಜಾತಕ ಕಥೆಗಳು ಮನುಧರ್ಮ ಶಾಸ್ತ್ರಗಳು ಧೀರ್ಘವಾಗಿ ವಿವರಿಸಿವೆ. ಉಳುಮೆಯ
ದಲ್ಲಿ ನೇಗಿಲು ಮುರಿದರೆ ಮುಂಬರಲಿರುವ ಘೋರ ದುರಂತವನ್ನು ಪರಾಶರರು ವರ್ಣಿಸಿದ್ದಾರೆ.''

**ೀವರ ಕೃಷಿಯಲ್ಲಿ ಕಂಡು ಬರುವ ಇತ್ತೀಚಿನ ಬದಲಾವಣೆ:**

್ರಸ್ತುತವಲ್ಲಿ ಇಂದು ರೈತನ ಬದುಕಿನಂತೆಯೇ ಅವನ ಸಾಧನ ಸಾಮಗ್ರಿಗಳನ್ನು ತತ್ತರಿಸಿ ಹೋಗಿವೆ.
ತೆಯಿಂದಾಗಿ ಅವು ನಲುಗಿ ಹೋಗಿವೆ. ಗಿಡಮರಗಳ ಅಭಾವದಿಂದ ಹಾಗೂ ದುಬಾರಿ ಬೆಲೆಯಿಂದ
ಕುಂಟೆ, ಕೂರಿಗೆ ಮುಂತಾದವುಗಳು ಸಾಮಾನ್ಯ ರೈತನಿಗೆ ಎಟುಕದಂತಾಗುತ್ತವೆ. ಟ್ರಾಕ್ಟರ್ ಟಿಲ್ಲರು
ದವುಗಳ ಪ್ರವೇಶ ಸಣ್ಣ ಪ್ರಮಾಣದ ರೈತರನ್ನು ಕಂಗಾಲು ಮಾಡಿವೆ. ಮರದ ಸಾಮಗ್ರಿಗಳ ಬದಲಾಗಿ
ಲೋಹ ಸಾಮಗ್ರಿಗಳು ಪ್ರವೇಶವಾಗುತ್ತವೆ. ಯಂತ್ರಗಳ ಪರಿಚಯದಿಂದಾಗಿ ದನಕರುಗಳ ಸಂಯೋಜನೆ,
ರುದಿಂದ ನಿಧಾನವಾಗಿ ದೂರವಾಗುವಂತೆ ಕಾಣುತ್ತದೆ.

್ಯಾವಣಿ (ಹಂತಿ) ಹೊಡೆಯುವುದನ್ನು ಬಿಟ್ಟು ರೈತ ರೋಣಗಲ್ಲು ಹೊಡೆಯಲು ತೊಡಗಿಸಿ, ಈಗ ಕಣ
ದನ್ನು ಮರೆತು ಡಾಂಬರು ರಸ್ತೆಗಳ ಮೇಲೆ ಹುಲ್ಲು ಹಾಕಿಕೊಂಡು ಹೋಗುವ, ಬರುವ ವಾಹನಗಳನ್ನು
ಾ ಕೂತಿದ್ದಾನೆ. ಸಣ್ಣಕರುವೊಂದು ದನಗಳೊಂದಿಗೆ ಹೊರಟಾಗ ತನ್ನ ತಾಯಿಯ ಹಾಲು
ಾರದೆಂದು ಅದಕ್ಕೆ ಬಾಯಿಕುಕ್ಕೆ ಕಟ್ಟುತ್ತಿದ್ದ ರೂಢಿಯಿತ್ತು. ಆ ಬಾಯಿಕುಕ್ಕೆ ಸಾಧಾರಣವಾಗಿ ಹುರಿಯಿಂದ
ಥವಾ ಸುತ್ತ ಮುತ್ತ ಸಿಗುವ ಬಳ್ಳಿಗಳಿಂದ ಮಾಡಿದುದಾಗಿರುತ್ತಿತ್ತು. ಈಗ ಪುಂಡಿ ನಾರು ಬೆಳೆಯಲು
ಗದೆ, ಮತ್ತು ಬಳ್ಳಿಯು ಸಿಗದೆ ಸಿಕ್ಕುವ ಡಾಲ್ಡ ಡಬ್ಬಿಯನ್ನೇ ದಬ್ಬೆಕಟ್ಟಿ ಬಾಯಿಕುಕ್ಕೆ ಮಾಡುವ ಪ್ರಸಂಗಗಳು
ತ್ತವೆ. ಡಾಲ್ಡ ಡಬ್ಬವೊಂದು ಕರುವಿನ ಮುಸುಡಿಯನ್ನು ಹಾಳು ಮಾಡಬಹುದು. ಅಥವಾ ತಾಯಿಯ
ಬಾಯಿ ಹಾಕಿದರೆ ಕೆಚ್ಚಲಿಗೆ ಊನವಾಗಬಹುದು ಎಂಬ ಪ್ರಜ್ಞೆಯು ಆತನನ್ನು ಕಾಡುತ್ತಿಲ್ಲ. ಅಥವಾ ಈ
ಾವಸ್ಥೆಯ ಸ್ಥಿತಿಯಿಂದ ಆತ ಅಸಹಾಯಕವಾಗಿದ್ದಾನೆಂದರೂ ಸರಿಯೇ.

್ಥೀಯ ಸಂಪನ್ಮೂಲಗಳನ್ನೇ ನೆಚ್ಚಿದ ರೈತ ಸಮಾಜ ಈಗ ಅದು ನಗರ ಮುಖಿಯಾಗಿದೆ. ರೈತನಿಗೆ
ವ ಬೀಜ ಗೊಬ್ಬರ ಔಷಧ ಸಾಧನ ಸಾಮಗ್ರಿಗಳೆಲ್ಲವೂ ಪಟ್ಟಣಗಳಲ್ಲಿ ದೊರಕುತ್ತಿವೆ. ಅವುಗಳ ಗುಣಮಟ್ಟ
ಅರಿವಾಗುತ್ತಿಲ್ಲ. ಹಾಗಾಗಿ ಅವುಗಳ ಬಾಳಿಕೆ ತಾಳಿಕೆ ಆತನಿಗೆ ಗೊತ್ತಾಗುವುದಿಲ್ಲ. ಅವನ ಇಡೀ ಬದುಕು
ಂದ ನಿಯಂತ್ರಗೊಳ್ಳುತ್ತದೆ. ಅವನು ಏನು ಬೆಳಯಬೇಕೆಂಬುದನ್ನು ಕೃಷಿ ಇಲಾಖೆ ನಿರ್ಧರಿಸುತ್ತದೆ.
ಳೆಯ ಬೆಲೆಯನ್ನು ಕೃಷಿ ಮಾರುಕಟ್ಟೆಯ ದಲಾಲರು ನಿಯಂತ್ರಿಸುತ್ತಾರೆ. ತಾನು ಬೆಳೆಯುವ ದವಸಧಾನ್ಯಗಳು
ದೇಶದ ದಾಸ್ತಾನು ಕ್ರಮಕ್ಕೆ ಹೊಂದದೆ ಅವುಗಳನ್ನು ಕಾಪಾಡಲು ಸಾಧ್ಯವಿಲ್ಲದ ಸ್ಥಿತಿಗೆ ಬಂದಿದ್ದಾನೆ.
ಸರ್ಗದ ಮುನಿಸೂ ಅವನನ್ನು ಕಾಡುತ್ತಿದೆ. ಇನ್ನೂ ಬಹುರಾಷ್ಟ್ರೀಯ ಕಂಪನಿಗಳು ಪ್ರವೇಶ ಮಾಡಿದರೆ
ತಿಗತಿ ಏನಾಗುತ್ತದೆ. ಎನ್ನುವುದನ್ನು ಆಲೋಚಿಸಬೇಕಾಗಿದೆ. ಬುಡಕಟ್ಟು ಸಮುದಾಯವಾದ ದೀವರಲ್ಲಿ
ತ್ತೀಚಿಗೆ ಕೃಷಿಯಲ್ಲಿ ಆಧುನಿಕ ಯಂತ್ರೋಪಕರಣಗಳನ್ನು ಬಳಸಿಕೊಳ್ಳುವುದನ್ನು ಕಂಡುಕೊಂಡಿದ್ದಾರೆ.
ಕ್ರಾಲರ್ ಟ್ರಾಕ್ಟರ್, ಟಿಲ್ಲರುಗಳು, ಕಬ್ಬಿಣದ ನೇಗಿಲು, ಹೊಲದಿನ್ನೆಗಳನ್ನು ಸಮತಟ್ಟಾಗಿಸಲು

ಬಂಡ್‌ಫಾರ್ಮರ್ ಬಳಸುತ್ತಾರೆ. ಗಿಡ ಮರಗಳ ಬೇರನ್ನು ತೆಗೆದು ಹಾಕಲು ಬುಲ್ಡೋಜರ್, ತೆನೆ ಕತ್ತರಿಸಲು, ಕಾಳು ಬೇರ್ಪಡಿಸಲು ಕಂಬೈನ್ ಹಾರ್ವೆಸ್ಟರ್ ಇತ್ಯಾದಿ ಹೀಗೆ ದೀವರು ಬದಲಾಗುತ್ತಿರುವ ಕಾಲಮಾನಕ್ಕೆ ತಮ್ಮನ್ನು ಮಾರ್ಪಡಿಸಿಕೊಳ್ಳುವತ್ತ ದಿಟ್ಟ ಹೆಜ್ಜೆ ಇಟ್ಟಿದ್ದಾರೆ.

**ಕೃಷಿಯ ನಿತ್ಯಬಳಕೆಯ ಸಾಧನಗಳು:**

ಹಾರೆ, ಕುಡಗೋಲು, ಕುರ್ಚಿಗಿ, ಕುಳ, ತಾಳು, ಮೊಳೆ, ಪಿಕಾಸಿ, ಸಲಿಕೆ, ಗುದ್ದಲಿ, ಸರಪಳಿ, ಕುಡ, ಅಚ್ಚು, ಕೀಲು| ಕಡಾಣಿ, ಅರ, ಕತ್ತರಿ, ಕೊಡಲಿ, ಕಂದ್ಲಿ, ಬಾಚಿ, ಗರಗಸ, ಬಳೆ, ಸುತ್ತಿಗೆ.

೧. ಕಂದ್ಲಿ: ಬಡಗಿಯ ಬಳಿ ಉಕ್ಕಿನಿಂದ ಬಡಿಸಿರುವ ಸಾಧನ. ಇದರಲ್ಲಿ ನಾನಾ ವಿಧಗಳಿವೆ.

೨. ಕುರಿಕಡಿಯುವ ಕಂದ್ಲಿ: ದೊಡ್ಡಗಾತ್ರದ್ದು.

೩. ಕಟ್ಟಿಗೆ ಕಡಿಯುವ ಕಂದ್ಲಿ: ಕಟ್ಟಿಗೆ ಕಡೆಯಲು ಬಳಸುವ ಸಾಧನ.

೪. ಸೊಪ್ಪುಕಂದ್ಲಿ: ಕುರಿ ಅಥವಾ ದನಗಳಿಗೆ ಸೊಪ್ಪು ಕಡಿಯಲು ಬಳಸುವುದು.

೫. ಕುಡಗೋಲುಗಳು: ೧. ತರಕಾರಿ ಹೆಚ್ಚುವ ಕುಡಗೋಲುಗಳು. ೨. ಕಳೆಗತ್ತಿ. ೩. ಹುಲ್ಲುಕೊಯ್ಯುವ ಕುಡಗೋಲು. ೪. ಗದ್ದೆಕೊಯ್ಯುವ ಕುಡಗೋಲು. ೫. ಮೆಟಗತ್ತಿ. ೬. ತುದಿಗುದ್ಲಿ, ಗಿಡಗತ್ತಿಗಣೆ: ಎತ್ತರವಾಗಿ ಬೆಳೆದಿರುವ ಬಿದಿರನ್ನು ಕಡಿಯಲು ಬಳಸುವ ಸಾಧನ. ಉದ್ದನೆಯ ಬಿದಿರಿನ ಕೋಲಿಗೆ ಕುಡಗೋಲಿನಂತಹ ಬಾಗಿರುವ ಸಾಧನವನ್ನು ತೂತು ಮಾಡಿ ಅಣಸು ಕಟ್ಟಿಹಾಕಲಾಗುತ್ತದೆ.

೬. ಕೊಡಲಿ: ಕಟ್ಟಿಗೆ ಕೀಳಲು ಬಳಸುವ ಸಾಧನ. ಒಂದು ತುದಿಯನ್ನು ತಟ್ಟಿ ಹದಮಾಡಿ ಮೂರು ಇಂಚು ಅಗಲ ಮಾಡಿರುತ್ತಾರೆ. ಇನ್ನೊಂದು ತುದಿಯಲ್ಲಿ ದೊಡ್ಡರಂಧ್ರವಿರುತ್ತದೆ. ಅದಕ್ಕೆ ಮರದ ಕಾವು ಜೋಡಿಸಿರುತ್ತಾರೆ.

೭. ಅಡ್ಡಮುರಿ: ಗರಗಸದ ದೊಡ್ಡರೂಪ. ದೊಡ್ಡಮರದ ತುಂಡುಗಳನ್ನು ಕೊಯ್ಯಲು ಬಳಸುತ್ತಾರೆ.

ದೀವರು ಒಂದು ಬುಡಕಟ್ಟು ಸಮುದಾಯವನ್ನು ಪ್ರತಿಬಿಂಬಿಸುವಲ್ಲಿ ಪ್ರಮುಖಸ್ಥಾನವನ್ನು ಪಡೆದುಕೊಂಡಿದ್ದಾರೆ. ಕೃಷಿವೆಂಬುದು ರೈತನ ಜೀವನವನ್ನು ಸಾಗಿಸುವ ಮತ್ತು ಸಮಗ್ರ ಸರ್ವತೋಮುಖ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಪ್ರಮುಖಸ್ಥಾನವನ್ನು ನೀಡಿದೆ. ಈ ಹಿನ್ನೆಲೆಯಲ್ಲಿ ಕೃಷಿಯ ಎಲ್ಲ ಪರಿಕರಗಳನ್ನು ಪೂಜಾಭಾವನೆಯಿಂದ ಕಂಡುಕೊಂಡ ದೀವರು ಅವುಗಳ ಸಾಮರಸ್ಯತನವನ್ನು ಮೈಗೂಡಿಸಿಕೊಂಡಿದ್ದಾರೆ. 'ಕೃಷಿ' ಒಂದು ಸಮುದಾಯಕ್ಕೆ ಸಂಬಂಧಪಟ್ಟದಲ್ಲ. ನಾಡಿನ ಎಲ್ಲ ರೈತರ ಜೀವನಾಡಿಯಾಗಿದೆ ಎಂಬುದನ್ನು ತಮ್ಮ 'ಕೃಷಿ' ಸಂಸ್ಕೃತಿಯ ಸಂಕೇತದಿಂದ ಪ್ರತಿಬಿಂಬಿಸಿಕೊಂಡಿದ್ದಾರೆ.

## ಅಡಿಟಿಪ್ಪಣಿಗಳು

೧. ವೆಂಕಟರಾವ್ ಡಿ., (೧೯೮೫),ಕೃಷಿ ಬೆಳವಣಿಗೆ, ಪು. ೫೭

೨. ಅದೇ., ಪು. ೪

೩. ಅದೇ., ಪು. ೫

೪. ಅದೇ., ಪು. ೫

೫. ಶಿವನಂಜಯ್ಯ ಜಿ., (೧೯೯೪), ಸಹಜಕೃಷಿ, ಪು. ೧೮

೬. ಹೊಸಮನಿ ಎಂ.ಎಂ., ಚಂದ್ರಯ್ಯ ಎಸ್.ಸಿ., ಕೃಷಿಉಪಕರಣಗಳು, ಪು. ೨೮

೭. ರಾಮಯ್ಯ ಆರ್.ವಿ., ಶ್ರೀವತ್ಸವ ಸಿ.ಪಿ., (೧೯೫೪), ಅಗ್ರಿಕಲ್ಚರಲ್ ಇಂಪ್ಲಿಮೆಂಟ್ಸ್ ಫಾರ್ ಇಂಡಿಯನ್ ಫಾರ್ಮರ್ಸ್, ಪು. ೪೮

೮. ವೆಂಕಟರಾವ್ ಡಿ., (೧೯೮೫), ಕೃಷಿಬೆಳವಣಿಗೆ, ಪು. ೮

೯. ಅದೇ., ಪು. ೫

೧೦. ಅದೇ., ಪು. ೫೯

೧೧. ಮೃತ್ಯುಂಜಯ ಹೊರಕೆರೆ., (೧೯೯೮), ರೈತಜಾನಪದ, ಪು. ೩೨

## ಅಧ್ಯಾಯ ೭

# ದೀವರಲ್ಲಿಯ ಸುಗ್ಗಿಸಂಪ್ರದಾಯ

ಸುಗ್ಗಿಗೆ ಸಿದ್ಧತೆ; ಒಕ್ಕಣೆಯ ಸಾಧನಗಳು

ಬೂತನಹಬ್ಬ

ಒಕ್ಕಲು ಪದ್ಧತಿ

ರಾಶಿಯ ವೈಶಿಷ್ಟ್ಯತೆ: ಕಣದ ಹಬ್ಬ

**ಸುಗ್ಗಿಯ ಸಿದ್ಧತೆ; ಒಕ್ಕಣೆಯ ಸಾಧನಗಳು**

ಸುಗ್ಗಿಯು ರೈತರ ದೃಷ್ಟಿಯಲ್ಲಿ ಒಂದು ವರದಾನವೇ ಸರಿ. ರೈತರು ತಾವು ಬೆಳೆದ ಬೆಳೆಗಳನ್ನು ಕಟಾವು ಮಾಡಿ ಕಾಳುಗಳನ್ನು ಬೇರ್ಪಡಿಸುವ ಕಾಲವಿದು. ಈ ಸುಗ್ಗಿಯ ಸಮಯವು ರೈತರಿಗೆ ಹೊಸ ಬದುಕಿನ ಕ್ರಮವನ್ನು ರೂಪಿಸುತ್ತದೆ. ತಾವು ಬೆಳೆದ ದವಸ ಧಾನ್ಯಗಳನ್ನು ತಮಗೆ ಬೇಕಾದಷ್ಟು ಸಂಗ್ರಹಿಸಿಕೊಂಡು ಉಳಿದೆಲ್ಲಾ ಧಾನ್ಯಗಳನ್ನ ಮಾರಾಟ ಮಾಡುವ ಕಾಲವಿದು. ಇದರಿಂದ ಮುಂದಿನ ಸಾಗುವಳಿಗೆ ಅನುಕೂಲ ಮಾಡಿಕೊಂಡು ತಮ್ಮ ಬದುಕನ್ನ ಸಾಗಿಸುವರು. ಸುಗ್ಗಿಯು ಹೊಸ ಪ್ರತಿಬಿಂಬದ ಬದುಕನ್ನು ರೈತರಿಗೆ ನೀಡುತ್ತದೆ. ಈ ಸಮಯದಲ್ಲಿ ರೈತರು ಸಂತಸದ ದಿನಗಳನ್ನ, ಹಾಡುಗಳು, ಲಾವಣಿಗಳ ಮೂಲಕ ಹಂಚಿಕೊಳ್ಳುವರು. ಒಟ್ಟಿನಲ್ಲಿ ಸುಗ್ಗಿ ಬದುಕಿನ ಹೊಸ ಆಯಾಮದ ರೂಪರೇಷವನ್ನ ಕೃಷಿಕರಲ್ಲಿ ಅಂತರ್ಗಿಸಿಕೊಳ್ಳುತ್ತದೆ. ಹಾಗಾಗಿ ಕೃಷಿಕರ ನಿಲುವಿನಲ್ಲಿ ಸುಗ್ಗಿ ಒಂದು ವಸಂತ ವರದಾನವಾಗಿದೆ. ಈ ಹಿನ್ನೆಲೆಯಲ್ಲಿ ದೀವರ ಸುಗ್ಗಿ ಸಂಪ್ರದಾಯವನ್ನು ವಿಶ್ಲೇಷಿಸಲಾಗಿದೆ. ಕೃಷಿಕರಾದ ದೀವರ ಸುಗ್ಗಿ ಸಂಪ್ರದಾಯ ಆರಂಭವಾಗುವುದು 'ಭೂಮಿಹುಣ್ಣಿಮೆ' ಸಂದರ್ಭದಲ್ಲಿ, ಭೂಮಿ ಪೂಜೆ ಮಾಡಿ ಭೂಮಿಯಲ್ಲಿ ಹುಗಿದಿಟ್ಟ ಎಡೆಯನ್ನು ತೆಗೆಯುವುದರ ಮುಖಾಂತರ ಎಡೆಯನ್ನು ಪ್ರಸಾದವಾಗಿ ಹಂಚುವರು. ನಂತರ ಭತ್ತದ ಕೊಯ್ಲಿಗೆ ಸಿದ್ಧತೆ ಮಾಡಿಕೊಳ್ಳುವರು.

**ಗದ್ದೆ ಕೊಯ್ಲು:** ವರ್ಷದ ತೊಡಕಿನ ಒಂದು ವಾರದ ಮೊದಲು ಹಣ್ಣು, ಕಾಯಿ, ಒಯ್ಯು, ಹಾಲು ಹಣ್ಣು ಚೆಲ್ಲಿ ನೈವೇದ್ಯವನ್ನು ಮಾಡಿ ಐದು ಬುಡಕೊಯ್ದು ದೇವರಿಗೆ ಎಡೆ ಇಟ್ಟು ಎರಡು ಸಸಿ ಎಂದು ಪೂಜಿಸುತ್ತಾರೆ. ನಂತರ ಯಾವಾಗ ಬೇಕಾದರೂ ಕೊಯ್ಯಬಹುದು. ಕೊಯ್ಲು ಬಹುತೇಕ ಮುಯ್ಯಾಳು ಪದ್ಧತಿಯಲ್ಲಿ ನೆಡೆಯುತ್ತದೆ.

ಗದ್ದೆ ಕೊಯ್ಲು ಆರಂಭಿಸುವ ಮೊದಲು ಕುಡುಗೋಲನ್ನು ಕಮ್ಮಾರನಿಂದ ಹಣಿಸಿಕೊಂಡಿರುತ್ತಾರೆ. ನಂತರ ಭತ್ತದ ಕೊಯ್ಲು ಆರಂಭಿಸುವರು. ಮೊದಲು ಮನೆಯ ಹಿರಿಯ ಯಜಮಾನನೇ ತನ್ನ ಹೊಲದ ಭತ್ತವನ್ನು ಮೊದಲಿಗೆ ಕೊಯ್ಯುವ ವಾಡಿಕೆ ಇದೆ. ನಂತರ ಎಲ್ಲರು ಭತ್ತದ ಕೊಯ್ಲು ಕೊಯ್ಯಲು ಆರಂಭಿಸುವರು. ಇದು ದೀವರಲ್ಲಿಯ ಸುಗ್ಗಿ ಆರಂಭಿಸುವ ಪದ್ಧತಿಯಾಗಿದೆ . ಇತ್ತೀಚಿಗೆ ಭೂಮಿಹುಣ್ಣಿಮೆ ಎಡೆಯನ್ನು ಯಾರು ತಿನ್ನುವುದಿಲ್ಲ. ಕಾರಣವಿಷ್ಟೇ ಭೂಮಿಯಲ್ಲಿ ಹುಗಿದಿಟ್ಟ ಎಡೆಯು ಕೊಳೆತುಕೊಂಡಿರುತ್ತದೆ ಎಂಬ ಭಾವನೆಯಿಂದ ದನಕರುಗಳಿಗೆ ತಿನ್ನಿಸುವರು. ಜೊತೆಗೆ ಭೂಮಿಪೂಜೆಯಲ್ಲಿ ಅಸ್ತವ್ಯಸ್ತವಾಗಿದೆಯೆಂಬ ಭಾವನೆ ಅವರದಾಗಿದೆ.

**ಒಕ್ಕಣೆಯ ಸಾಧನಗಳು**

೧. ಮೇಟಿ: ಹಾಲು ಮರದ ಕಂಬವನ್ನು ಬಳಸುತ್ತಾರೆ. ಮದ್ದಾಲೆ, ಕಕ್ಕೆ ಮರದ ಆರು ಅಡಿ ಕಂಬವನ್ನು ಕಡಿದು ತಂದು ನೆಡಲಾಗುತ್ತದೆ.

೨. ದಾವಣಿ: ನಾರಿನ ಹಗ್ಗಕ್ಕೆ ಕಬ್ಬಿಣದ ವೃತ್ತದ ಸರಳು ಹಾಕಿ ಹಲಸದ ಮರದ ಬೇರಿನ ಕೊಟ್ಟಿಗೆ (ದೀಪದ ಗುಡ್ಡದ ತರಹ) ದಾವಣಿಯನ್ನು ಸೇರಿಸಿ ಪಟಗಣೆಯನ್ನು ಜೋಡಿಸಲಾಗುತ್ತದೆ.

೩. ರೋಣಗಲ್ಲು: ಈಸು ಇರುತ್ತದೆ. ಅದಕ್ಕೊಂದು ಕಾಲುಮಣೆ ಜೋಡಿಸುತ್ತಾರೆ.

೪. ಮೆರೆಕೋಲು: ಗಟ್ಟಿ ಹಾಗೂ ನೀಳವಾದ ಬಿದಿರಿನ ಕೊಕ್ಕೆಯ ತರಹದ ರಚನೆ ಇರುತ್ತದೆ.

೫. ಗೋರಹಲಗೆ: ಚಂದ್ರಾಕೃತಿಯ ಮರದ ಹಲಗೆಗೆ ಒಂದು ಕೋಲನ್ನು ಜೋಡಿಸುತ್ತಾರೆ.

೬. ಬರಲು: ಸಳ್ಳು- ಅರ್ಚರಿ ಗಿಡದಿಂದ ಮಾಡಿರುವುದು.

೭. ಬೈನೆಹಿಡಿ: ಬಗನೆ ಸೋಗೆಯಿಂದ ಮಾಡಿರುವುದು.

೮. ಮುಳ್ಳುಹಿಡಿ: ಹೊಟ್ಟನ್ನು ಭತ್ತದಿಂದ ಬೇರ್ಪಡಿಸಲು ಬಿದಿರಿನಿಂದ ಮಾಡಿರುವ ಸಾಧನ.

೯. ಮೊರ: ಭತ್ತ ತೂರಲು ಬಳೆಸುತ್ತಾರೆ.

ಎರಡನೆಯ ಹಂತದಲ್ಲಿ ಕೊಯ್ಲು ಮಾಡಿದ ಭತ್ತದ ಹುಲ್ಲನ್ನು ಒಂದೆರಡು ದಿನ ಒಣಗಲು ಅಥವಾ ಹಾರಲು ಬಿಟ್ಟು ನಂತರ ಭತ್ತದ ಗೊಣಬೆಯನ್ನು ಹಾಕುವರು. ಗೊಣಬೆ ಹಾಕುವಾಗ ಕೊಯ್ಲು ಭತ್ತದ ಕುಳಿಯನ್ನು ಮಣ್ಣು ಸಮೇತ ಎತ್ತಿ ತಂದು ಗೊಣಬೆಯ ಮೇಲು ತುದಿಗೆ ಇಡುವರು. ಭತ್ತದ ಕುಳಿಯನ್ನಿಟ್ಟು ಹತ್ತರಿಂದ ಹದಿನೈದು ದಿನದ ನಂತರ ಬೂತನ ಹಬ್ಬವನ್ನು ಮಾಡುವರು.

**ಬೂತನ ಹಬ್ಬ:** ದೀವರಲ್ಲಿ ಸುಗ್ಗಿ ಸಂಪ್ರದಾಯಕ್ಕೆ ಸಂಬಂಧಪಟ್ಟಂತೆ ಆಚರಿಸುವ ಒಂದು ಹಬ್ಬವಾಗಿದೆ. ಭೂತನ ಹಬ್ಬದ ವೈಶಿಷ್ಟವೇನೆಂದರೆ ಗೊಣಬೆಯ ಮೇಲೆ ಕೂರಿಸಿದ ಬ್ಯಾನಪ್ಪನನ್ನು ಕೆಳಕ್ಕೆ ತೆಗೆದು ವಿವಿಧ ರೀತಿಯ ಹೂಗಳನ್ನು ಮುಡಿಸಿ ಮಾವಿನ ತಳಿರು-ತೋರಣಗಳನ್ನು ಸಿಗಿಸಿ ಭೂಮಿಹುಣ್ಣಿಮೆ ಸಂದರ್ಭದಲ್ಲಿ ಕಟ್ಟಿದ ಹಂಗುನೂಲನ್ನು ಬ್ಯಾನಪ್ಪನಿಗೆ ಕಟ್ಟಿ ಪೂಜೆಮಾಡುವರು. ಹಂಗುನೂಲು ಬ್ಯಾನಪ್ಪನಿಗೆ ಹಾಕಿದ ಮೇಲೆ ಕಳೆಯಬಾರದು. ಅಕಸ್ಮಾತ್ ಅದು ಒಂದು ವೇಳೆ ಕಳೆದರೆ ಒಂದು ಚೀಲ ಭತ್ತ ಹೋದಂತೆ ಎಂಬ ನಂಬಿಕೆ ದೀವರದು. ಗೊಣಬೆ ಹಾಕುವಾಗ ಹಾಕಿದ ಏಣಿಯನ್ನು ಒಂದು ದಿನ ತೆಗೆಯುವುದಿಲ್ಲ. ಏಕೆಂದರೆ ಆಗ ಬಿದ್ದ ಭತ್ತವೆಲ್ಲ ಏಣಿಯ ಮೂಲಕ ಹತ್ತುತ್ತದೆ ಎಂಬ ನಂಬಿಕೆ. ಒಂದು ವೇಳೆ ಏಣಿ ತೆಗೆದರೆ ಗೊಣಬೆಗೆ ಒಂದು ಕೋಲು ಆನಿಸಿಡುತ್ತಾರೆ.

**ಭೂತನಿಗೆ ಕಳ್ಳುಹೊಯ್ಯುವುದು:** ಗೊಣಬೆಯ ಮೇಲಿಟ್ಟ ಬ್ಯಾನಪನನ್ನು ಕೆಳಗೆ ತೆಗೆದು ವಿವಿಧ ರೀತಿಯಲ್ಲಿ ಹೂಗಳನ್ನು ಮುಡಿಸಿ ಮಾವಿನ ತಳಿರು-ತೋರಣಗಳನ್ನು ಸಿಗಿಸಿ ಕಡ್ಡಿ, ಕರ್ಪೂರ ಹಾಕಿ, ಎಣ್ಣೆದೀಪ ಹಾಕಿ ವ್ಯವಸ್ಥಿತವಾದ ಸಾಂಪ್ರದಾಯಿಕ ನಿಯಮಗಳೊಂದಿಗೆ ಪೂಜೆ ಮಾಡುವರು. ಹಾಗೆಯೇ ಪೂಜೆಯ ಸಂದರ್ಭದಲ್ಲಿ ಭೂಮಿಹುಣ್ಣಿಮೆಯಲ್ಲಿ ಕಟ್ಟಿದ ಹಂಗುನೂಲನ್ನು ಬ್ಯಾನಪ್ಪನಿಗೆ ಹಾಕಿ ಪೂಜಿಸುವುದರ ಜೊತೆಗೆ ಮನೆಯವರು ಮತ್ತು ಸಂಬಂಧಿಕರೆಲ್ಲರೂ ಸೇರಿ ಬ್ಯಾನಪ್ಪನಿಗೆ ಕಳ್ಳುಹೊಯ್ಯುವರು. (ಈಚಲು ಮತ್ತು ಬಗನಿಹೆಂಡ) ಅಂದಿನ ದಿನ ದೀವರ ಮನೆಯಲ್ಲಿ ಹೆಚ್ಚಾಗಿ ಮಾಂಸಹಾರಿ ಪದಾರ್ಥಗಳನ್ನು ಮಾಡುವರು. ಕುರಿ, ಕೋಳಿ, ಮೀನು ಇತ್ಯಾದಿ. ಜೊತೆಗೆ ತಮ್ಮ ಸಂಬಂಧಿಕರೆಲ್ಲರೂ ಈ ಹಬ್ಬದಲ್ಲಿ ಭಾಗವಹಿಸುವುದು ವಾಡಿಕೆಯಾಗಿದೆ. ಅಂದು ಮನೆಯಲ್ಲಿ ಇಲ್ಲವೇ ಹೊಲದಲ್ಲಿಯೇ ಎಲ್ಲರೂ ಸೇರಿ ಊಟ ಮಾಡುವರು. ಹಾಗೆಯೇ ಗಂಡಸರು, ಹೆಂಗಸರು ಎಲ್ಲರೂ ಸೇರಿ ಸಾರಾಯಿ ಕುಡಿದು, ಕುಣಿದು ಸಂತೋಷ ಪಡುವರು. ಜೊತೆಗೆ ಮನರಂಜನೆಯ ಕಾರ್ಯಕ್ರಮಗಳನ್ನು ಮಾಡುವರು. ಇತ್ತೀಚಿಗೆ ಸ್ತ್ರೀಯು ಕುಡಿಯುವುದು ಅಷ್ಟಾಗಿ ಕಂಡುಬರುವುದಿಲ್ಲ. ಹಬ್ಬದ ಎರಡು ದಿನದ ನಂತರ ಒಕ್ಕಲು ಪದ್ಧತಿ ಪ್ರಾರಂಭ ಮಾಡುವರು. ಒಕ್ಕಲು ಪದ್ಧತಿಯಲ್ಲಿ ಮೂರು ರೀತಿಯಲ್ಲಿರುವುದು ಕಂಡುಬರುತ್ತದೆ.

೧. ದ್ಯಾವಣಿ

೨. ಸೆಳೆಯುವುದು

೩. ರೋಣ್‌ಗಲ್

**೧. ದ್ಯಾವಣಿ ಪದ್ಧತಿ:** "ನಾರಿನ ಹಗ್ಗಕ್ಕೆ ಕಬ್ಬಿಣದ ವೃತ್ತದ ಸರಳು ಹಾಕಿ ಹಲಸದ ಮರದ ಬೇರಿನ ಕೊಟ್ಟಿಗೆ ದೀಪದ ಗುಡ್ಡದ ತರಹ ದಾವಣೆಯನ್ನು ಸೇರಿಸಿ ಹಗ್ಗವನ್ನು ಜೋಡಿಸಲಾಗುತ್ತದೆ." "ದ್ಯಾವಣಿ

ಪದ್ಧತಿ ಎಂದರೆ ಕಣದ ಸುತ್ತಲು ದುಂಡಾಗಿ ಮಾಡಿ ಅದರ ಮಧ್ಯ ಒಂದು ಮೇಟಿಯನ್ನು ನೆಟ್ಟು (೧ರಿಂದ ೧೦ಎತ್ತುಗಳನ್ನು) ದಾವಣಿ ಹಗ್ಗಕ್ಕೆ ಕಟ್ಟಿ ಹುಲ್ಲನ್ನು ತುಳಿಸುವರು. ಇದೇ ದಾವಣಿ ಪದ್ಧತಿ''

ಒಕ್ಕಲು ಪದ್ಧತಿಯಲ್ಲಿ ಈ ದಾವಣಿ ಪದ್ಧತಿಯು ಹೆಚ್ಚು ಪ್ರಮುಖವಾಗಿರುವುದನ್ನು ಕಾಣಬಹುದಾಗಿದೆ. ಇದರಿಂದ ಸಾಂಪ್ರದಾಯಿಕವಾಗಿ ರೂಢಿಸಿಕೊಂಡು ಬಂದ ಕೃಷಿ ಪರಂಪರೆಯನ್ನು ಪ್ರತಿಬಿಂಬಿಸಬಹುದಾಗಿದೆ.

೨. **ಸೆಳೆಯುವುದು:** ''ಭತ್ತವನ್ನು ಸಿವುಡು ಸಿವಡಾಗಿ ಕಟ್ಟಿ ಒಂದು ಮರದ ತುಂಡು ಅಥವಾ ಬೆಂಚು ಇಟ್ಟು ಅದರ ಮೇಲೆ ಬಡಿದು ಕಾಳನ್ನು ಹೊರತೆಗೆಯುವುದು ಈ ಒಂದು ಪದ್ಧತಿಗೆ ಸೆಳೆಯುವುದು ಎನ್ನುವರು.'' ಸೆಳೆಯುವ ಪದ್ಧತಿ ಇತ್ತೀಚಿಗೆ ಅಷ್ಟಾಗಿ ಕಂಡುಬರುವುದಿಲ್ಲ.

೩. **ರೋಣಗಲ್:** ''ರೋಣಗಲ್ ಹೊಡೆಯುವ ಪದ್ಧತಿಯಲ್ಲಿ ಕಣದ ತುಂಬ ಭತ್ತದ ಹುಲ್ಲನ್ನು ಹರಡಿ ಒಣಗಿದ ಕಣದ ಮೇಲೆ ಕೋಣ ಅಥವಾ ಎತ್ತುಗಳಿಂದ ರೋಣಗಲ್ ಎಳೆಸುತ್ತಾರೆ. ಒಂದು ಮೈ ಅರೆದ ಮೇಲೆ ಕಣವನ್ನುಸಂಪೂರ್ಣವಾಗಿ ಮುಗುಚಿ ಹಾಕಿ ಮತ್ತೆ ಹೊಡೆಯುತ್ತಾರೆ. ಮೆರೆಕೋಲಿನಿಂದ ಹುಲ್ಲನ್ನು ತೆಗೆದು ಬಿದಿರು ಹಿಡಿ, ಕಾರೆ ಕಡ್ಡೆಬದಲಿನಿಂದ ಗುಡುಸಿ ಸ್ವಚ್ಛಮಾಡಿ ಭತ್ತವನ್ನು ಒಂದುಗೂಡಿಸುತ್ತಾರೆ. ಇದು ರೋಣಗಲ್ ವಿಧಾನ.''

**ಒಕ್ಕಲು ಪದ್ಧತಿ:**

ಕೊಯ್ಲಿನ ಕಾಲದಲ್ಲಿ ಮಳೆ ಬಂದರೆ ತೆನೆ ಭತ್ತವನ್ನು ಸಿವುಡು ಸಿವುಡಾಗಿ ಕಟ್ಟಿ ಒಂದು ಮರದ ತುಂಡು ಅಥವಾ ಬೆಂಚು ಇಟ್ಟು ಅದರ ಮೇಲೆ ಬಡಿದು ಕಾಳನ್ನು ಹೊರತೆಗೆಯುತ್ತಾರೆ. ನಂತರ ಒಕ್ಕಣೆಯನ್ನು ಆರಂಭಿಸುವ ಕೆಲಸ ಶುರುವಾಗುತ್ತದೆ. ಇಲ್ಲಿ ಪ್ರಮುಖವಾಗಿ 'ಕಣದ ಸಿದ್ಧತೆ' ಆರಂಭವಾಗುತ್ತದೆ.

**ಕಣ:** ದೀವರು ಕಣ ಮಾಡಲು ಸೂಕ್ತವಾದ ಸ್ಥಳವನ್ನು ಆಯ್ಕೆಮಾಡಿಕೊಳ್ಳುತ್ತಾರೆ. ಮನೆಯ ಹಿತ್ತಲಿನಲ್ಲಿ ಆಗಿರಬಹುದು ಇಲ್ಲವೆ ಹೊಲದಲ್ಲಿ ಆಗಿರಬಹುದು. ದೀವರು ಸಾಮಾನ್ಯವಾಗಿ ಹೊಲದಲ್ಲಿಯೇ ಕಣವನ್ನು ಸಿದ್ಧಮಾಡಿಕೊಳ್ಳುತ್ತಾರೆ. ಹೊಲದಲ್ಲಿರುವ ಭತ್ತದ ಕುಳಿಯನ್ನು ತೆಗೆದು ವ್ಯವಸ್ಥಿತವಾಗಿ ಸಗಣೆಯಿಂದ ಸಾರಿಸಿ ಒಂದು ದಿನ ಸಂಪೂರ್ಣವಾಗಿ ಒಣಗಿದ (ನಂತರ ಗೊಣಬೆಯ ಹುಲ್ಲನ್ನು ತೆಗೆದು) ಕಣಕ್ಕೆ ಹಾಕುವರು. ಕಣದ ಮಧ್ಯ ಒಂದು ಉದ್ದವಾದ ಕೋಲು ಇಲ್ಲವೆ ಹಾರೆಯನ್ನು ನೆಟ್ಟು (ಮೇಟಿ) ಅದಕ್ಕೆ ದ್ಯಾವಣಿಯನ್ನು ಹಾಕಿ ದ್ಯಾವಣಿ ಹಗ್ಗಕ್ಕೆ ಮೇಟಿಸುತ್ತ ಒಂದ ರಿಂದ ಏಳು ಎತ್ತುಗಳನ್ನು ಕಟ್ಟಿ ಹುಲ್ಲನ್ನು ತುಳಿಸುವರು. ಮೆರೆಕೋಲಿನಿಂದ ಕೆಲದು (ಬಗೆದು) ಎತ್ತಿಹಾಕುತ್ತಾರೆ. ನಂತರ ಹುಲ್ಲು ತೆಗೆದು ಪಕ್ಕಕ್ಕೆ ಹಾಕಿಕೊಂಡು ಮುಳ್ಳು, ಹಿಡಿಯಿಂದ ನಯವಾಗಿಸಿಕೊಳ್ಳುತ್ತಾರೆ.

ಮತ್ತೆ ಹುಲ್ಲನ್ನು ಭತ್ತದ ಮೇಲೆ ಹಾಕುತ್ತಾರೆ. ಎತ್ತು ಕಟ್ಟಿ ತುಳಿಸುತ್ತಾರೆ. ಎತ್ತು ಬಿಟ್ಟು ಸ್ವಲ್ಪ ಹುಲ್ಲನ್ನು ತೆಗೆದುಕೊಂಡು ಎತ್ತಿನ ಮೇಲೆ ಹೊಡೆದು (ಹುರುಸಲು ಹೊಡೆಯುವುದು) ಆ ಹುಲ್ಲನ್ನು ಗೊಣಬೆಗೆ ಸಿಕ್ಕಿಸುತ್ತಾರೆ. ನಂತರ ಹುಲ್ಲನ್ನು ಅಂತಿಮದಲ್ಲಿ ಕುತ್ತರಿ ಬುಡಕ್ಕೆ (ಗೊಣಬೆ ಅಂಡಿಗೆ) ಇಟ್ಟು ಎಲ್ಲಾ ಒಕ್ಕಲು ಮುಗಿದಾದ ಮೇಲೆ ಜಡೆ ಹೆಣೆದಂತೆ ಹೆಣೆಯುತ್ತಾರೆ.

ಎತ್ತಿನಿಂದ ಹುಲ್ಲು ತುಳಿಸಿಯಾದ ಮೇಲೆ ರಾತ್ರಿ ಹುಲ್ಲು ಕಟ್ಟತೊಡಗುತ್ತಾರೆ. (ಎತ್ತು ಬಿಟ್ಟು ಸ್ವಲ್ಪ ಹುಲ್ಲನ್ನು ತೆಗೆದುಕೊಂಡು) ಒಬ್ಬರು ಮೆರೆಕೋಲಿನಿಂದ ತೆಗೆದರೆ ಇನ್ನೊಬ್ಬರು ಕೊಡುವುದನ್ನು ಮಾಡುತ್ತಾರೆ. ಉಳಿದವರು ಸಿವುಡು ಕಟ್ಟುವುದು ಮಾಡುತ್ತಾರೆ. ಕಟ್ಟಿದ ಹುಲ್ಲನ್ನು ಸ್ವಚ್ಛ ಮಾಡಿ ರಾಶಿಮಾಡುತ್ತಾರೆ. ಈ ರೀತಿ

ಮೊದಲು ತೆಗೆದ ಭತ್ತವನ್ನು 'ಹೆಂಡಭತ್ತ' ಎನ್ನುತ್ತಾರೆ. ಅದನ್ನು ತೂರಿಕಟ್ಟಿ ಊಟಕ್ಕೆ ಬಳಸುತ್ತಾರೆ. ನಂತರ ಭತ್ತ ತೂರುವ ಕಾರ್ಯ ಆರಂಭವಾಗುತ್ತದೆ.

ಹಾಗೆಯೇ ತೂರುವ ಪದ್ಧತಿಯಲ್ಲಿ ಎರಡು ರೀತಿ ಕಾಣಬಹುದು.

೧. ತೂರುವ ಪದ್ಧತಿ: "ಭತ್ತವನ್ನು ಗಾಳಿಗೆ ತೂರುವ ಪದ್ಧತಿ"

೨. ಬೀಸುವ ಪದ್ಧತಿ: "ಗಾಳಿಯು ಬಾರದೇ ಇರದ ಸಮಯದಲ್ಲಿ ರಾಶಿಯ ವೇಳೆಯಲ್ಲಿ ತೂರುವ ಮರವನ್ನು ತೆಗೆದುಕೊಂಡು ಸುಮಾರು ೮ರಿಂದ ೧೦ಮಂದಿ ಚನ್ನಾಗಿ ಬೀಸುವರು. ಇಲ್ಲಿ ಮೊದಲಿಗೆ ಸಣ್ಣಕಲ್ಲು ನಿಲ್ಲುವುದು. ಮಧ್ಯದಲ್ಲಿ ಭತ್ತ ನಿಲ್ಲುವುದು. ಕೊನಗೆ ಜೊಳ್ಳು ಮತ್ತು ಹೊಟ್ಟು ಬರುವುದು ನಂತರ ಶುದ್ಧ ಭತ್ತವನ್ನು ಬೇರ್ಪಡಿಸಿ ತೆಗೆಯುವರು. ಇದನ್ನೇ ಬೀಸುವ ಪದ್ಧತಿ ಎಂದು ಕರೆಯುವರು."

**ರಾಶಿಯ ವೈಶಿಷ್ಟ್ಯತೆ :ಕಣದ ಹಬ್ಬ**

ಭತ್ತವನ್ನು ಸಂಪೂರ್ಣವಾಗಿ ತೂರಿ ತೆಗೆದ ನಂತರ ಭತ್ತದ ರಾಶಿಯನ್ನು ಮಾಡುವರು. ರಾಶಿಯನ್ನು ದುಂಡಗೆ ಮಾಡಲು ಗೊರೆಮಣೆ ಕೈಯಲ್ಲಿ ಹಿಡಿದುಕೊಂಡು ಬಲಗೈಯಲ್ಲಿ ಒಂದು ಮುಷ್ಠಿಭತ್ತ ಹಿಡಿದುಕೊಂಡು ಪಕ್ಕದಲ್ಲಿ ಬಿಡುತ್ತಾ ಬರುತ್ತಾರೆ. ಇದನ್ನು ರಾಶಿಕಟ್ಟುವುದು ಎನ್ನುವರು.

ಭತ್ತವನ್ನು 'ಮೇಟಿ'ಗೆ ಬುಡಕ್ಕೆ ದುಂಡಗೆ ಮಾಡುತ್ತಾರೆ. ನಂತರ ಅದೇ ಭತ್ತವನ್ನು ಮೆರೆಕೋಲಿನಿಂದ ಏಣಿಮಾಡುತ್ತಾರೆ. ಬಿಳಿಹುಲ್ಲನ್ನು ಸುಟ್ಟು ಭತ್ತ ಸೇರಿಸಿ ಚಂದ್ರ, ಹೂವು, ಏಣಿ ಬಿಡಿಸುತ್ತಾರೆ. ಮುತ್ತಲಹೂವು, (ಕಾಯಿ) ಕಡ್ಡಿ, ಕರ್ಪೂರ, ಕಾಯಿಹೊಡೆದು ಪೂಜೆ ಮಾಡುತ್ತಾರೆ. ಅರಳು, ಚಪ್ಪೆರೊಟ್ಟಿ ತರುತ್ತಾರೆ. ಅರಳನ್ನು ಬೀರಿದ ಮೇಲೆ ಚಪ್ಪೆರೊಟ್ಟಿಯ ಪನಿವಾರ ಮಾಡಿ ಹಂಚುತ್ತಾರೆ. ನಂತರ ಭತ್ತವನ್ನು ಚೀಲದಲ್ಲಿ ತುಂಬಿ ಗಾಡಿಗೆ ಹೇರುತ್ತಾರೆ. ಮನೆಬಾಗಿಲಿಗೆ ಬಂದಾಗ ಎತ್ತಿನ ಕೊಳ್ಳು ಹರಿಯುವ ಮೊದಲು ಕಳಸ ಹಾಗೂ ಬ್ಯಾನಪ್ಪನನ್ನು ತಂದು ಪೂಜೆ ಮಾಡಿ ಬಲಗಡೆಯ ಹಳಿಗೆ (ಗಾಲಿಗೆ) ಹೊಡೆದು ಪೂಜೆ ಮಾಡುತ್ತಾರೆ. ನಂತರ ಎಲ್ಲರಿಗೂ ಪನಿವಾರ ಹಂಚಿ ಎತ್ತಿನ ಕೊರಳು ಬಿಡುತ್ತಾರೆ. ಕೊನೆದಿನ 'ತೆಳನಿರಗು' (ಗೊಣಬೆಯ ಕೆಳಗಿನ ಭಾಗದ ಹುಲ್ಲನ್ನು ಒಕ್ಕಲು ಹಾಕುವುದು) ಹಾಕುತ್ತಾರೆ.

ಅವತ್ತಿನ ದಿನ ಆಮ್ರ ಕಾರದೂಟ ಕೊಟ್ಟು ಬ್ಯಾನಪ್ಪನಿಗೆ ಅರಳು ಹಾಕಿ ಎತ್ತುಗಳಿಗೆ ತಿನ್ನಲು ಕೊಟ್ಟು ಎಲ್ಲರಿಗೂ ಹಂಚುತ್ತಾರೆ. ಅಂತಿಮದಲ್ಲಿ ಗಂಡಸರು ಗಟ್ಟಿಯಾಗಿ ಕೇಕೆ ಹೊಡೆಯುತ್ತಾರೆ. ಇತ್ತೀಚೆಗೆ ರೋಣ್‌ಗಲ್ ವಿಧಾನವು ಜಾಸ್ತಿಯಾಗಿದೆ. ರೋಣ್‌ಗಲ್ ಹೊಡೆಯುವಾಗ ಕಣವನ್ನು ಸಿದ್ಧಮಾಡಿಕೊಂಡು, ಕಣದ ತುಂಬ ಹುಲ್ಲನ್ನು ಹರಡಿ ಒಣಗಿದ ಕಣದ ಮೇಲೆ ಕೋಣ ಅಥವಾ ಎತ್ತುಗಳಿಂದ ರೋಣ್‌ಗಲ್ ತುಳಿಸುತ್ತಾರೆ.

ಒಂದು ಮೈ ಅರೆದ ಮೇಲೆ ಕೆವಿಯನ್ನು ಸಂಪೂರ್ಣವಾಗಿ ಮುಗುಚಿ ಹಾಕಿ ಮತ್ತೆ ತುಳಿಸುತ್ತಾರೆ. ಮೆರೆಕೋಲಿನಿಂದ ಹುಲ್ಲನ್ನು ತೆಗೆದು ಬಿದಿರು ಹಿಡಿ ಕಾರಕಡ್ಡೆ ಬರಲಿನಿಂದ ಗುಡಿಸಿ ಸ್ವಚ್ಛಮಾಡಿ ಭತ್ತವನ್ನು ಒಂದುಗೂಡಿಸುತ್ತಾರೆ. ಇದು ರೋಣ್‌ಗಲ್ ವಿಧಾನ.

**ಕಣದಹಬ್ಬ:** ಭತ್ತದ ರಾಶಿಯನ್ನು ಮಾಡಿದ ನಂತರ ಈ ಹಬ್ಬವನ್ನು ಆಚರಿಸುವರು. ಇಲ್ಲಿ ರಾಶಿಗೆ ವ್ಯವಸ್ಥಿತವಾಗಿ ಸಾಂಪ್ರದಾಯಿಕ ನಿಯಮಗಳ ಮೂಲಕ ವಿವಿಧ ರೀತಿಯ ಹೂಗಳನ್ನು ತಂದು ಅದರಲ್ಲಿ ಪ್ರಮುಖವಾಗಿ ಮುತ್ತಗದ ಹೂ ಮತ್ತು ಬಿಳಿಹುಲ್ಲನ್ನು ಭತ್ತಕ್ಕೆ ಬೆರೆಸಿ ಕರಿಮಾಡಿ ಚಿತ್ತಾರ ಮಾಡಿ ಪೂಜಿಸುವರು. ಈ ಹಬ್ಬದಲ್ಲಿ ಬಂಧುಗಳನ್ನು ಕರೆಸುವರು. ಹಾಗೆಯೇ ಎಲ್ಲಾ ಬಂಧುಗಳನ್ನು ಸೇರಿಸಿ ಹಬ್ಬವನ್ನು ಆಚರಿಸುವರು.

ಇಲ್ಲಿ ಮಾಂಸಹಾರಿ ಪದಾರ್ಥಗಳನ್ನೇ ಯಥೇಚ್ಛವಾಗಿ ಮಾಡುವರು. ಕುರಿ, ಕೋಳಿ, ಮೀನು ಇತ್ಯಾದಿ ಹಾಗೆಯೇ ಸಿಹಿ -ತಿಂಡಿಗಳನ್ನು ಮಾಡುವರು ಇಲ್ಲಿ ವಿಶೇಷವಾಗಿ ಬಾಳೆಎಲೆಯಲ್ಲಿ ಅಕ್ಕಿಯನ್ನು ಒಂದು ವಾರ ನೀರಿನಲ್ಲಿ ಬೇಯಿಸಿ ಅಕ್ಕಿಹಿಟ್ಟಿನಿಂದ ಕೊಟ್ಟೆಕಡುಬನ್ನು ಮಾಡುವರು. ನಂತರ ಭತ್ತದ ರಾಶಿಯನ್ನು ತುಂಬಿಕೊಂಡು ಮನೆಗೆ ಬರುವರು. ಅಲ್ಲಿಯು ಕೂಡಾ ದೀಪಹಾಕಿ ಗಾಡಿಯ ಬಲಗಾಲಿಗೆ ಕಾಯಿ ಹೊಡೆದು ಪೂಜೆ ಮಾಡುವರು. ನಂತರ ಭತ್ತವನ್ನು ಮನೆಯ ಒಳಗೆ ಒಯ್ಯುವರು. ನಂತರ ಎಲ್ಲರೂ ಸೇರಿ ಊಟ ಮಾಡುವರು. ಇದು ದೀವರು ರೂಢಿಸಿಕೊಂಡು ಬಂದ ಕೃಷಿ ಆಚರಣೆಯಾಗಿದೆ. ಇದರಿಂದ ಕೃಷಿಯ ಪರಂಪರೆಯನ್ನು ಬುಡಕಟ್ಟು ಕೃಷಿಕ, ಆವಂತರಿಸಿಕೊಂಡು ಬಂದಿರುವಂತದ್ದನ್ನು ನಾವು ಕ್ಷೇತ್ರಕಾರ್ಯದ ಮೂಲಕ ನೋಡಬಹುದು.

**ಧಾನ್ಯಸಂರಕ್ಷಣೆಯ ಸಾಧನಗಳು:**

ತುಂಬುವ ಸಾಧನಗಳು: ಪಟ್ಟುಜಾಕೃತಿಯಲ್ಲಿ ಮರದ ಹಲಗಗಳಿಂದ ಮಾಡಲ್ಪಟ್ಟ ಭತ್ತ ತುಂಬುವ ಸಾಧನ. ನಾಲ್ಕು ಕಾಲುಗಳ ಮೇಲೆ ನಿಂತಿರುವ ಇದಕ್ಕೆ ಮೇಲುಗಡೆ ಚೌಕಾಕಾರದ ಒಂದು ರಂಧ್ರವನ್ನು ಬಿಟ್ಟಿರುತ್ತಾರೆ. ಪಣತದ ಬಾಯಿಗೆ ಹಲಗೆಯ ಬಾಗಿಲುಗಳಿಂದ ಮುಚ್ಚಿರುತ್ತಾರೆ. ಭತ್ತವನ್ನು ತೆಗೆಯಲು ಕೆಳಗಡೆ ಚೌಕಾಕಾರದ ಸಣ್ಣಜಾಗ ಬಿಟ್ಟಿರುತ್ತಾರೆ. ವೃತ್ತಾಕಾರದ ಪಳತಗಳು ಪೂರ್ತಿಮಣ್ಣಿನಿಂದ ಮಾಡಲ್ಪಟ್ಟಿರುತ್ತವೆ. ಸುಂದರವಾದ ಕಟ್ಟೆಯನ್ನು ಹೊಂದಿದ್ದು ತೆಂಗಿನ ಸಿಪ್ಪೆಯನ್ನು ಸುಟ್ಟು ಅದರ ಕರಿಗೆ ಸಗಣಿಯನ್ನು ಸೇರಿಸಿ ಪೂರ್ತಿ ಬಳಿದಿರುತ್ತಾರೆ. ಅದಕ್ಕೆ ಜೇಡಿ ಕೆಮ್ಮಣ್ಣು ಮಾಡಿರುತ್ತಾರೆ.

**ಹಗೇವು:** ಕಳ್ಳರು ಮತ್ತು ಲೂಟಿಕೋರರ ಭಯ ಇದ್ದ ಕಾಲದಲ್ಲಿ ಮನೆಯಿಂದ ಸ್ವಲ್ಪ ದೂರದ ನೆಲದಲ್ಲಿ ಗದ್ದು ತೆಗೆದು ಗಾದೆ ಮಾಡಿ ಪೂರ್ತಿ ಮುಚ್ಚಿಡುತ್ತಿದ್ದರು. ಹತ್ತು ಅಡಿ ಆಳ ಐದು ಅಡಿ ವ್ಯಾಸವುಳ್ಳ ಎರಡು ಅಡಿ ಬಾಯಿಟ್ಟು ಹಗೇವು ನಿರ್ಮಿಸಿರುತ್ತಾರೆ. ಒಂದೊಂದು ದೊಡ್ಡ ಹಗೇವು ಕೂಡಾ ಇರುತ್ತದೆ.

**ಗೂಡು:** ಸಿಲಿಂಡಿರಾಕೃತಿಯ ಬಿದಿರಿನಿಂದ ಹೆಣೆಯಲ್ಪಟ್ಟ ತಟ್ಟೆಯಂತಹ ಸಾಧನ. ಸಗಣಿಯಿಂದ ದಪ್ಪಗೆ ಬಳಿದು ಬೀಜದ ಭತ್ತ ತುಂಬುತ್ತಾರೆ. ಒಂದು ಅಡಿ ವ್ಯಾಸದ ಬಾಯಿರುತ್ತದೆ. ಇದಕ್ಕೆ ಬಿದುರಿನ ಮುಚ್ಚಳ ಮುಚ್ಚಿ ಮಣ್ಣು ಮೆತ್ತಿರುತ್ತಾರೆ.

**ರಾಜಣಿಗೆ:** ಗೂಡಿನಾಕರದ ಮಣ್ಣಿನ ಭತ್ತ ತುಂಬುವ ಸಾಧನ.

**ಕಣಜ:** ಐದು ಅಡಿ ಅಗಲದ ಹನ್ನೆರಡು ಉದ್ದದ ಆಯತಾಕಾರದ ಬಿದಿರಿನಿಂದ ಹೆಣೆಯಲ್ಪಟ್ಟ ತಟ್ಟೆ ಒಳಮೈ ಮತ್ತು ಹೊರಮೈಗೆ ಸಗಣಿಯನ್ನು ಲೇಪಿಸಿ ಕೊಳೆವೆಯಾಕಾರದಲ್ಲಿ ಸುತ್ತಿ ನೆಲದ ಮೇಲೆ ನಿಲ್ಲಿಸುತ್ತಾರೆ. ನೆಲದ ಮೇಲೆ ಭತ್ತದ ಹೊಟ್ಟನ್ನು ಹರವಿ ಅದರ ಮೇಲೆ ಬಿಳಿಹುಲ್ಲನ್ನು ಹಾಸಿ ಭತ್ತ ತುಂಬಿಸುತ್ತಾರೆ. ಭತ್ತ ತುಂಬಿದ ಮೇಲೆ ಲಕ್ಕಿಸೊಪ್ಪನ್ನು ಹಾಕುತ್ತಾರೆ.

**ಹರಬಿ:** ಮಣ್ಣಿನ ಹಂಡೆಯಾಕಾರಾದ್ದು, ಭತ್ತ ತುಂಬಲು ಬಳಸುತ್ತಾರೆ.

**ಕೊಡ:** ಕೊಡದಲ್ಲಿ ಬೀಜದ ಭತ್ತ, ಬೆಲ್ಲ ಅಥವಾ ಹೆಸರುಕಾಳು, ಮಡಕೆಕಾಳನ್ನು ತುಂಬಿ ಬಾಯಿಗೆ ಗಲ್ಪೆ (ಕರಟ) ಇಟ್ಟು ಮಣ್ಣನ್ನು ಮೆತ್ತುತ್ತಾರೆ.

**ಜಟ್ಟ:** ಬಿದಿರಿನ ಮತ್ತು ಬೆತ್ತವನ್ನು ಸೀಳಿಕೊಂಡು ಒಂದರ ಮೇಲೊಂದು ಬರುವಂತೆ ನಯವಾಗಿ

ಹೆಣದಿರುತ್ತಾರೆ.

**ಹೆಡಿಗೆ:** ಬೆತ್ತದಿಂದ ಹೆಣೆದ, ಗಾತ್ರದಲ್ಲಿ ತಟ್ಟೆಗಿಂತ ಹೆಚ್ಚು ಅಗಲವಿರುವ ದೊಡ್ಡದಾದ ಸಾಧನ. ಗೊಬ್ಬರ ಹೊರಲು ಬಳಸುತ್ತಾರೆ.

**ಮಣ್ಣುತಟ್ಟೆ:** ದಪ್ಪ ಬೆತ್ತವನ್ನು ಸಿಗಿದು ಮಾಡಲ್ಪಟ್ಟ ಸಾಧನ.

**ಕಕ್ಕೆ:** ಬಿದಿರಿನಿಂದ ಹೆಣದ ಸಾಧನ ಒಂದು ಕಡೆ ವೃತ್ತಾಕಾರದಲ್ಲಿ ಹೆಣೆಯಲ್ಪಟ್ಟ ಇನ್ನೊಂದು ಕಡೆ ಅಗಲವಾಗಿ ತೆರೆಯಲ್ಪಟ್ಟ ಮೇಲ್ಭಾಗದಲ್ಲಿ ಖಾಲಿಯಿರುವ ಹಾಗೂ ಸಗಣಿ ಲೇಪಿಸಿರುವ ಸಾಧನ. ಗೊಬ್ಬರ ಬೀಸಲು ಬಳಸುತ್ತಾರೆ.

**ಅಳೆಯುವ ಸಾಧನಗಳು**

೧. ಗಿದ್ನ ಮೂರು ಸೇರು ಹಿಡಿಯುವ ಸಾಧನ. ಇದರಲ್ಲಿ ಮೂರು ವಿಧಗಳಿವೆ.

೧. ಮರಗಿದ್ನ ಮರದಲ್ಲಿ ಕೆತ್ತಿ ತಾಮ್ರದ, ಹಿತ್ತಾಳಿಯ ಪಟ್ಟಿಹಾಕಿ ಆಕರ್ಷಕವನ್ನಾಗಿ ಮಾಡಿರುತ್ತಾರೆ.

೨. ಹಿತ್ತಾಳೆ ಗಿದ್ನ ಹಿತ್ತಾಳೆಯಲ್ಲಿ ಬಡಿದು ಸುಂದರವಾಗಿ ಮಾಡಿರುತ್ತಾರೆ.

೩. ಕಬ್ಬಿಣದ ಗಿದ್ನ ಕಬ್ಬಿಣದ ಗಿದ್ನಗಳು ಬಾರವಾಗಿದ್ದರೂ ಬಾಳಿಕೆ ಬರುತ್ತವೆ.

೨. ಸೇರು ಕಬ್ಬಿಣ ಅಥವಾ ಮರ ಹಿತ್ತಾಳೆಯಲ್ಲಿ ಮಾಡಿರುವ ಸಾಧನ. ಈಚಿನ ಒಂದು ಕಾಲು ಕೆ.ಜಿ.ಗೆ ಸಮ.

೩. ಜಟ್ಟಿಯ ಅರ್ಧಸೇರು, ಎರಡು ಪಾವು, ಪಾವು, ಚಟಾಕು ಈ ಸಾಧನಗಳಲ್ಲದೆ ಅಳೆಯಲು ಕೆಲವು ಮಾನಗಳನ್ನು ಬಳಸುತ್ತಾರೆ. ಮುಷ್ಟಿ, ಬೊಗಸೆ, ಮೊಳ, ಹೆಜ್ಜೆ, ಮೂರು, ಜೋಟು, ಗೇಣು, ಪಾಯಲಿ, ಕಿರಿಬೆರಳು, ಹೆಬ್ಬೆರಳು, ಫರ್ಲಾಂಗು, ಮೈಲು, ಹರದಾರಿ ಮುಂತಾದವು.

ಪಶುಪಾಲನೆ ಇತಿಹಾಸದ ಆರಂಭದ ಕಾಲದಿಂದಲೂ ಮಾನವ ಮತ್ತು ಪ್ರಾಣಿಗಳ ಸಂಬಂಧ ಒಂದಕ್ಕೊಂದು ಪೂರಕವಾಗಿಯೇ ರೂಪುಗೊಂಡು ಬಂದಿದೆ. ಮನುಷ್ಯ ಅಲೆಮಾರಿ ಜೀವನ ನಡೆಸುವಾಗಲೂ, ಪ್ರಾಣಿಗಳನ್ನು ಬೇಟೆಯಾಡಿ ಬದುಕು ಸಾಗಿಸುತ್ತಿದ್ದ ಕಾಲದಿಂದಲೂ ಮಾನವ ಪ್ರಾಣಿಗಳ ಜೊತೆ ಒಂದಿಲ್ಲೊಂದು ಬಗೆಯ ಸಂಬಂಧವಿರಿಸಿಕೊಂಡೆ ಬಂದಿದ್ದಾನೆ. ಮನುಷ್ಯನಿಗೆ ಬದುಕಿನ ಕಲ್ಪನೆ ಮೂಡಿದ್ದೇ ಪ್ರಾಣಿಗಳಿಂದ. ಬೆಳಕಿನ ಕಲ್ಪನೆಯನ್ನು ಪ್ರಾಣಿಗಳಿಂದಲೇ ಆತ ಪಡೆದುಕೊಂಡನು. ಅವನ ಸಾಹಸ, ಓಟ, ಜಿಗಿತ, ಅಬ್ಬರ, ಅಳುಕುಗಳಿಗೆ, ಚಪಲತೆ, ಠಕ್ಕತನಗಳಿಗೆ, ಸ್ನೇಹಕ್ಕೆ, ದ್ರೋಹಕ್ಕೆ ಪ್ರಾಣಿಗಳ ಸ್ವಭಾವ ಮತ್ತು ಶಕ್ತಿ, ಸಾಮರ್ಥ್ಯಗಳೇ ಪ್ರೇರಣೆ. ಈ ಹಿನ್ನೆಲೆಯಲ್ಲಿ ಮಾನವನ ಬದುಕಿನ ಜೊತೆ ಪ್ರಾಣಿಗಳು ಸಂಯೋಗಾತ್ಮಕ ಸಂಬಂಧ ಹೊಂದಿವೆ.

ಅಲೆಮಾರಿ ಬದುಕಿಗೆ ಶರಣು ಹೊಡೆದು ವ್ಯವಸಾಯವನ್ನು ಕಂಡು ಕೊಂಡ ಮೇಲೆ ಒಂದು ಕಡೆ ನೆಲೆ ನಿಂತು ವಾಸಿಸತೊಡಗಿದುದು ಮಾನವ ವಿಕಾಸದ ಹಂತದಲ್ಲಿ ಮಹತ್ವದ ಘಟ್ಟ. ಪ್ರಾಣಿ ಸಾಕಣೆಗೆ ಹೆಚ್ಚಿನ ಮಹತ್ವಬಂದುದು ಈ ಕಾಲದಲ್ಲಿ ಎಮ್ಮೆ, ಆಕಳಿನ ಹಾಲು ಉತ್ತಮ ಆಹಾರವೆಂಬುದನ್ನು ಕಂಡುಕೊಂಡ ಮೇಲೆ ಇಡಿಯಾಗಿ ಕುಟುಂಬಕ್ಕೆ ಅದರ ಅಗತ್ಯ ಉಂಟಾಯಿತು. ಮತ್ತೊಂದು ನೆಲೆಯಲ್ಲಿ ಕೋಣ ಮತ್ತು ಎತ್ತುಗಳನ್ನು ವ್ಯವಸಾಯದಲ್ಲಿ ಬಳಸಿಕೊಳ್ಳಲು ಸಾಧ್ಯವಾದಾಗ ದನಕರುಗಳ ಸಾಕಣೆಗೆ ಮಹತ್ವ ಬಂದಿತು. ಎಮ್ಮೆ, ಆಕಳಿನ ಹಾಲಿನಿಂದ ಮೊಸರು, ಬೆಣ್ಣೆ, ಮಜ್ಜಿಗೆಯಂಥ ಆಹಾರ ಪದಾರ್ಥಗಳು ತಯಾರಿಸುವುದು, ಮಾರುವುದು ಮುಂತಾದ ಜವಾಬ್ದಾರಿಯನ್ನು ಮಹಿಳೆ ವಹಿಸಿಕೊಂಡಳು. ಇದರಿಂದ ಉತ್ಪಾದನೆಯಲ್ಲಿ ಮಹಿಳೆಗೂ ಪಾಲು ದೊರಕುವಂತಾಯಿತು. ಕುಟುಂಬದಲ್ಲಿ ಅವಳ ಪ್ರತಿಷ್ಠೆಯನ್ನು ಹೆಚ್ಚಿಸಿತು.

ದೀವರ ಮಹಿಳೆಯು ದನಕರುಗಳ ಸಾಕಾಣಿಕೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುವಳು. ಪಶುಗಳ ಇಡೀ ಜವಾಬ್ದಾರಿಯನ್ನು ಸ್ತ್ರೀಯೇ ನಿಭಾಯಿಸುವುದನ್ನು ಕಾಣಬಹುದಾಗಿದೆ. ಅವರು ತಮ್ಮ ದಿನ ನಿತ್ಯದ ಬದುಕಿನ ಜೊತೆಗೆ ಜೀವನದ ಒಂದು ಭಾಗವಾಗಿರುವ ದನಗಳ ಸಂರಕ್ಷಣೆಯನ್ನು ತನ್ನ ಮಕ್ಕಳಿಗಿಂತ ಹೆಚ್ಚಿನ ರೀತಿಯಲ್ಲಿ ಪೋಷಿಸುವುದನ್ನು ಕಾಣಬಹುದು. ದನಗಳನ್ನು ಗೂಟದಿಂದ ಗೂಟಕ್ಕೆ ಕಟ್ಟುವುದು, ಸ್ನಾನ ಮಾಡಿಸುವುದು ಹೀಗೆ ಪ್ರತಿಯೊಂದು ಹಂತದಲ್ಲಿ ಸ್ತ್ರೀಯ ಪಾತ್ರ ಮುಖ್ಯವಾಗಿದೆ. ಒಟ್ಟಿನಲ್ಲಿ ದನಗಳ ಇಡೀ ಸಂರಕ್ಷಣೆ ಸ್ತ್ರೀಗೆ ಬಿಟ್ಟಿರುವುದು ಒಂದು ಸಂಗತಿಯಾಗಿದೆ. ದನಕರುಗಳ ಸಾಕಾಣಿಕೆ ರೈತಾಪಿ ಜೀವನಕ್ಕೆ ತುಂಬಾ ಸಹಕಾರಿ ಎನಿಸಿಕೊಂಡ ಮೇಲೆ ಈ ಸಂತತಿಯನ್ನು ಸಂಪಾದಿಸುವುದರಿಂದ ಕುಟುಂಬದ ಆರ್ಥಿಕತೆ ಗಣನೀಯವಾಗಿ ಸುಧಾರಿಸತೊಡಗಿತು. ಹಾಗೆಯೇ ದೀವರ ಸಮುದಾಯದಲ್ಲಿ ಪಶುಗಳ ಸಾಕಾಣೆಯಿಂದಲೆ, ತಮ್ಮ ಆರ್ಥಿಕ ಭದ್ರತೆಯನ್ನು ಸ್ವಲ್ಪಮಟ್ಟಿಗೆ ಕಂಡುಕೊಳ್ಳುವಲ್ಲಿ ಕಾರಣವಾಯಿತು. ಒಂದು ಪ್ರಮುಖವಾದ ಸಂಗತಿಯೆಂದರೆ ದೀವರ (ಹೆಣ್ಣು) ಸ್ತ್ರೀಯು ಪಶುಸಾಕಣೆಯನ್ನು ಮಾಡಿ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸಿರುವುದನ್ನು ಹಿಂದಿನಿಂದಲೂ ಮತ್ತು ಪ್ರಸ್ತುತ ದಿನದಿಂದಲೂ ಕಾಣಬಹುದಾಗಿದೆ. ಇದರಿಂದ ಪಶುಸಾಕಾಣಿಕೆ ತುಂಬಾ ಲಾಭದಾಯಕವಾಗಿ ಪರಿಣಮಿಸಿ,

ಸಮಾಜದಲ್ಲಿ ಪ್ರತಿಷ್ಠತೆಯನ್ನು ತಂದುಕೊಡಲು ದನಕರುಗಳು ಮಹತ್ವದ ಅಂಶಗಳಾದವು. ಇಡೀ ಮನೆತನದ ಸ್ಥಿತಿ ಎಂಬುದು ಆಯಾ ಕುಟುಂಬ ಹೊಂದಿರುವ ದನಕರುಗಳ ಸಂಖ್ಯೆಯನ್ನು ಅವಲಂಬಿಸಿತು. ಹೆಣ್ಣು ತರುವಾಗ ಕೊಡುವಾಗ ಮನೆತನದ ಸ್ಥಿತಿಯನ್ನು ಬೆಳೆದುಕೊಳ್ಳಲು ಮನೆಯಲ್ಲಿ ದನಕರುಗಳು ಎಷ್ಟು? ಎಷ್ಟೆತ್ತಿನ ಒಕ್ಕಲುತನ? ಇತ್ಯಾದಿ ಮಾತುಗಳನ್ನು ಬಳಸುವುದು ಒಂದು ಪದ್ಧತಿಯಾಗಿ ಪರಿಣಮಿಸಿತು.

**ದನಗಳನ್ನು ಕಾಯುವ ಪದ್ಧತಿ:**

ದನಗಳನ್ನು ಕಾಯಲು ಇಡೀ ಊರಿಗೆ ಅಂಕಿತಗೊಂಡ ಜನರಿದ್ದು ಅವರನ್ನು ದನಕಾಯುವರೆಂದೇ ಗುರುತಿಸಲಾಗುತ್ತದೆ. ಕೆಲವೊಂದು ಪ್ರಾಂತ್ಯದಲ್ಲಿ ವಿವಿಧ ರೀತಿಯಲ್ಲಿ ನಡೆಯುತ್ತದೆ. ಸಾಗರ ಪ್ರಾಂತ್ಯದಲ್ಲಿ ದನಗಾವಲಿಗೆ ಬೆಳಗ್ಗೆ ಮುಂಚೆ ಊರಿಗೆ ಒಬ್ಬನನ್ನು ನೇಮಿಸುವರು. ಅಂದಿನ ದಿನ ಅವರ ಸರಧಿ ಇರುತ್ತದೆ. ಅದರ ಪ್ರಕಾರ ಅವನು ಹೋಗಿ ಮೇಯಿಸಿಕೊಂಡು ಬರುವನು. ನಂತರ ದಿನಗಳಲ್ಲಿ ಬೇರೆಯ ಮನೆಯವರ ಸರಧಿ ಬರುತ್ತದೆ. ಅದರ ಪ್ರಕಾರ ಅವರು ಹೋಗಬೇಕಾಗುತ್ತದೆ. ಹಾಗೆ ದಿನ ನಿತ್ಯದ ಬದುಕಿನಲ್ಲಿ ಸರಧಿಯ ಪ್ರಕಾರವನ್ನೂ ದೀವರು ಕಂಡು ಕೊಂಡಿದ್ದಾರೆ. ಮಳೆಗಾಲದ ಮೂರು ತಿಂಗಳವರೆಗೂ ಮೇಯಿಸುವುದೇ ಆಗಿದೆ. ಹೆಚ್ಚು ದನಕರುಗಳನ್ನು ಹೊಂದಿದವರು ತಮ್ಮ ಕುಟುಂಬದಲ್ಲಿ ಒಬ್ಬರನ್ನು ದನಕಾಯುವುವಿಕೆಗಾಗಿ, ನಿಯಮಿಸುತ್ತಾರೆ.

**ದನಗಳ ಕಾಡಾಟ:** ಮಲೆನಾಡಿನ ದನಗಳು ಬಹಳ ಕಳ್ಳಚಾಳಿಯನ್ನು ರೂಢಿಸಿಕೊಂಡಿರುತ್ತವೆ. ಸುಮಾರು ಆರು ಅಡಿ ಹಾರಿ ಹೋಗಿ ಬೆಳೆಗಳು ಇದ್ದ ಹೊಲದಲ್ಲಿ ಮೇಯುತ್ತವೆ. ಹೀಗಿರುವುದರಿಂದ ದನಗಳಿಗೆ ಉದ್ದವಾದ ಗುದ್ದಿ ಮತ್ತು ಅಡ್ಡಗುದ್ದಿಯನ್ನು ಕಟ್ಟುವರು. ಹೀಗೆ ಕಟ್ಟುವುದರಿಂದ ದನಗಳು ಓಡಲು ಆಗದೆ ಹೆದರಿ ಹೊಲಕ್ಕೆ ಹೋಗುವುದನ್ನು ನಿಲ್ಲಿಸುತ್ತವೆ. ಹಾಗಾಗಿ ಈ ಉಪಾಯ ಕಂಡುಕೊಂಡಿದ್ದಾರೆ. ಇದು ಸಾಮಾನ್ಯವಾಗಿ ಎಲ್ಲಾ ರೈತರಲ್ಲಿ ಇರುವ ತಂತ್ರಾಂಶವಾಗಿದೆ.

**ದನಗಳನ್ನು ಮೇಯಿಸುವುದು:**

ದನಗಳನ್ನು ಮೇಯಿಸಲು ಅದರಲ್ಲಿಯೂ ವಿಶೇಷವಾಗಿ ಎತ್ತುಗಳನ್ನು ಮೇಯಿಸಲು ಮತ್ತು ಕಾವಲಾಗಿ 'ಬ್ಯಾಣ' ಇರುತ್ತದೆ. ಇದು ಎತ್ತನ್ನು ಮೇಯಿಸುವ ಜಾಗ. ಕುಷ್ಕಿ ಜಮೀನಿನಲ್ಲಿ ಕರಡ ಮೇವು ಬೆಳೆಸಿ ಎತ್ತುಗಳಿಗೆ ಮೇಯಿಸುವರು. ಹೀಗೆ ಮೇಯಿಸಲು ದೀವರಲ್ಲಿ ಕೆಲವರಿಗೆ ಕುಷ್ಕಿ ಭೂಮಿ ಇದೆ. ಮತ್ತೆ ಕೆಲವರಿಗೆ ಇಲ್ಲ. ಹಾಗಾಗಿ ಇವರು ಬೇರೆಯವರ ಭೂಮಿಯನ್ನು ಪಡೆದು ಅಲ್ಲಿ ತಮ್ಮ ದನಗಳನ್ನು ಮೇಯಿಸುವರು. "ದನಗಳ ಪಾಲನೆಯನ್ನು ಉತ್ತಮ ರೀತಿಯಿಂದ ಮಾಡಿದರೆ ಬಲಿಷ್ಠವಾಗುತ್ತವೆ. ಮತ್ತು ಪ್ರತಿಫಲವನ್ನು ಕೊಡುತ್ತವೆ."[೧]

**ದನಗಳ ವ್ಯಾಪಾರ:**

ದನಕರುಗಳು ಖಾಸಗಿ ಸಂಪತ್ತಾಗಿ ಪರಿಣಮಿಸಿದ ಮೇಲೆ ಅವುಗಳನ್ನು ಕೊಡುವ ಮತ್ತು ಕೊಳ್ಳುವ ವಹಿವಾಟು ಚಾಲ್ತಿಯಲ್ಲಿ ಬಂದಿತು. ದನದ ಪರೀಶೆ (ಜಾತ್ರೆ)ಗಳನ್ನು ನೆಡೆಸುವುದರ ಮೂಲಕ ಕೆಲವು ಸ್ಥಳಗಳು ದನಗಳ ವ್ಯಾಪಾರ ದೃಷ್ಟಿಯಿಂದ ತುಂಬಾ ಪ್ರಸಿದ್ಧಿಗೆ ಬಂದವು. ಹಾಸನ, ಶಿರಾಳಕೊಪ್ಪ, ಮಾಸೂರು (ಹಾಸನ) ಹಾವೇರಿ, ಎತ್ತುಗಳನ್ನು ಕೊಂಡು ತರುವಾಗ ವಿಶೇಷ ಎಚ್ಚರವಹಿಸಲಾಗುತ್ತಿತ್ತು. ಬೆನ್ನು, ಕೊಡು, ಹಲ್ಲಿನ ಮೂಲಕ ವಯಸ್ಸು ತಿಳಿಯುವುದು. ನಡುಗೆಯ ಮೂಲಕ ಸಾಮರ್ಥ್ಯ ಪರೀಕ್ಷಿಸುವುದು. ಸುಳಿ ಬಣ್ಣ ನೋಡುವುದು,

ಮುಖಸೋಡುವುದು, ಹೊರಗಾಲು ಒಳಗಾಲು, ಪಾದ ಮುಂತಾದ ಪ್ರಕ್ರಿಯೆಗಳಲ್ಲಿ ಕೊಂಡು ತರುವ ಎತ್ತುಗಳಿಗೆ ಸಂಬಂಧಿಸಿ ನಡೆಯುತ್ತಿದ್ದವು. ಬಂಡಿ (ಚಕ್ಕಡಿ) ಎಳೆಸುವುದರ ಮೂಲಕ ನಡಿಗೆ ಸಾಮರ್ಥ್ಯದ ಪರೀಕ್ಷೆ ನಡೆಯುತ್ತಿತ್ತು. ಒಮ್ಮೊಮ್ಮೆ ಚಕ್ಕಡಿಯನ್ನು ಉಸುಕಿನ ಹಾದಿಯಲ್ಲಿ ನಡೆಸುವುದು ಗಾಲಿ ತಿರುಗದಂತೆ ಸೊಗ ಅಪ್ಪಲಾಗಿಟ್ಟು ಚಕ್ಕಡಿ ಎಳೆಸುವ ಪ್ರಯತ್ನವನ್ನು ಮಾಡುತ್ತಿದ್ದರು. ಇಷ್ಟೆಲ್ಲ ಕಾಳಜಿ ವಹಿಸಲು ಮುಖ್ಯ ಕಾರಣವೇನೆಂದರೆ ಕೊಂಡು ತಂದ ಎತ್ತುಗಳು, ಮನೆಯನ್ನು ಬೆಳಸಬೇಕೆಂಬುದು ಜನಪದರ ಇಚ್ಛೆಯಾಗಿತ್ತು.

**ದನ ಕರುಗಳ ಸಲಕರಣೆಗಳು:**

ದನ ಕರುಗಳನ್ನು ತನ್ನ ಕುಟುಂಬದ ಭಾಗವಾಗಿಯೇ ಮಾನವ ಪರಿಗಣಿಸುವುದರಿಂದ ಅವುಗಳ ರಕ್ಷಣೆ, ಲಾಲನೆ, ಪಾಲನೆ ಮತ್ತು ಅವುಗಳ ಅಂದ -ಚೆಂದದ ಜವಾಬ್ದಾರಿ ಅವನದಾಯಿತು. ದನಗಳನ್ನು ಕಟ್ಟಲು, ಹಗ್ಗ ನಾರಿನ ಸಲಕರಣೆಗಳು ಉಕ್ಕೇದ ಹಗ್ಗ ಕಣ್ಣಿ ಮೂಗುದಾಣ, ಬಾರುಕೋಲು ದಂಡೆ, ಕೊಳ್ಳಂಗಡ ಬಾಯಿಕುಕ್ಕಿ ಜಾಲರಿ ಹಣೆಪಟ್ಟಿ, ಗೊಂಡೇವು, ಕೊರಳ ಸರ, ಹಣೆಗೆಜ್ಜೆ, ಕೋಡಿನ ಅಣಸು ಇತರೆ ಕೃಷಿ ಉಪಕರಣಗಳನ್ನು ತಯಾರಿಸುವುದು ಸಾಗರ ತಾಲೂಕಿನ ಯಲಕುಂದ್ಲಿಯಲ್ಲಿ ಕಾಣಬಹುದಾಗಿದೆ. ಮತ್ತು ಮಾರುವುದು ಮಾನವನ ಬದುಕಿನಲ್ಲಿ ಪ್ರಾಧಾನ್ಯತೆ ಪಡೆಯಿತು. ಇತ್ತೀಚಿಗೆ ದನಗಳ ಚರ್ಮದಿಂದ ಚಪ್ಪಲಿ, ಬೂಟುಗಳ ತಯಾರಿಕೆ, ಕೊಂಬುಗಳಿಂದ ಬಾಚಣಿಗೆ ಮತ್ತು ಇತರೆ ಅಲಂಕಾರಕ ವಸ್ತುಗಳ ತಯಾರಿಕೆಯಂತೂ ದೊಡ್ಡ ಉದ್ದಿಮೆಯಾಗಿ ಬೆಳೆದಿದೆ.

**ಸಾಂಸ್ಕೃತಿಕ ಮಹತ್ವ:**

ದನಕರುಗಳು ರೈತರ ಜೀವನದಲ್ಲಿ ಮಹತ್ವದ ಪಾತ್ರವಹಿಸುವುದರಿಂದ ಅವುಗಳ ಮಹತ್ವ ಹೆಚ್ಚು ಮಾನವ ಬದುಕಿನ ಜೊತೆ ಸಂಯೋಗಾತ್ಮಕ ಸಂಬಂಧ ಸ್ಥಾಪಿಸಿಕೊಂಡಿದೆ. ಹೊಲದ ಉಳುಮೆಗೆ ಸಹಾಯಕವಾಗಿರುವ ಎತ್ತು ನಂದಿಯಾಗಿ ಶಿವನ ವಾಹನವಾಯಿತು. ಆಕಳು ಗೋಮಾತೆಯಾಗಿ ಸ್ಥಾನ ಪಡೆಯಿತು. ದೊಡ್ಡಹಬ್ಬದಲ್ಲಿ 'ಗೋಪೂಜೆ'ಯ ಮಹತ್ವವನ್ನು ಸಾರಲೆಂದೇ ಉದ್ದಿಷ್ಟವಾಗಿದೆ.

ಹಾಗೆಯೆ ಕಾರಹುಣ್ಣಿಮೆ ಹಬ್ಬದಲ್ಲಿ ಕರಿ ಎಳೆಸುವಿಕೆ ಎತ್ತಿನ ಮಹತ್ವವನ್ನು ಸಾರಲೆಂದೇ ಉದ್ದಿಷ್ಟವಾಗಿದೆ. ಆ ಸಂದರ್ಭದಲ್ಲಿ ಎತ್ತಿನ ಕೋಡಿಗೆ ಬಣ್ಣ, ಹಣೆಗೆಜ್ಜೆ, ಜೂಲ ಹಾಕಿಸಿಕೊಂಡು ಸಿಂಗರಿಸಿ ಮೆರೆಸುವುದುಂಟು ಓಗಾಗಿ ಕರಿಹರಿಸುವಿಕೆಗೆ ಸಾಂಸ್ಕೃತಿಕವಾಗಿಯೂ ಮಹತ್ವವಿದೆ. ವೈರಿಗಳಿಂದ ಒಡೆಯನಿಗೆ ಅನ್ಯಾಯವಾಗುವಾಗ ವೈರಿಗಳನ್ನು ಹಿಮ್ಮೆಟ್ಟಿಸಿ ಹೋರಾಡಿ ಸಾಹಸ ಮೆರೆದ ಎಷ್ಟೋ ಎತ್ತುಗಳ ಕಥೆ ಜನಪದ ಕಥೆಗಳಲ್ಲಿ ಕಂಡುಬಂದಿದೆ.

**ಎತ್ತುಗಳ ಶೃಂಗಾರ**

ದೀಪರು ಕೃಷಿಗೆ ಸಂಬಂಧಿಸಿದ ಹಬ್ಬಗಳಲ್ಲಿ ಎತ್ತುಗಳನ್ನು ಮತ್ತು ಆಕಳನ್ನು ವಿಶೇಷವಾಗಿ ಪೂಜಿಸುವರು. ಹಾಗೆಯೆ ಅವುಗಳಿಗೆ ವಿಭಿನ್ನ ರೀತಿಯಲ್ಲಿ ಶೃಂಗರಿಸುವರು.

೧. ಕೋಡು ನುಣುಪು: ಕೋಡನ್ನು ಕೋಡು ಹೊಡೆಯುವನಿಂದ ಕೆತ್ತಿಸುವರು.

೨. ಕೋಡಿಗೆ ಬಣ್ಣ: ಕೋಡಿಗೆ ವಿವಿಧ ರೀತಿಯ ಬಣ್ಣ ಹಚ್ಚುವರು.

೩. ಕೋಡಿನ ಗೆಜ್ಜೆ ಮತ್ತು ರಿಬ್ಬನ್: ಕೋಡಿಗೆ ಹಾಕುವರು.

೪. ಮೂಗುದಾಣ: ಎತ್ತಿನ ಮೂಗಿಗೆ ಹಾಕುವುದು.

೫. ಕೊಳ್ಳ ಹಗಡ: ಎತ್ತಿನ ಕೊರಳಿಗೆ ಕಟ್ಟುವ ಹಗಡ.

೬. ಕೊಳ್ಳ ಹಗ್ಗ: ಎತ್ತಿನ ಕೊರಳಿಗೆ ಕಟ್ಟುವ ಹಗ್ಗ.

೭. ಗೆಜ್ಜೆ ಸರ: (ಲೊಡಗ) ಎತ್ತಿನ ಕೊರಳಿಗೆ ಹಾಕುವ ಸರ.

೮. ಎತ್ತಿನ ಜೂಲ: ಎತ್ತಿಗೆ ಹಬ್ಬಗಳಲ್ಲಿ ಹಾಕುವ ಶೃಂಗಾರದ ವಸ್ತ್ರ.

೯. ಗಲ್ಲುಹಾಕುವುದು: ಎತ್ತಿಗೆ ದೀಪಾವಳಿ ಅಮವಾಸೆ ದಿನ ಗಲ್ಲು ಹಾಕುವರು.

೧೦. ಕಾಲಗೆಜ್ಜೆಸರ: ಎತ್ತಿನ ಕಾಲಿಗೆ ಸಣ್ಣ ಗೆಜ್ಜೆಯ ಸರವನ್ನು ಹಾಕುವುದು.

೧೧. ಕಾಲದಂಡಿ: ಎತ್ತಿನ ಕಾಲಿಗೆ ಹಾಕುವ ಒಂದು ದುಂಡನಂತಹ ವಸ್ತ್ರ.

**ದೊಡ್ಡಹಬ್ಬ: (ದೀಪಾವಳಿ) ಪಶುಪಾಲನೆ ಹಾಗೂ ಕೃಷಿಯ ಸಮಾಗಮ**

ಮಲೆನಾಡಿನ ದೀವರ ಹಬ್ಬಗಳಲ್ಲಿ ಅತ್ಯಂತ ವಿಶಿಷ್ಟವಾದದ್ದು ಹಾಗೂ ರಂಜನೀಯವಾದದ್ದು ದೊಡ್ಡಹಬ್ಬ. ಹೆಸರೇ ಹೇಳುವಂತೆ ಐದಾರು ದಿನಗಳ ಕಾಲ ನೆಡೆಯುವ ಹಬ್ಬವೆಂದು ತಿಳಿಯಬಹುದಾಗಿದೆ. ಬೂರೆ ನೀರು ತರುವುದು, ನಂತರ ಚತುರ್ದಶಿ, ಹಿರೇರ ಹಬ್ಬ, ಗೋಪೂಜೆ, ವರ್ಷದ ತೊಡಕು ಈ ರೀತಿ ಐದಾರು ದಿನಗಳ ಕಾಲ ನೆಡೆಯುವುದರಿಂದ ಇದು ದೊಡ್ಡ ಹಬ್ಬವಾಗಿ ಪರಿಣಮಿಸಿದೆ. ಈ ಹಬ್ಬವು ಕೃಷಿ ಸಂಸ್ಕೃತಿಯ ರೂಪಕವಾಗಿ ಕಂಡರು ಆಳದಲ್ಲಿ ಬಲಿಚಕ್ರವರ್ತಿಯ ಆರಾಧನೆಯಾಗಿ ತೋರುವುದನ್ನು ಗಮನಿಸಬಹುದಾಗಿದೆ. ಹಿರಿಯ ಮಾನವಶಾಸ್ತ್ರಜ್ಞ ಎ.ಎಲ್. ಕ್ರೋಬರಂ ಅವರ ಪ್ರಕಾರ "ನವಶಿಲಾಯುಗದ ಪ್ರಮುಖ ಆವಿಷ್ಕಾರವೆಂದರೆ ವ್ಯವಸಾಯ ಮತ್ತು ಪಶುಪಾಲನೆ."[೨] ಸುಮಾರು ಹತ್ತುಸಾವಿರ ವರ್ಷಗಳ ಹಿಂದೆ ಸಂಶೋಧಿತಗೊಂಡ ವ್ಯವಸಾಯದಿಂದಾಗಿ "ಮಾನವ ಒಂದೆಡೆ ನೆಲೆನಿಂತು ಪ್ರಾಣಿಪಕ್ಷಿಗಳನ್ನು ಪಳಗಿಸಿಕೊಂಡ ಈ ಕ್ರಮದಿಂದಾಗಿ ಆತನಿಗೆ ಬಹಳಷ್ಟು ಸಮಯ ಲಭಿಸತೊಡಗಿತು. ಹಾಗಾಗಿಯೇ ಕೃಷಿಪರಿಕರಗಳ ಆವಿಷ್ಕಾರವಾಯಿತು."[೩] ಈ ರೀತಿ ಶೋಧಿತಗೊಂಡ ಕೃಷಿ, ಪಶುಪಾಲನೆ ಆಚರಣಾ ವಿಧಿಗಳಾಗಿ ಬಗಲಾಗುವುದಕ್ಕೆ, ಪೂಜೆಗೊಂಡದ್ದಕ್ಕೆ ಸಮುದಾಯವೊಂದು ತನ್ನ ದಿನನಿತ್ಯದ ಬದುಕಿನೊಂದಿಗೆ ಸೃಜಿಸಿಕೊಂಡ ಸಂಬಂಧವೆ ಕಾರಣ. ಅಂದರೆ ಉತ್ಪಾದನಾ-ವಿಧಿ-ವಿಧಾನಗಳು ಕೇವಲ ಹೊಟ್ಟೆ ಹೊರೆದುಕೊಳ್ಳುವ ಮಾಧ್ಯಮವೆಂದೆ ಅಲ್ಲ ಬದಲಿಗೆ ಆ ಜನರ ಬದುಕಿನಾಳಕ್ಕೆ ಇಳಿದ ಜೀವನ ಸಂಬಂಧಿ ಆಯಾಮ. ಆದುದರಿಂದಲೆ ಕೃಷಿ ಮತ್ತು ಪಶುಪಾಲನೆಯ ಒಂದೊಂದು ಘಟನೆಗಳು ಹಬ್ಬದ ರೂಪವನ್ನು ಪಡೆದುಕೊಳ್ಳುತ್ತವೆ. ಆಚರಣೆಯಾಗಿ ಬದಲಾಗುತ್ತವೆ. ಪರಿಣಾಮವಾಗಿ ಸಂಸ್ಕೃತಿಯ ಜೀವಂತ ಚಟುವಟಿಕೆಯಾಗಿರುತ್ತದೆ.

ಬಲಿ ಆರಾಧನೆ ದೊಡ್ಡ ಹಬ್ಬದ ಕೇಂದ್ರಿಯ ಬಿಂದು. ಎರಡು ಸಮುದಾಯಗಳ ನಡುವಿನ ಸಂಘರ್ಷವಾಗಿ ಈ ಹಬ್ಬ ನೆಲೆ ನಿಲ್ಲುತ್ತದೆ. ಬೇಟೆ ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಗೆ ಬದಲಾದ ಆದಿಮ ಸಮುದಾಯವೊಂದು ಗಣವ್ಯವಸ್ಥೆಯ ಆಡಳಿತ ಕ್ರಮಗಳನ್ನು ರೂಪಿಸಿಕೊಂಡಿತು. ಇದರ ಪ್ರತಿಫಲವಾಗಿ ರಾಜಸತ್ತೆ ಸೃಷ್ಠಿಯಾಯಿತು. ಅಂತಹ ರಾಜನೊಬ್ಬ ತನ್ನ ಸಮುದಾಯಕ್ಕೆ ಒಳಿತನ್ನು ಮಾಡುವುದು ಅನಿವಾರ್ಯ. ಏಕೆಂದರೆ ಸಮುದಾಯದ ಒಡಲಾಳದಿಂದ ಸೃಷ್ಠಿಗೊಂಡ ರಾಜಸತ್ತೆ ತನ್ನ ಸಮುದಾಯದ ಆಲೋಚನೆಗಳನ್ನು ಚಿಂತನೆಗಳನ್ನು ಗರ್ಭೀಕರಿಸಿಕೊಂಡಾಗ ಅನಿವಾರ್ಯವಾಗಿ ತನ್ನ ಸಮುದಾಯದತ್ತ ತುಡಿತ ಆರಂಭಿಸುತ್ತದೆ. ಹಾಗೂ ಸಮುದಾಯಕ್ಕಾಗಿ ಎಲ್ಲ ತ್ಯಾಗಗಳನ್ನು ಮಾಡಲು ಕಾರ್ಯೋನ್ಮುಖವಾಗುತ್ತಾನೆ. ಆದ್ದರಿಂದಲೇ ಈ ರೀತಿ ವರ್ಣಶ್ರಮವನ್ನು ಧಿಕ್ಕರಿಸಿ ಶ್ರಮಸಂಸ್ಕೃತಿಯ ತಾರತಮ್ಯವನ್ನು ಸೃಷ್ಠಿಸುವ ಅನಿವಾರ್ಯತೆ ಮತ್ತು ಅಗತ್ಯತೆ ಬಲಿಯದಾಗಿತ್ತು. ಬಲಿರಾಜ ಬಲೀಂದ್ರ ಪ್ರಹ್ಲಾದನ ಮಗನಾದ ವಿರೋಜ್‌ನನ ಮಗ, ಹೆಂಡತಿ ವಿಂಧ್ಯಾವಳಿ ತನ್ನ ಮುತ್ತಜ್ಜಿ ಹಿರಣ್ಯಕಶಿಪುವಿನ ಮೇಲಾದ

ದೌರ್ಜನ್ಯವನ್ನು ಹಾಗೂ ದೇವತೆಗಳ ಕುಟಿಲ ತಂತ್ರವನ್ನು ಅರ್ಥಮಾಡಿಕೊಂಡವನು. ತನ್ನ ಅಜ್ಜನ ಶರಣಾಗತಿಯ ಹಿಂದೆ ಅಡಗಿದ ವೈದಿಕರ ವ್ಯವಸ್ಥಿತ ಕುತಂತ್ರದ ದಾಳಿಯನ್ನು ಅರಿತುಕೊಂಡವನು. ವಿಶ್ರಮ ಬದುಕಿಗೆ ವರ್ಣವನ್ನು ಪಾಲಿಸುವ ಅಪಾರವಾಗಿ ಪ್ರಾಣಹಾನಿಗೆ ಕಾರಣವಾಗುತ್ತಿದ್ದ ಯಜ್ಞ-ಯಾಗಾದಿಗಳನ್ನು ತೊಡೆದುಹಾಕಿ ಕೃಷಿಗೆ ಹೆಚ್ಚು ಮಹತ್ವ ನೀಡಿದವನು. ತನ್ನ ಪೂರ್ವಜರಿಗೆ ಇಲ್ಲದ ಮುಂದಾಲೋಚನೆ ಹಾಗೂ ಆಡಳಿತ ನಿಷ್ಠತೆ ಬಲೀಂದ್ರನಿಗಿತ್ತು. ಆದ್ದರಿಂದಲೇ ಬಲಿ ದುರಂತನಾಯಕನಾಗಿ ಕಾಣಿಸಿಕೊಳ್ಳುತ್ತಾನೆ.

ಬಲಿಯನ್ನು ಬೆಂಬಲಿಸುವ ಸಮುದಾಯ ದೊಡ್ಡದಿರುವುದರಿಂದ ಅದನ್ನು ಸಮಾಧಾನ ಪಡಿಸಲೊಸಗ ಬಂಡಾಯವನ್ನು ಶಮನಗೊಳಿಸುವ ಕಾರಣಗಳಿಂದ ಬಲಿಯನ್ನು ದೇವತೆಯಾಗಿಸಿ, ಭೂಲೆಕಕ್ಕೆ ಮೂರುದಿನ ಕಳಿಸುವ ಪ್ರಯತ್ನ ನೆಡೆಯುತ್ತದೆ. ಈ ಕಳಿಸುವುದು ಕೂಡಾ ಉಪಾಕಾರ ಮಾಡಿದ ದಾಟಿಯಲ್ಲಿದೆ. ಒಟ್ಟು ಈ ಕಥಾನಕದಲ್ಲಿ ವೈದಿಕರ ಭದ್ರ ಪ್ರಪಂಚವನ್ನು ವಿಕಾರ ಹತ್ಯಾಕಾಂಡದಿಂದ ವಿಸ್ತರಿಸಿಕೊಳ್ಳುವ ಆಕ್ರಮಿತ ಮನೋಸ್ಥಿತಿ ಇದೆ. ಎಂಬುದು ನಿಚ್ಚಳವಾಗುತ್ತದೆ. ಜನಪದರಲ್ಲಿ 'ಬಲಿ' ಭೂಮಿತಾಯಿಯ ಮಗನಾದರೆ, ವೈದಿಕರಲ್ಲಿ ಸೂರ್ಯನ ಮಗ, ಜನಪದರು ಬಲಿಯನ್ನು ಬಲೀಂದ್ರ, ಇಂದ್ರ, ದೇವೇಂದ್ರ ಎಂದು ಗೌರವಿಸಿದರೆ, ವೈದಿಕರು ಬಲಿಯನ್ನು ರಾಕ್ಷಸನೆಂದು ಗುರುತಿಸುತ್ತಾರೆ. ವೈದಿಕರಿಂದ ರಚಿಸಲ್ಪಟ್ಟ ಸಂಸ್ಕೃತ ಸಾಹಿತ್ಯ ಮಧ್ಯಕಾಲೀನ ರಾಜ್ಯ ಸಂಸ್ಕೃತಿಯ ಹಿನ್ನೆಲೆಯನ್ನು ಹೊಂದಿದ್ದರೆ, ಜಾನಪದ ಸಾಹಿತ್ಯ ಕೃಷಿ ಆಚರಣೆಯನ್ನು ತನ್ನ ಒಡಲೊಳಗೆ ಇಟ್ಟುಕೊಂಡ ಸಾಮುದಾಯಿಕ ಅಂತಃಸತ್ವವನ್ನು ಪ್ರಕಟಿಸುತ್ತದೆ. ಬಲಿಯುತ ಸರ್ವಶ್ರೇಷ್ಠ ರಾಜನನ್ನು ಪದಚ್ಯುತಗೊಳಿಸುವ ಅಷ್ಟು ಸುಲಭಕ್ಕೆ ಸಾಧ್ಯವಿಲ್ಲ. ಆದರೆ "ದಾನವನು ಎಂಬ ಉರುಳಿಗೆ ಸಿಕ್ಕಿಸಿ ಪದಚ್ಯುತಗೊಳಿಸಲಾಗಿದೆ. ಅದರ ಹಿಂದಿರುವುದು ಪ್ರಭುತ್ವಕ್ಕೆ ಆಕಾರವಾಗಿ ಹಾಗೂ ವಿಶ್ವದ ನಿಯತಿಗಾಗಿ ಯಜ್ಞ ಮತ್ತು ಬ್ರಾಹ್ಮಣ ಸಂಸ್ಕೃತಿ ಎಂಬ ನಿರೂಪಣೆ ಪ್ರಾಚೀನ ರಾಜ್ಯಗಳಲ್ಲಿ ಬ್ರಾಹ್ಮಣರಿಂದ ನೆಡಯುತ್ತಿತ್ತು."[೪]

ಭೂಮಿಯಲ್ಲಿ ಪಾದದಷ್ಟು ಜಾಗಕೇಳಿದ ಮಹಾವಿಷ್ಣು, ತ್ರಿವಿಕ್ರಮನಾಗಿ ಬೆಳೆದು ಭೂಮಂಡಲವನ್ನು ಆಕ್ರಮಿಸುತ್ತಾನೆ. ಆತ ಈ ರೀತಿ ಬೆಳೆಯಲು ಕಾರಣವಾದವರು "ಮಂತ್ರ ದೃಷ್ಟಾಂತರಾದ ಬ್ರಾಹ್ಮಣರು ಮಹಾಭಾರತದಲ್ಲಿ ಇಂತಹ ಬ್ರಾಹ್ಮಣರ ಪ್ರಧಾನ ನಿರೂಪಣೆಯೇ ಇದೆ. ಬ್ರಹ್ಮಾಣರನ್ನು ಕಡೆಗಾಣಿಸಿದ ರಾಜನ ಗತಿ ಏನಾಗುತ್ತದೆ."[೫] ಎಂಬುದನ್ನು ವಿವರಿಸಲು ಬಲಿಯನ್ನು ಉಲ್ಲೇಖಿಸಲಾಗಿದೆ. ಇಲ್ಲಿ "ಬ್ರಾಹ್ಮಣರು ಎಂಬ ಉಲ್ಲೇಖಿತರು ವರ್ಣಾಕ್ರಮ ಪ್ರತಿಪಾದಕರು ಹಾಗೂ ಯಾಗ-ಯಜ್ಞ ಪ್ರವರ್ತಕರು ಭೀಷ್ಮ ಯುದಿಷ್ಠರನಿಗೆ ಉಪದೇಶ ನೀಡುವಾಗ ಬ್ರಾಹ್ಮಣರ ಸಹಾಯದಿಂದ ಭೂಮಿಯನ್ನು ಗಳಿಸಿ ಅವರನ್ನು ಕಡೆಗಾಣಿಸಿದ್ದರಿಂದಲೇ ದುಷ್ಟವೃತ್ತಿಯಾದ ಬಲಿಯಂತವರು ವಿನಾಶಹೊಂದುತ್ತಾರೆ."[೬]ಎಂದು ಹೇಳುತ್ತಾರೆ. "ಬೃಹಸ್ಪತಿಯು ಪದಚ್ಯುತನಾದ ಇಂದ್ರನಿಗೆ ಈ ವಿಪ್ರಬಲದಿಂದ ಪ್ರಕಾಶಿಸುತ್ತಿರುವ ಬಲಿ ಈಗ ವಿಕ್ರಮನಾಗಿ ಮೆರೆಯುತ್ತಿದ್ದಾನೆ. ವಿಪ್ರಬಲಕ್ಕೆ ಅಪಮಾನವನ್ನು ಎಸಗಿಯೇ ಈತನು ತನ್ನ ಅನುಯಾಯಿಗಳೊಂದಿಗೆ ನಾಶವಾಗುತ್ತಾನೆ."[೭] ಎನ್ನುವ ಮಾತಿನಲ್ಲಿ ಆ ಹೊತ್ತಿಗೆ ರಾಜ ಪರಂಪರೆಯ ಮೇಲೆ ಇದ್ದ ಪ್ರತಿಷ್ಠಿತ ಬ್ರಾಹ್ಮಣರ ಹಿಡಿತವನ್ನು ತೋರಿಸುತ್ತದೆ.

ಈ ಮೇಲಿನ ಉದಾಹರಣೆಗಳು ಸೂಚಿಸುವುದೆನೆಂದರೆ ವರ್ಣವನ್ನು ಬ್ರಾಹ್ಮಣರನ್ನು ದಿಕ್ಕರಿಸುವ ಎಲ್ಲರಿಗೂ ಸಂದೇಶವಾಗಿದೆ. ಬಲಿಯನ್ನು ವಿಷ್ಣುವಿನಿಂದ ಕೊಲ್ಲಿಸಿ ಬ್ರಾಹ್ಮಣೇತರರನ್ನು ನಿಗ್ರಹಿಸಿ ವರ್ಣಾಶ್ರಮವನ್ನು ಕಾಪಾಡುವ ಸಂಸ್ಕೃತಿಗೆ ಒಳಗಾದ ವೈದಿಕರು ಅವನನ್ನು ವಿಷ್ಣುಭಕ್ತನನ್ನಾಗಿಸಿ ಸಮಾಧಾನಗೊಳಗಾಗುತ್ತಾರೆ. ಬಲಿಯ ಪತನಾನಂತರ ಉಂಟಾದ ಅರಾಜಕತೆಗೆ ಉತ್ತರವೆಂಬಂತೆ ಯಜ್ಞದ ಮೂಲಕ ವಾಮನನ್ನು ಆಹ್ವಾನಿಸಿ ವರ್ಣಾಶ್ರಮದ

ಘನೋದ್ದೇಶವನ್ನು ಈಡೇರಿಸುತ್ತಾರೆ. ಆತ ಅಸುರ ವರ್ಣಾಶ್ರಮ ವಿರೋಧಿ ಎಂಬುದು ಗೊತ್ತಿದ್ದರೂ ಬಲಿಯನ್ನು ವಿಷ್ಣು ಭಕ್ತನನ್ನಾಗಿಸಿ ಒಂದು ಸಣ್ಣಹಬ್ಬವನ್ನು ಮಾಡಿ ಎಲ್ಲರೂ ಉಂಡುತಿಂದು ಸಂಭ್ರಮಿಸುತ್ತಾರೆ.

ನರಕಾಸುರನನ್ನು ಕೊಲ್ಲಲು ಕೃಷ್ಣನಂತಹ ಯಾದವನನ್ನು ಬಳಸಿಕೊಂಡರೆ ಬಲಿಯನ್ನು ತುಳಿಯಲು ತ್ರಿವಿಕ್ರಮನಂತಹ ಕ್ಷತ್ರಿಯನನ್ನು ಬಳಸಿಕೊಳ್ಳಲಾಗುತ್ತದೆ. ಭಾರತೀಯ ಪುರಾತನ ಪರಂಪರೆಯ ಪ್ರವೇಶದಂತೆ ಅವರನ್ನು ಅವರಿಂದಲೇ ಕೊಲ್ಲಿಸುವವರನ್ನ ಇಂದ್ರ, ಚಂದ್ರರೆಂದು ಹೊಗಳುವ ಪರಿಪಾಠ ಪ್ರಧಾನ ಸಂಸ್ಕೃತಿಯನ್ನು ಚಾಚುತಪ್ಪದೇ ನಡೆದ ಕ್ರಿಯೆ. ಕಾರ್ಮಿಕ ನಾಯಕನೊಬ್ಬ ಬಂಡವಾಳಶಾಹಿ ಪ್ರಭುತ್ವದೊಂದಿಗೆ ಶಾಮೀಲಾದಾಗ ಆತ ಶೂರನೋ, ವೀರನೋ ಆಗಿ ಮಹಾನಾಯಕನಂತೆ ಕಂಗೋಳಿಸುತ್ತಿರುವುದು ಪ್ರಭುತ್ವದ ಬಹುದೊಡ್ಡ ತಂತ್ರವೆಂಬುದು ನಿಚ್ಚಳ. ಕೊಲ್ಲಲ್ಪಟ್ಟವರು ಅಗಣಿತ ಜನಬೆಂಬಲ ಹೊಂದಿದ್ದರೆ ಅಂಥವರು ಕಾಲಾನಂತರ ದೇವರಾಗಿ ಬದಲಾಗುವುದು ಕೂಡಾ ಒಂದು ರೀತಿಯ ರಾಜಕೀಯವೇ ಆಗಿದೆ. ಇಂತಹ ಕಥಾನಕ ನಮಗೆ ತೆರೆದಿಡುವ ಸತ್ಯವೆಂದರೆ ಏಕ ಬದುಕಿನ ಬಾಹುಳ್ಯವನ್ನು ಬಲಿಯ ಕೊಲೆಯಾಗುತ್ತಿರುವುದು ಸಮಾನತ್ವ ವಹಿಸಿದ ಬ್ರಾಹ್ಮಣರ ಸಮಾಧಾನಕ್ಕಾಗಿ ಹಾಗೂ ಇಂದ್ರನ ಒಳಿತಿಗಾಗಿ ಆದರೆ ಶಿಷ್ಟ ರಕ್ಷಣೆಯ ಹಣೆಪಟ್ಟಿಯ ಮೂಲಕ ಕತ್ತಲು ಜಗತ್ತನ್ನು ನಂಬಿಸುವ ಪುರಾಣ ಹಾಗೂ ಪ್ರವಚನಗಳು ಅತ್ಯಂತ ವ್ಯವಸ್ಥಿತವಾಗಿ ಹೇರುತ್ತಾ ಹೋಗುತ್ತದೆ. ಇದಕ್ಕೆ ಪ್ರತಿಯಾಗಿ ಶೂದ್ರರು ತಮ್ಮ ನಾಯಕನ ಮರುಹುಟ್ಟನ್ನು ಬಲಿಯಲ್ಲಿ ಕಂಡಿದ್ದಾರೆ. ಕತ್ತಲ ಜಗದಲ್ಲಿ ಹೊಂದಿ ಬೆಳಕಿನ ಬೆಳಕು ತಂದ ಬಲಿಯನ್ನು ಆರಾಧಿಸುವ ಮೂಲಕ ಸಾಂಸ್ಕೃತಿಕ ದಾಳಿಕೋರತನಕ್ಕೆ ಸವಾಲಾಗಿ ನಿಂತು ಪ್ರತಿಭಟಿಸುತ್ತಾನೆ. ವೈದಿಕರು ಅಗ್ನಿ ಆರಾಧಕರು ಆದರೆ ಬುಡಕಟ್ಟು ಪ್ರಪಂಚದಲ್ಲಿ ಕತ್ತಲೆಗೂ ಸಂಭ್ರಮ. ಕರಾಳ ಕತ್ತಲೆಯ ನಡುವೆ ಬೆಳಕು ಕಾಣುವ ಸಂಭ್ರಮಿಸುವ ಹಬ್ಬವಾಗಿ ದೊಡ್ಡಹಬ್ಬ ರೂಪುಗೊಳ್ಳುತ್ತದೆ. ಇದು ದೀವರಲ್ಲಿ ದೊಡ್ಡಹಬ್ಬ ಹಾಗೂ ವಿಶಿಷ್ಟ ಆಚರಣೆ, ಹರಿಕಂತ್ರರು, ಬೋವಿಗಳು, ಗೊಂಡರು, ಹಾಲಕ್ಕಿಯವರು ಸೇರಿದಂತೆ ಕೃಷಿ ಸಂಸ್ಕೃತಿಯಿಂದ ಬಂದ ಬಹುತೇಕ ಸಮುದಾಯ ಇದನ್ನು ದೊಡ್ಡಹಬ್ಬವಾಗಿ ಆಚರಿಸುತ್ತಾರೆ.

ಪೂರ್ಣ ಚಡಂಗವನ್ನು ಮೂರುಭಾಗ ಮಾಡಿ ವಿಂಗಡಿಸಿಕೊಳ್ಳಬಹುದು. ಬೂರೇ ಹಬ್ಬದ ಹಿಂದಿನ ದಿನವೇ ನೀರು ತುಂಬುವುದು, ಮನೆಮಾರು ಬಳಿದು ಜೇಡಿ ಕೆಮ್ಮಣ್ಣು ಹಚ್ಚುತ್ತಾರೆ. "ದೊಡ್ಡಹಬ್ಬಕ್ಕೆ ಸೂರುಗಳೆಲ್ಲ ಕೆಮ್ಮಣ್ಣು" ಎಂಬ ಗಾದೆಯು ಇದೆ. ಕೃಷಿ ಪರಿಕರ ಹಾಗೂ ಮನೆಬಳಕೆ ವಸ್ತುಗಳು ಸೇರಿದಂತೆ ಎಲ್ಲಾ ಪರಿಕರಗಳನ್ನು ತೊಳೆದು, ಜೇಡಿಕೆಮ್ಮಣ್ಣು ಹಚ್ಚುತ್ತಾರೆ. ಮಧ್ಯಾಹ್ನ ಬಚ್ಚಲು ಹರವಿ ತೊಳೆದು ಅದಕ್ಕೆ ಜೇಡಿಕೆಮ್ಮಣ್ಣು ಮಾಡಿ ಅದರ ಕೊರಳಿಗೆ ಮಾಲಿಂಗನ ಬಳ್ಳಿ ಹಿಂಡ್ಲಚ್ಚಿಕಾಯಿ, ಕಹೀ ಹಿರೇಬಳ್ಳಿ ಸುತ್ತಿ ನೀರು ತುಂಬಿ ಬಾಯಿ ಮುಚ್ಚುತ್ತಾರೆ. ಇದನ್ನು "ಬೂರೆ ತುಂಬುವುದು" ಎನ್ನುತ್ತಾರೆ.

ಬೂರೆಹಬ್ಬ: ಬೂರೆಹಬ್ಬವು ದೀಪಾವಳಿ ಅಮವಾಸೆಯ ಹಿಂದಿನ ದಿನದ ಹಬ್ಬವಾಗಿ ಆಚರಿಸಲ್ಪಡುತ್ತದೆ. ಇಲ್ಲಿ ಊರಿನ ಯುವಕರು ರಾತ್ರಿ ಯಾರಿಗೂ ಗೊತ್ತಾಗದಂತೆ ಕದಿಯುವ ನಾಟಕವಾಡುವುದನ್ನು 'ಬೂರೆಗಳ'ಹಬ್ಬ ಎನ್ನುತ್ತಾರೆ. ಇದೊಂದು ಪೂರ್ವಹಾಸ್ಯಮಯ ಪ್ರಸಂಗವನ್ನು ಸೃಷ್ಟಿಸುವುದೇ ಆಗಿದೆ. ತರಕಾರಿ, ಶುಂಠಿ, ಅರಿಶಿಣ, ಬಾಳೇಕಾಯಿಗಳನ್ನು ಕದಿಯುವುದು, ವಸ್ತುಗಳನ್ನು ಮುಚ್ಚಿಡುವುದು, ಆಕಳು ಕರುಬಿಡುವುದು, ಗಾಡಿಗಾಲಿಗಳನ್ನು (ಬಿಡುವುದು,) ಬದಲಾಯಿಸುವುದು, ಅವರ ಮನೆವಸ್ತು ಇವರ ಮನೆಗೆ, ಇವರ ಮನೆವಸ್ತು ಅವರ ಮನೆಗೆ, ಇಟ್ಟು ಮೋಜು ನೋಡುವುದು ಮಾಡಿ ಮಾರನೇ ದಿನ ಗುಲ್ಲೆಬ್ಬಿಸುತ್ತಾರೆ. "ಇದೊಂದು ಪೀಡೆಯಿಂದ ಪೀಡೆಯನ್ನು ತೊಲಗಿಸುವ ತಂತ್ರವಿಧಾನವಾಗಿದೆ. ಇಂತಹ ಕಾರ್ಯಕ್ರಮಗಳಿಗೆ ಪ್ರೇರಕವಾದಂತಾಗಿದೆ."

ಇಂಥ ಸಂದರ್ಭದಲ್ಲಿ ಆದಿಮ ಜಗತ್ತಿನ ಜನ ತಾವು ಅನೂಹ್ಯವಾಗಿ ನಂಬಿಕೊಂಡು ಬಂದಿರುವ ರಾಜನ ಸಾವನ್ನು ಅಷ್ಟು ಸುಲಭವಾಗಿ ಸ್ವೀಕರಿಸಿದ್ದಿರಲಾರರು. ವಾನರು ಗುಟ್ಟಾಗಿಯಾದರೂ, ಕಡ್ಡಾಯವಾಗಿಯಾದರೂ ಹಬ್ಬ ಮಾಡುವ ಅನಿವಾರ್ಯತೆ ಸೃಷ್ಟಿಸಿಕೊಂಡಿದ್ದಾರೆ. ಹಾಗಾಗಿ ಕೆಲವು ವಸ್ತುಗಳನ್ನು ಅಂದರೆ ಸ್ನಾನಕ್ಕೆ ಬೇಕಾದ ಅರಿಶಿಣ ಮತ್ತು ಅಡುಗೆಗೆ ಬೇಕಾದ ಕುಂಬಳಕಾಯಿ ಮುಂತಾದವುಗನ್ನು ಕದ್ದುಮುಚ್ಚಿ ತರುವುದು ಅನಿವಾರ್ಯವಾಗಿತ್ತು. ಹಾಗೆ ಆರಂಭವಾದಂತ ಪದ್ಧತಿ ಒಂದು ಸಂಪ್ರದಾಯದ ರೂಪವನ್ನು ತಲುಪಿದೆ ಎಂಬುದೇ ಅಚ್ಚರಿಯಲು ಸಂಗತಿ ಮತ್ತು ಗ್ರಹಿಸುವ ವಿಷಯ.

ನರಕ ಚತುರ್ದಶಿಯಂದೇ ಬೂರೆಹಬ್ಬವನ್ನು ಆಚರಿಸುತ್ತಾರೆ. "ನರಕಾಸುರ ಪ್ರಾಗ್ಜ್ಯೋತಿಷ್ಯ ನಗರವನ್ನು ಆಳುತ್ತಿದ್ದ. ಇಂದ್ರನ ವಿಹಾರಕ್ಕಾಗಿ ಏರ್ಪಟ್ಟಿದ್ದ ಮೇಗು ಪರ್ವತದ ಮಣಿಶಿಖರವನ್ನು ಆಕ್ರಮಿಸಿದ್ದಕ್ಕಾಗಿ" ಕೃಷ್ಣನು ಲೋಕಕಂಟಕನೆಂಬ ಹಣೆಪಟ್ಟಿ ಕಟ್ಟಿ ನರಕಾಸುರನನ್ನು ಕೊಲ್ಲುತ್ತಾನೆ. ನರ- ನೀರು -ಕ =ನೀರಿನಲ್ಲಿ ವಾಸಿಸುವನು. ಅಂದರೆ "ನಾಗರ" ಕುಲದವನಿರಬಹುದು. "ನರಕನನ್ನು ಯಾದವ ಕೃಷ್ಣ ಕೊಂದನೆಂಬ ಸಾಂಪ್ರದಾಯಿಕ ನಂಬಿಗೆಯಿದೆ. ಯಮುನಾ ನದಿಯಲ್ಲಿ ಕೊಲ್ಲಲ್ಪಟ್ಟ ಕಾಡಂದಿಯಂತೆ ನರಕ ನಾರಕನೆಂಬುವನು ನಾಗರಾಜನೇ ಸರಿ. ಆದರೆ ನರಕನನ್ನು ನಾಗರೂಪನೆಂಬುದನ್ನು ಪುರಾಣದಲ್ಲಿ ಬಚ್ಚಿಡಲಾಗಿದೆ."[1] ಆದ್ದರಿಂದಲೇ ಒಟ್ಟಾರೆ ವೈದಿಕ ಹಾಗೂ ನಾಗವಂಶೀಯರಿಗೂ ಸಂಸ್ಕೃತಿಯ ಆರಂಭದ ಕಾಲಘಟ್ಟದಲ್ಲಿ ನಡೆದಿರಬಹುದಾದ ಸಂಘರ್ಷವಾಗಿ ಇದನ್ನು ನೋಡಬಹುದು. ಆ ಸಂದರ್ಭದಲ್ಲಿ ಕೃಷ್ಣನನ್ನು ಕೀರ್ತಿ ಹಾಗೂ ಪ್ರತಿಷ್ಠತೆಯ ಕಾರಣದಿಂದ ನರಕನನ್ನು ಕೊಲ್ಲಿಸುವ ಬಲಿಪಶುವನ್ನಾಗಿ ಮಾಡಲಾಗಿಗೆ.

ಬೂರೆಹಬ್ಬದ ಹಿಂದಿನ ದಿನವೇ ಕುಂಬಾರರಿಂದ ಹೊಸ ಬೂರೆ ಕಂಬವನ್ನು ತಂದು ಹಾಲು -ಸುಣ್ಣ ಸೇರಿಸಿ ಅದರ ಮೇಲೆ ಗದ್ದೆ ಸಸಿ, ಗೋಣಬೆ, ಕುಂಭ ಮುಂತಾದ ಚಿತ್ರ ಬರೆಯುತ್ತಾರೆ. ಕೆಲವರು ಜೇಡಿಕೆಮ್ಮಣ್ಣು ಹಚ್ಚುತ್ತಾರೆ. ಕೆಲವು ಕಡೆ ಹಾಗೆ ಬಿಡುತ್ತಾರೆ. ಬೂರೆಗಳಗೆ ಹಾದಿ ಅರಿಶಿಣವನ್ನು ಎರಡು ಭಾಗದಲ್ಲಿ ಅರೆದು ಎಣ್ಣೆಹಾಕಿಡುತ್ತಾರೆ. ಒಂದು ಭಾಗ ಗೋವುಗಳಿಗೂ ಇನ್ನೊಂದು ಭಾಗ ಮನುಷ್ಯರಿಗೆಂದು ವಿಭಾಗಿಸುತ್ತಾರೆ.

ಬೂರೆಹಬ್ಬದ ದಿನ ಅರಿಶಿಣವನ್ನು ಮೈಗೆ ಲೇಪಿಸಿಕೊಂಡು ಸ್ನಾನ ಮಾಡುತ್ತಾರೆ. ಎಣ್ಣೆ ಹಚ್ಚಿಕೊಳ್ಳದಿದ್ದರೆ ಮುಂದಿನ ಜನ್ಮದಲ್ಲಿ ಹೆಬ್ಬಾವಾಗಿ ಹುಟ್ಟುತ್ತಾರೆ. ಎಂಬ ನಂಬಿಕೆಯಿದೆ. ಹೊಸ ಕುಂಬಕ್ಕೆ ಎರಡು ಪಣತೆ ಹಚ್ಚಿ, ಹಸಿಕಡ್ಲೆ, ಹೆಸರುಕಾಳು, ಬೆಲ್ಲ, ಬಾಳೇಹಣ್ಣು, ಹಸಿ ಅಡಿಕೆ, ಅಂಬಾಡಿ ಎಲೆ, ಪಚ್ಚೆತೆನೆ, ಹಿಂಗಾರ. ನ್ಯಾರೆಕಡ್ಡಿ, ಕೊಳೆ ಹೂ, ಮಾವಿನ ಕೊನೆಗಳನ್ನೆಲ್ಲಾ ತೆಗೆದುಕೊಂಡು ಕೆರೆಗೆ ಹೋಗಿ ಕುಡಿಯ ಬಾಳೆ ಎಲೆ ಮೇಲಿಟ್ಟು ಅರಿಶಿಣ ಕುಂಕುಮ ಹಚ್ಚಿ ಅದಕ್ಕೆ ಐದು ಕಲ್ಲು ಮತ್ತು ಮರಳು ಗುಡ್ಡೆ ಮಾಡಿ ಪೂಜೆ ಮಾಡುತ್ತಾರೆ. ಆ ಮರಳು ಗುಡ್ಡೆಗಳನ್ನು 'ಮರಳುಗಂಗೆ' ಎನ್ನುತ್ತಾರೆ. ಅವುಗಳನ್ನು ನೀರಿಗೆ ತುಳುಕುಹಾಕಿಸಿ ತೇಲಿಸುತ್ತಾರೆ. ಎಲೆ, ಅಡಿ, ಗಂಗೆಗೆ ತೇಲಿಬಿಟ್ಟು ಕುಂಬ ತುಂಬಿಕೊಂಡು ಮನೆಗೆ ಹಿರಿಯ ಮೊಮ್ಮಕ್ಕಳು ಬರುತ್ತಾರೆ. ಮನೆಗೆ ಬಂದಾಗ ಮನೆಯ ಎದುರು ಕುಡಿಬಾಳೆ ಎಲೆಯ ಮೇಲೆ ನೀರು ತಂದವರ ಕಾಲನ್ನು ತೊಳೆದು ಪೂಜೆ ಮಾಡಿ ಬೂರೆಕುಂಬವನ್ನು ಇಡಕಲು ಮೇಲಿಟ್ಟು ಅದಕ್ಕೆ ಬೂರೆಕಣ್ಣೆ (ದನಕ್ಕೆ ಕಟ್ಟುವ ಹಗ್ಗ) ಹಾಕಿ ಎಡೆ ಮಾಡುತ್ತಾರೆ. ಅನ್ನ, ಸಾರು, ಪಾಯಸ, ಚಿನ್ನಿಕಾಯಿ, ಕಡುಬನ್ನು ಎಡೆಗೆ ಹಾಕಿ ಊದಿನಕಡ್ಡಿ ಬೆಳಗುತ್ತಾರೆ. ಗಂಡಸರು ಕಾಯಿ ಹೊಡೆದು ಪೂಜಿಸುತ್ತಾರೆ. ಇದಾದ ನಂತರ ಅಮವಾಸ್ಯೆ ಹಬ್ಬದ (ದಿನ) ಸಡಗರ ಆರಂಭವಾಗುತ್ತದೆ. ಬೂರೆಗಳಲ್ಲಿ ಕದ್ದ ಪರಿಕರಗಳನ್ನೇ ಹಬ್ಬದಲ್ಲಿ ಬಳಸುವುದನ್ನು ಕಾಣಬಹುದಾಗಿದೆ. ಈ ಹಬ್ಬಕ್ಕೆ ಹೆಣ್ಣುಮಕ್ಕಳು ಬರಬೇಕೆಂದೇನಿಲ್ಲ. ಕೆಲವು ಹೆಣ್ಣು ಮಕ್ಕಳು

ಗಂಡನ ಮನೆಯಲ್ಲಿ "ಕಾಲುಪೂಜೆ" ಮಾಡಿ ಸಂಜೆಯ ಸಮಯದಲ್ಲಿ ತವರು ಮನೆಗೆ ಬರುತ್ತಾರೆ. ಬಹಳ ವಿಶಿಷ್ಟವೆಂದರೆ ಕುಂಬದಲ್ಲಿ ನೀರು ತರುವ ಕ್ರಮ ಮಾತೃಪ್ರಧಾನೀಯ ಸಂಸ್ಕೃತಿಯಿಂದ ಬಂದ ಸಮುದಾಯವೊಂದು ನೀರು ಮತ್ತು ಕುಂಬವನ್ನು ತಾಯಿ ಮತ್ತು ಜೀವದ್ರವ್ಯಕ್ಕೆ ಹೋಲಿಸಿಕೊಳ್ಳುತ್ತದೆ. ಮನೆಗೆ ಹಿರಿಯರನ್ನು ತರುವ ಮೂಲಕ ಹಬ್ಬದ ಸಡಗರವನ್ನು ಅನುಭವಿಸುತ್ತದೆ. ಗಸಿ ಅಡಿಕೆ, ಅಂಬಾಡಿ ಎಲೆ, ನ್ಯಾರೆಕಡ್ಡಿ, ಕೊಳೆಹೂವು ಇವೆಲ್ಲವೂ ಕೂಡ ಪ್ರಕೃತಿಯ ಜೊತೆಗೆ ಹೊಂದಿದ ಅವಿಚ್ಛಿನ್ನ ಸಂಬಂಧವನ್ನು ಸಾರುತ್ತವೆ.

**ಕಾಲುಪೂಜೆ:** ಹಬ್ಬದ ಹಿಂದಿನ ದಿನ ರಾತ್ರಿ ಸಂಪೂರ್ಣ ಎಚ್ಚರಾಗಿರುತ್ತಾರೆ. ದನಗಳಿಗೆ ಕಟ್ಟಲು ಹೂ ದಂಡೆ, ಅಡಿಕೆ ಸರ, ಚಂಡಿಹೂಸರ, ಹೋರಿಗಳಿಗೆ ಕಾಯಿಸರ, ಸರಿಯುತ್ತಾರೆ. ಮಾವಿನ ಕೊನಕಲು ಸೇರಿ 'ಹುಸಿ' ಕಟ್ಟುತ್ತಾರೆ. ಹುಸಿ ಎಂದರೆ ಕಾಲಿ ಪರ್ಚೆಯಿಂದ ದಾರ ಸಿಗಿಬುಕೊಂಡು ಅದಕ್ಕೆ ಮಾವಿನೆಲೆ ಅಂಬಾಡಿಎಲೆ, ಚಂಡಿಹೂ, ಚಂಡಿಸೊಪ್ಪು, ಪತ್ರೆಸೊಪ್ಪು ಹಾಕಿ ಸೇರಿಸುತ್ತಾರೆ. (ಪೋಣಿಸುತ್ತಾರೆ) ಮಧ್ಯ ರಾತ್ರಿ ಸ್ನಾನಮಾಡಿಯೇ ಹುಸಿ ಸರಿಯುವುದು. ರಾತ್ರಿ ಮಹಿಳೆಯರು ಅಮವಾಸ್ಯೆ ಹಬ್ಬದ ಪಾತ್ರಿ, ಪಡಗ ತೊಳೆದು ಕಾಲು ಪೂಜೆಗೆ ಅಡುಗೆ ಆರಂಭಿಸುತ್ತಾರೆ.

ಹೋಳಿಗೆ, ಕರಿಗಡುಬು, ಚಪ್ಪೆರೊಟ್ಟಿ ಮಾಡುತ್ತಾರೆ. ಚಪ್ಪೆರೊಟ್ಟಿ ಎಂದರೆ ಹೊಸ ಭತ್ತವನ್ನು ತಂದು ಕುಟ್ಟಿ ಅದರ ಹಿಟ್ಟಿನಿಂದ ಸಣ್ಣವೃತ್ತಾಕಾರದ ರೊಟ್ಟಿ ಮಾಡಿ ಎರಡು ತೂತು ಮಾಡುತ್ತಾರೆ. ಇದಕ್ಕೆ ಉಪ್ಪು ಹಾಕುವಂತಿಲ್ಲ. ಹುಸಿಗನು ಸಹ ಚಪ್ಪೆ ರೊಟ್ಟಿ ಕಟ್ಟುತ್ತಾರೆ. ಬಾಗಿಲಿಗೂ ಕೂಡಾ ಇಂತಹ ಒಂದೊಂದು ಸರಗಳನ್ನು ಸರಿದು ಹಾಕುತ್ತಾರೆ.

ಬೆಳಿಗ್ಗೆ ಮೈತೊಳೆದಾದ ಮೇಲೆ ಬೂರೆ ನೀರನ್ನು ಕೊಟ್ಟಿಗೆಗೆ ಚಿಮುಕಿಸುತ್ತಾರೆ. ಜೇಡಿಕೆಮ್ಮಣ್ಣು ಕಲುಸುವಾಗ ಅದಕ್ಕೆ ಬೂರೆ ನೀರು ಹಾಕುವುದುಂಟು. ಜೇಡಿಕೆಮ್ಮಣ್ಣಿನಿಂದ ದನ, ಎಮ್ಮೆ, ಎತ್ತುಗಳ, ಕೊಡಗಳಿಗೆ ಹಚ್ಚುವುದಲ್ಲದೆ ಮೈಗೆ 'ದಾಕು' ಒತ್ತುತ್ತಾರೆ. 'ದಾಕು' ಎಂದರೆ ಸಿದ್ದೆ (ಅಳೆಯುವ ಸಾಧನ) ಯಿಂದ ಅಥವಾ ಬಿದಿರಿನ ಅಂಡೆಯಿಂದ ಲೋಟಾದಿಂದ ಕೆಮ್ಮಣ್ಣು ಜೇಡಿಗೆ ಅದ್ದಿ ಅವುಗಳ ಮೈಗೆ ಒತ್ತುತ್ತಾರೆ. ಹಗ್ಗ, ಹಂಗಡ, ಕಣ್ಣಿ ಮೂಗುದಾಣ ಮುಂತಾದವುಗಳಿಗೂ ಹಚ್ಚುತ್ತಾರೆ. ನಾಯಿ, ಬೆಕ್ಕು ಕೋಳಿಗಳಿಗೆಲ್ಲಾ ಅಲಂಕಾರ ಪಡೆಯುತ್ತವೆ.

ಆ ನಂತರ ಗೋಪೂಜೆ ಹಾಲು ಮೊಸರು, ಜೇನು, ತುಪ್ಪ ಮುಂತಾದವುಗಳನ್ನು ತಂದು ಇಡುತ್ತಾರೆ. ಕೊಟ್ಟಿಗೆಯ ಎದುರು ಕೆಮ್ಮಣ್ಣು ಬಳಿದು ಜೇಡಿಯನ್ನು ಹಚ್ಚಿ ಐದು ಸಾಲು ಮಾಡಿ ಅದರಲ್ಲಿ ಬಸವನಪಾದ ಬರೆಯುತ್ತಾರೆ. ಅದರ ಮೇಲೆ ಕರ್ಕಿ ಬ್ಯಾನಪ್ಪನನ್ನು ಇಟ್ಟು, ಅಡಿಕೆ, ಪಚ್ಚೆತೆನೆ, ಪಾದದ ಮೇಲೆ ಇಡುತ್ತಾರೆ. ಕರು ಹಾಗೂ ಆಕಳನ್ನು ತಂದು ಆ ಪಾದದ ಮೇಲೆ ನಿಲ್ಲಿಸುತ್ತಾರೆ. ಅವುಗಳಿಗೆ ಬಂಗಾರ ಏನೆಲ್ಲಾ ಹಾಕಿ, ಕಟ್ಟು ಸಾಮಾನು ಬಳೆ, ಏರಿಸಿ ಹಾಲು, ಮೊಸರು ತುಪ್ಪದಿಂದ ಪೂಜಿಸುತ್ತಾರೆ. ಕರು ಆಕಳಿಗೆ ಹುಸಿ ಕಟ್ಟುತ್ತಾರೆ. ಅವುಗಳಿಗೆ ತಿನ್ನಲು ಎಡೆಕೊಡುತ್ತಾರೆ. ಹೊಸ ಬೂರೆ ಕಣ್ಣಿ ಕೊರಳಿಗೆ ಹಾಕುತ್ತಾರೆ. ಮಡಲಕ್ಕಿಯನ್ನು ತಿನ್ನಲು ಕೊಡುತ್ತಾರೆ. ಆರತಿ ಬೆಳಗಿ ಪಕ್ಕದ ಮನೆಯವರಿಗೆಲ್ಲಾ ಪನಿವಾರ ಹಂಚುತ್ತಾರೆ. ಉಳಿದ ದನಗಳಿಗೆಲ್ಲಾ ಕಡುಬು ತಿನ್ನಿಸುತ್ತಾರೆ. ಪೂಜಾ ಸಾಮಾನುಗಳೆಲ್ಲವನ್ನು ಮುಂದಿನ ಬಾಗಿಲಿನಿಂದಲೇ ತೆಗೆದುಕೊಂಡು ಹೋಗಬೇಕು. ಆ ನಂತರ ಎಲ್ಲಾ ದನಗಳಿಗೂ, ಗಿಡಗಂಟಿಗಳಿಗೂ ಹುಸಿಯನ್ನು ಕಟ್ಟಲಾಗುತ್ತದೆ. ಯಾವ ವಸ್ತುಗಳನ್ನು ಬಿಡದಂತೆ ಹುಸಿಕಟ್ಟಲಾಗುತ್ತದೆ. ಮೊದಲು ಎತ್ತಿನ ಮೆರವಣಿಗೆ ಆರಂಭಿಸುತ್ತಾರೆ. ಸ್ಪರ್ಧೆಯೆಂಬಂತೆ ಎತ್ತುಗಳನ್ನು ಅಲಂಕರಿಸುತ್ತಾರೆ. ಹಣೆಕಟ್ಟು, ಗೊಂಡೆ ಹೂ ಕಟ್ಟುತ್ತಾರೆ. ನವಿಲುಗರಿಗಳಿಂದ ಹಣೆಕಟ್ಟಿ ಕಟ್ಟಿದರೆ ಪುದಿನಾರಿಸಿಂವ

ಗೊಂಡೆ ಹೂ ಮಾಡುತ್ತಾರೆ. ಸಾಲಾಗಿ ಎತ್ತುಗಳನ್ನು ಹೊಡೆದುಕೊಂಡು ಊರಿನ ಅಗಸೆಬಾಗಿಲಿನ ಭೂತಪ್ಪನವರಿಗೆ ಮೆರವಣಿಗೆ ಹೋಗಿ ಅಲ್ಲಿ ಎತ್ತಿಗೆ ಸುಳಿಗಾಯ ಒಡೆಯುತ್ತಾರೆ. ಇಲ್ಲಿ ದೀವರ ಪುರುಷರ ಕಲಾಪ್ರೌಢಿಮೆ ಸೃಜನಶೀಲತೆ ಬೆಳಕಿಗೆ ಬರುವುದಲ್ಲದೆ ಹಿರಿಮೆಯು ಕಾಣಿಸಿಕೊಳ್ಳುತ್ತದೆ.

ಅನಂತರ ದನಗಳನ್ನು ಓಡಿಸುತ್ತಾರೆ. ಕೆಲವರು ಹುಸಿ ಹರಿದುಕೊಳ್ಳುತ್ತಾರೆ. ತುಂಡು ಹೋರಿಗಳನ್ನು ಬಿಡಿಸುತ್ತಾರೆ. ಹೋರಿಗಳ ಮೇಲೆ ನೂರಾರು ರೂಪಾಯಿ ಹಣವನ್ನು ಕಟ್ಟುತ್ತಾರೆ. ಕೊರಳಲ್ಲಿರುವ ಕಾಯಿಗಿಟಕ ಹರಿದವನಿಗೆ ದುಡ್ಡು ಬಂಗಾರದ ಬಳೆ, ಬೆಳ್ಳಿ ಕಡಗ, ವಾಚು ಮುಂತಾದವುಗಳನ್ನು ಬಹುಮಾನವಾಗಿ ಘೋಷಿಸುತ್ತಾರೆ. ದನ-ಹೋರಿ ಬಿಟ್ಟಾದ ನಂತರ ರಸ್ತೆಯಲ್ಲಿ ಬಿದ್ದಿರುವ ಸಗಣಿ, ಹೂವಿನ ದಂಡೆ, ಚಂಡಿಹೂ ಹುಸಿಯನ್ನು ಆರಿಸಿಕೊಂಡು ಬಂದು ಬಲೀಂದ್ರನ ಬಳಿ ಇಡುತ್ತಾರೆ. ಅಂದು ಕೊಟ್ಟಿಗೆ ಗೂಡಿಸುವಂತಿಲ್ಲ ಬರಿ ಸಗಣಿ ಆರಿಸುತ್ತಾರೆ.

**ಪೂಜಾ ವಿಧಾನಗಳು:**

ದೀವರು ಎತ್ತುಗಳನ್ನು ಹಬ್ಬ-ಹರಿದಿನಗಳಲ್ಲಿ ಪೂಜಿಸುವದು ಸಂಪ್ರದಾಯವಾಗಿದೆ. ದೀಪಾವಳಿ ಹಬ್ಬದಂದು 'ಗೋಪೂಜೆ' ಮಾಡಲಾಗುವುದು. ಅಂದಿನ ದಿನ ದನಗಳಿಗೆ ಶೃಂಗರಿಸಿ ಚಂದ್ರ, ವಿಭೂತಿ ಹಚ್ಚಿ ಹೂ ಮುಡಿಸಿ ಪೂಜೆ ಮಾಡುವುದುಂಟು. ಹಾಗೆಯೆ ದಿನನಿತ್ಯೆ ಜೀವನದಲ್ಲಿ 'ಸೋಮುವಾರ' ಎತ್ತುಗಳಿಗೆ ಸ್ನಾನಮಾಡಿಸಿ, ಪೂಜಿಸುವರು. ಅಂದಿನ ದಿನ ಎತ್ತುಗಳಿಗೆ ಬೇಸಾಯವನ್ನು ಯಾರು ಕಟ್ಟುವುದಿಲ್ಲ ಮನೆಯಲ್ಲಿಯೇ ಇರುವುದು ವಾಡಿಕೆಯಾಗಿದೆ. ಹೀಗೆ ದನಗಳನ್ನು ಪೂಜ್ಯಭಾವನೆಯಿಂದ ಕಾಣುವರು.

ದೀವರು ಸಾಕಿದ ದನಕರುಗಳನ್ನು(ಎತ್ತುಗಳನ್ನು) ಮಾಂಸಹಾರಕ್ಕಾಗಿ ಕೊಡಲು ಹಿಂಜರಿಯುತ್ತಾರೆ. ಅವರ ಎತ್ತುಗಳು ಮನೆಯಲ್ಲಿಯೇ ಮರಣ ಹೊಂದಿದರೆ ತಮ್ಮ ಹೊಲದಲ್ಲಿಯೇ ಹೂಳುತ್ತಾರೆ. ಇದರಿಂದ ದನಗಳ ಬಗ್ಗೆ ಅವರು ಇರಿಸಿಕೊಂಡಿದ್ದ ಪೂಜ್ಯಭಾವನೆ ವ್ಯಕ್ತವಾಗುತ್ತದೆ. ದೀವರ ಸಮುದಾಯದವರು ಕುರಿ, ಕೋಳಿ, ಮೀನು ಇತ್ಯಾದಿಯಾಗಿ ಆಹಾರಕ್ಕೆ ಬಳಸುವರು.

**ಬಲೀಂದ್ರನನ್ನು ಹೂಡುವುದು:**

ದನ ಬಿಟ್ಟ ನಂತರ ಗಂಡಸರು ಕಾಡಿಗೆ ಹೋಗಿ ಕಾಯಿ, ನೆಲ್ಲಿಕಾಯಿ, ಕ್ವಾಳೆ ಹೂ (ತಾವರೆ ಹೂ) ಕೆರೆ ಜಡ್ಡಿನ ತೆನೆ, ನ್ಯಾರೆ ತರುತ್ತಾರೆ. ಮನೆಯಲ್ಲಿ ಹೆಂಗಸರು ಕೆಮ್ಮಣ್ಣು ಜೇಡಿ ಹಚ್ಚಿ ಅದರ ಮೇಲೆ ಆಕೃತಿಯಲ್ಲಿ ಸಗಣಿಯನ್ನು ಚಿತ್ರಿಸಿ ಅದರ ಮೇಲೆ ಕುಡಿಬಾಳೆ ಎಲೆ ಇಟ್ಟು ಅದರ ಮೇಲೆ ಬೂರೆಕಂಬ ಇಟ್ಟು ಹಂಗಾರು ಪಚ್ಚೆ ತೆನೆ ಸೇರಿಸಿ ಪೂಜೆ ಮಾಡುತ್ತಾರೆ. ಅಂದು ತಮ್ಮ ಮನೆಗಳಲ್ಲಿ ಬುತ್ತಿ ಚಿತ್ರಾನ್ನಾ, ಕೊಟ್ಟೆ ಕಡುಬು, ಉಂಡೆ ಕಜ್ಜಾಯಿ, ಬದ್ನೆಕಾಯಿ, ಅವರೇಕಾಯಿ ಪಲ್ಯ, ಸೌತೆಕಾಯಿ ಪಲ್ಯ ಮಾಡಿ ಪಚಡಿ ಹಾಲು ತುಪ್ಪ ಇಟ್ಟು ಗಂಡಸರು ಜೋಡುಕಾಯಿ ಒಡೆಯುತ್ತಾರೆ. ಎರಡು ಕುಡಿ ಬತ್ತಿ ಹಚ್ಚಿ (ಕೋಲಿಗೆ ಹರಳೆಣ್ಣೆ ಬಟ್ಟೆ ಸುತ್ತುವುದು) ಪ್ರಧಾನ ಬಾಗಿಲು, ಮುಹೂರ್ತ ಮುಂಡಿಗೆ ಪಿತೂರಿ, ವ್ಯವಸಾಯ ಉಪಕರಣಗಳಿಗೆ "ದೀಪ-ದೀಪೋಳಿಗೆ" ಎನ್ನುತ್ತಾರೆ. ಬೆಳಗುತ್ತಾರೆ.

ಬಲೀಂದ್ರ ಬರುವಾಗ ಜಗತ್ತೆಲ್ಲ ಹಸಿರಾಗಿರಬೇಕೆಂಬ ನಂಬಿಕೆ ಇದೆ. ಆತ ಸಾಯುವಾಗ ಮಹಾವಿಷ್ಣುವಿನಿಂದ ಅಭಯ ತೆಗೆದುಕೊಂಡಿದ್ದನಂತೆ ಹಾಗಾಗಿಯೇ ನೀನು ಇಲ್ಲದಿದ್ದಾಗಲೂ ಭೂಲೋಕವೆಲ್ಲಾ ಹಾಗೆ ಇದೆ. ಎಂಬ

ನಂಬಿಕೆಯನ್ನು ಉಳಿಸಲು ಕಾಡಿನ ಪರಿಕರಗಳನ್ನು ತಂದಿಡುತ್ತಾರೆ. ಪ್ರಾಯಶಃ ಕಾಲುಪೂಜೆ ನಂತರ ಆರಂಭವಾಗಿರುವ ಆರಾಧನೆ ಆಗಿರಬಹುದು. ವೈಷ್ಣವ ಸಂಸ್ಕೃತಿಯ ಆಗಮನದ ನಂತರ ಈ ರೀತಿಯ ಸಾಂಸ್ಕೃತಿಕ ಪಲ್ಲಟವಾಗಿರುವುದನ್ನು ಇಳಿದುದುರ ಹಿಂದೆ ಇಂತಹ ಒತ್ತಡವನ್ನು ನಿರ್ಲಕ್ಷಿಸುವಂತಿಲ್ಲ.

**ಬಂಡಿಪೂಜೆ:**

ಹಳಿಬಂಡಿಯಾದರೆ ಅದಕ್ಕೆ ವಿಶೇಷ ಪೂಜೆ, ಗಾಲಿ ಬಂಡಿಯಾದರೆ ಅದಕ್ಕೆ ಬೇರೆ ತರಹ ಪೂಜೆಮಾಡುವರು. ಹಳಿಬಂಡಿಯನ್ನು ಬಣ್ಣದ ಚಾಪೆ ಮೇಲೆ ಕೂರಿಸಿ ಅದರ ಮಧ್ಯೆ ಹಲಗೆಯಿನ್ನಿಟ್ಟು ಜೋಡಿಸುತ್ತಾರೆ. ಲಕ್ಷ್ಮಿಯ ಮುಖವಾಡವನ್ನಿಟ್ಟು ಸೀರೆ ಉಡಿಸಿ ಕುಬಸ ಹಾಕಿ, ಪೂಜಿಸುತ್ತಾರೆ. ಗಾಲಿ ಬಂಡಿಯಾದರೆ ತಂಬಿಗೆಯನ್ನಿಟ್ಟು ಸೀರೆ ಉಡಿಸಿ ಪೂಜಿಸುತ್ತಾರೆ. ಮತ್ತು ಸಂಜೆ ದಿನ ಬರುವ ವೇಳೆ ಹಬ್ಬದ ದಿನದ ಬೂದಿಯನ್ನು ಗಡಿಗೆಗೆ ಹಾಕಿಕೊಂಡು ಬೆಂಡೆಕೋಲಿನಿಂದ ರಂಗೋಲಿ ಬರೆಯುತ್ತಾರೆ.

ದನಗಳು ಬಂದ ತಕ್ಷಣ ಓಕಳಿ ಮಾಡಿ, ಕಾಡುಜೀರಿಗಿ ಕಾಳು ನೀರಿನಲ್ಲಿ ಕಲಸಿ ಮಾವಿನ ಕೊನಕಲಿನಿಂದ ಸಿಮಿಸಿ (ಚಿಮಿಕಿಸಿ) ಒಳಗೆ ಕಟ್ಟುತ್ತಾರೆ. ಹುಸಿಯನ್ನು ಹರಿಸಿಕೊಳ್ಳದೆ ಬಂದ ದನಗಳಿಗೆ ಊದಿನಕಡ್ಡಿ ಬೆಳಗಿ ಹುಸಿ ಬಿಚ್ಚಿಕೊಂಡು ಬಲೀಂದ್ರನ ಬಳಿ ಇಡುತ್ತಾರೆ. ಕಡು ಬತ್ತಿ ತೆಗೆದುಕೊಂಡು ಹೋಗಿ ಗದ್ದೆ ಬಯಲಿನ ದೇವರಿಗೆ ಬೆಳಗುತ್ತಾರೆ.

ಸಂಜೆ ಮನೆ ಎದುರಿಗೆ ಕುಂಬ್ಳೆಕಾಯಿ ಹರಟೆ ಹಚ್ಚಿರುತ್ತಾರೆ. ಕುಂಬ್ಳೆಕಾಯಿಯನ್ನು ಎರಡು ಭಾಗಮಾಡಿ ಒಳಗಿನ ತಿರುಳನ್ನು ತೆಗೆದು ಅದರಲ್ಲಿ ಹಣತೆ ಮಾಡಿ ಹಚ್ಚಿಡುವುದು ದೇವಸ್ಥಾನಕ್ಕೆ ದೀಪಬೆಳಗಿಸಿ ದೊಂದಿ ಆರುತ್ತಾರೆ. (ದೊಂದಿ ಅಂದರೆ ಪುಂಡಿ ಕೋಲಿನ ಮೆದೆಕಟ್ಟಿ ಅದಕ್ಕೆ ಬೆಂಕಿ ಹಚ್ಚಿಕೊಂಡು ಅಗಸೆ ಬಾಗಿಲತನಕ ಬಿಡುತ್ತಾರೆ.) ''ದೀಪದ ದೀಪೋಳಿಗೋ ಒಡೇರ ಮನ್ಯಾಗ ಹೋಳಿಗೋ'' ಎಂದು ಕೂಗುತ್ತಾರೆ.

**ದನ ಕರುಗಳ ವಸತಿ ಸೌಕರ್ಯ:**

ದನಕರುಗಳನ್ನು ಸಾಕುವುದೆಂದೊಡನೆ ಅವುಗಳ ವಾಸಕ್ಕೆ ಅನುಕೂಲ ಮಾಡಿಕೊಡುವುದು ಅನಿವಾರ್ಯ. ಎಲ್ಲಡೆ ಅದರಂತೆ (ಶಿವಮೊಗ್ಗ) ಜಿಲ್ಲೆಯಲ್ಲಿಯೂ ಆಕಳು ಮತ್ತು ಎತ್ತು ಎಮ್ಮೆಗಳನ್ನು ಸಾಕುವವರೆಲ್ಲ ಕೊಟ್ಟಿಗೆಯನ್ನು ಕಟ್ಟಿರುತ್ತಾರೆ ಎಂಬ ಬಗ್ಗೆ ಎರಡು ಮಾತಿಲ್ಲ. ಆದರೆ ಕೆಲವು ಕೃಷಿಕರು ಕಟ್ಟಿದ ಕೊಟ್ಟಿಗೆಗಳು ದನಕರುಗಳ ವಾಸಕ್ಕೆ ನಿಷ್ಪ್ರಯೋಜಕ ಎಂದರೆ ಅತಿಶಯೋಕ್ತಿಯಾಗಲಾರದು. ಬೇಸಿಗೆಯಲ್ಲಿ ಸೂರ್ಯನ ಶಾಖವನ್ನು ಒಳಬಿಡುವ ಮತ್ತು ಮಳೆಗಾಲದಲ್ಲಿ ಸೊರುವ ಮಾಡು, ಸೋರುವ ಮಾತಿನಿಂದಾಗಿ ರಾಡಿಯಾಗುವ ತಗ್ಗು ದಿನ್ನೆಗಳ ನೆಲ, ಸಗಣಿ ಮೂತ್ರಗಳನ್ನು ತುಳಿಯುತ್ತಲೇ, ಓಡಾಡಬೇಕಾಗುವ ಕೊಟ್ಟಿಗೆಯ ಒಳಭಾಗದ ರಚನೆ, ಉಣುಗು, ಹೇನು, ನೊಣ, ಸೊಳ್ಳೆ ಇತ್ಯಾದಿ ಪರೋಪಜೀವಿ ಕೀಟಗಳು ಅನಿರ್ಬಂದಿತವಾಗಿ ಜೀವಿಸುವ ಆಗರ. ಇದು ಇಂಥ ಪಶುಪಾಲಕರು ನಿರ್ಮಿಸಿದ ಕೊಟ್ಟಿಗೆಯ ವರ್ಣನೆ. ಈ ಬಗೆಯ ನರಕ ಸದೃಶ್ಯ ಸ್ಥಳದಲ್ಲಿ ನಿಲ್ಲಲು ಆಗದ, ಮಲಗಿ ವಿಶ್ರಾಂತಿ ಪಡೆಯಲು ಆಗದ ದನಕರುಗಳ ಮೂಕವೇದನೆ ಈ ವಿಷಮಪರಿಸ್ಥಿತಿಗೆ ಸ್ಥಳದ ಅಭಾವ, ಆರ್ಥಿಕ ದುಃಸ್ಥಿತಿ ಅಜ್ಞಾನ ಮತ್ತು ಅಲಕ್ಷ ಇವೇ ಮುಖ್ಯ ಕಾರಣ ಎನ್ನಬಹುದು.

''ದನಕರುಗಳಿಗೆ ಜಡಿ ಮಳೆಯಿಂದ ಸುಡುವ ಸೂರ್ಯನ ಬಿಸಿಲಿನಿಂದ ಕುಳಿರ್ಗಾಳಿಯಿಂದ ಹೆಪ್ಪುಗಟ್ಟುವ ಚಳಿಯಿಂದ ಅಧಿಕ ತೇವದಿಂದ ಮತ್ತು ಪರೋಪಜೀವಿ ಕೀಟಗಳಿಂದ ರಕ್ಷಣೆಯನ್ನೊದಗಿಸುವಲ್ಲಿ ವಾಸಸ್ಥಾನವೇ ಉತ್ತಮ ಕೊಟ್ಟಿಗೆ ಎಂಬುದನ್ನು ಸಾಬೀತುಪಡಿಸಬಹುದು.''[೧೦]

**ದನಕರಗಳ ವಾಸಸ್ಥಾನದ ಪ್ರಕಾರಗಳು:**

ಬುಡಕಟ್ಟು ಸಮುದಾಯವಾದ ದೀವರಲ್ಲಿ ದನಕರುಗಳ ವಾಸಸ್ಥಾನದಲ್ಲಿ ಎರಡು ಪ್ರಕಾರಗಳಿವೆ. ಮೊದಲನೆಯದು ವಿಶಾಲವಾದ ಸ್ಥಳವನ್ನು ಆರಿಸಿಕೊಂಡು ಸುತ್ತಲೂ ಭದ್ರವಾದ ಬೇಲಿ ಇಲ್ಲವೇ ಗೋಡೆಯನ್ನು ನಿರ್ಮಿಸಲಾಗುತ್ತದೆ. ಇಲ್ಲಿ ದನಕರುಗಳನ್ನು ಯಾವುದೇ ಬಂಧನವಿಲ್ಲದೇ ಓಡಾಡಿಕೊಂಡಿರುವಂತೆ ಬಿಡುತ್ತಾರೆ. ಅಲ್ಲಲ್ಲಿ ನೆರಳು ಗಿಡ ಮರಗಳು ಇರುತ್ತವೆ. ಹಾಲನ್ನು ಹಿಂಡುವಾಗ ಹಾಗೂ ಹಾರೈಕೆ ಮಾಡುವಾಗ ಆಶ್ರಯ ಕೊಡಲು, ಕಡು ಬಿಸಿಲು ಇಲ್ಲವೆ ಮಳೆಯಿಂದ ರಕ್ಷಣೆ ಪಡೆಯಲು ಅನುಕೂಲವಾಗುವಂತೆ ಮೇಲ್ಛಾವಣಿ ನಿರ್ಮಿಸುತ್ತಿದ್ದರು. ಹಾಗಾಗಿ ಈ ಪದ್ಧತಿಯಿಂದ ದನಗಳು ಉಲ್ಲಾಸಿತವಾಗಿ ಸಮಯವನ್ನು ಕಳೆಯುತ್ತಿದ್ದವು. ಈ ಪದ್ಧತಿಯನ್ನು ದೀವರು ಹಿಂದಿನ ಬದುಕಿನಲ್ಲಿ ರೂಢಿಸಿಕೊಂಡಿದ್ದಾರೆ. ಆದರೆ ಈಗ ಬದಲಾವಣೆಯಾಗಿದೆ.

ಎರಡನೇದು ಸಾಂಪ್ರದಾಯಿಕ ಪದ್ಧತಿ ಬುಡಕಟ್ಟು ಸಮುದಾಯದವರಾದ ದೀವರು ತಮ್ಮ ಮನೆಯ ಹಿಂದೆಯೇ ದನಗಳ ಮನೆಯನ್ನು ನಿರ್ಮಿಸಿಕೊಂಡಿರುತ್ತಾರೆ. ಪ್ರತಿ ಪ್ರಾಣಿಗೂ ನಿಲ್ಲಲು ಪ್ರತ್ಯೇಕ ಸ್ಥಳವನ್ನು ನಿಗದಿಪಡಿಸಲಾಗುತ್ತದೆ. ದನಗಳನ್ನು ಹಗ್ಗ ಇಲ್ಲವೆ ಸರಪಳಿಗಳಿಂದ ಕಟ್ಟುತ್ತಾರೆ. ಕೊಟ್ಟಿಗೆಯಲ್ಲಿ ಯಥೇಚ್ಛವಾಗಿ ಅಡ್ಡಾಡಲು ಸ್ಥಳಾವಕಾಶ ಮಾಡಿಕೊಂಡಿರುತ್ತಾರೆ. ಮೂತ್ರ ಹಾಗೂ ಸಗಣಿ ವಿಸರ್ಜಿಸಲು ಮತ್ತು ಪಶುಗಳ ಪಾಲನೆ ಕಾರ್ಯಕ್ಕಾಗಿ ಕೊಟ್ಟಿಗೆಯಲ್ಲಿ ಸಾಕಷ್ಟು ಸ್ಥಳದ ವ್ಯವಸ್ಥೆ ಇರುತ್ತದೆ. ಆಕಳು, ಎಮ್ಮೆ, ಎತ್ತು ಮತ್ತು ಕರುಗಳಿಗೆ, ಕುರಿಗಳಿಗೆ, ಆಡುಗಳಿಗೆ, ಕೋಳಿಗಳಿಗೆ ಪ್ರತ್ಯೆಕ ವಸತಿ ಸೌಕರ್ಯ ಒದಗಿಸುವುದು ಅವರಲ್ಲಿ ಕಂಡುಬರುತ್ತದೆ.

**ಕೊಟ್ಟಿಗೆಯ ಸ್ಥಳದ ಆಯ್ಕೆ:** ಕೊಟ್ಟಿಗೆಯನ್ನು ನಿರ್ಮಿಸ ಬೇಕೆಂದಿರುವ ಸ್ಥಳ ಆದಷ್ಟು ಎತ್ತರದಲ್ಲಿರಬೇಕು. ಅಲ್ಲದೆ ವಾಸದ ಮನೆಯಿಂದ ದೂರವಿರಬೇಕು. ''ದನಕರುಗಳನ್ನು ಹೊರಹೋಗಲು ಅನುಕೂಲವಾಗುವಂತಿರಬೇಕು. ಅತೀ ವೇಗದ ಗಾಳಿಯನ್ನು ಪಡೆಯಬಲ್ಲ ಎತ್ತರವಾದ ಮರಗಳು ಈ ಸ್ಥಳದ ಸುತ್ತಲೂ ಇರಬೇಕು. ಒಂದೊಮ್ಮೆ ಇಂಥ ಮರಗಳು ಇಲ್ಲಿದಿದ್ದಲ್ಲಿ ಶೀಘ್ರಗತಿಯಿಂದ ಬೆಳೆಯಬಲ್ಲ ಮರಗಳ ಸಸಿಗಳನ್ನು ನೆಡಬೇಕು.''[೧೧] ಆದರೆ ದೀವರು ದನಗಳ ಮನೆಯನ್ನು ತಮ್ಮ ಮನೆಯ ಜೊತೆಗೆ ನಿರ್ಮಿಸಿಕೊಂಡು ಅವುಗಳಿಗೆ, ಆಶ್ರಯ ಆರೈಕೆಯನ್ನು ಮಾಡುತ್ತಾರೆ. ಮತ್ತು ಅವುಗಳನ್ನು ಪೂಜ್ಯ ಭಾವನೆಯಿಂದ ಕಾಣುತ್ತಾರೆ. ಇದು ದೀವರ ಸಮುದಾಯದ ಪಶುಪಾಲನೆಯ ಗುಣವನ್ನು ಪ್ರತಿಬಿಂಬಿಸುತ್ತದೆ.

೨. **ಕೊಟ್ಟಿಗೆಯ ನಕ್ಷೆ:** ದನಕರುಗಳ ಸಂಖ್ಯೆ, ಮಾಲೀಕನ ಆರ್ಥಿಕ ಸ್ಥಿತಿ ಮತ್ತು ಅವನ ಆಯ್ಕೆ ಇವುಗಳ ಮೇಲಿಂದ ಕೊಟ್ಟಿಗೆಯ ರಚನೆಯನ್ನು ನಿರ್ಮಿಸಿಕೊಂಡಿರುತ್ತಾರೆ. ಒಂದೆರಡು ದನಕರುಗಳಿದ್ದರೆ ಸಣ್ಣ ಗುಡಿಸಲೊಂದನ್ನು ಮೂಲೆ ಮಾಡಿಕೊಂಡಿರುತ್ತಾರೆ. ಇಲ್ಲವೇ ಮನೆಯ ಜೊತೆಗೆ ಆಧರಿಸಿ ಮಾಡೊಂದನ್ನು ಇಳಿಸಿಕೊಳ್ಳುತ್ತಾರೆ. ಪ್ರಾಣಿಗಳ ಸಂಖ್ಯೆ ಹತ್ತು-ಹನ್ನೆರಡುನ್ನು ಮೀರಿದ್ದರೆ ಎರಡು ಸಾಲುಗಳಲ್ಲಿ ಕಟ್ಟಲು ಅನುಕೂಲವಾಗುವಂತೆ ಮಾಡಿಕೊಂಡಿರುತ್ತಾರೆ.

೩. **ದನಗಳನ್ನು ಕಟ್ಟುವ ವ್ಯವಸ್ಥೆ:** ಬಾಲಪದ್ಧತಿ: ಹೆಸರೇ ಸೂಚಿಸುವಂತೆ ಎರಡು ಸಾಲಿನಲ್ಲಿರುವ ದನಗಳ ಮುಖಗಳು ಹೊರಬದಿ ಗೋಡೆಯ ಕಡೆಗಿರುತ್ತವೆ. ಪರಿಣಾಮವಾಗಿ ದನಗಳು ಕಾಲುಗಳು ಒಂದೇ ಬದಿಗೆ ಬರುತ್ತವೆ. ಈ ಪದ್ಧತಿಯಿಂದ ಪ್ರಾಣಿಗಳನ್ನು ಕಟ್ಟಿದರೆ ಕೆಲವು ಅನುಕೂಲತೆಗಳಿವೆ. ಹಾಲನ್ನು ಹಿಂಡುವುದು, ಕೊಟ್ಟಿಗೆಯನ್ನು

ಸ್ವಚ್ಛಗೊಳಿಸುವುದು, ಪ್ರಾಣಿಗಳನ್ನು ಪರಿವೀಕ್ಷಣೆ ಮಾಡುವುದು ಇತ್ಯಾದಿ ಕೆಲಸಗಳನ್ನು ಸುಲಭವಾಗಿ ಮಾಡಲು ಸಾಧ್ಯವಾಗುತ್ತದೆ. ಇದಲ್ಲದೆ ದನಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಶುದ್ಧಗಾಳಿ ದೊರೆಯುತ್ತದೆ. ಎಂಬುದು ಅವರ ದೃಷ್ಟಿಕೋನವಾಗಿದೆ.

**ಮುಖಾಮುಖಿ ಪದ್ಧತಿ:** ಒಂದರ ಮುಖ ಇನ್ನೊಂದರ ಎದುರು ಬರುವಂತೆ ದನಗಳನ್ನು ಕಟ್ಟುವ ವ್ಯವಸ್ಥೆ ಕೃಷಿಕರಾದ ದೀವರ ಸಮುದಾಯದಲ್ಲಿದೆ. ಈ ಬಗೆಯನ್ನು ಅನುಸರಿಸುವುದರಿಂದ ಪಶುಗಳಿಗೆ ಆಹಾರ ಕೊಡುವುದು ಸುಲಭ. ಅಲ್ಲದೆ ಎರಡು ಸಾಲುಗಳಲ್ಲಿ ಪ್ರಾಣಿಗಳ ಮುಖಗಳು ಒಂದೆಡೆ ಇರುವುದರಿಂದ ನೋಡುವವರ ಕಣ್ಣುಗಳಿಗೆ ಮುದ ನೀಡುತ್ತದೆ ಎಂಬ ಭಾವನೆ ಇವರದಾಗಿದೆ. "ಜೊತೆಗೆ ಸುಲಭವಾಗಿ ಮೇವು, ನೀರು, ಕುಡಿಸಲು ಮತ್ತು ಹಾಲು ಹಿಂಡಲು ದನಗಳಿಗೆ ಮಲಗಲು ವ್ಯವಸ್ಥೆ ದೊರಕುವುದು."[೨] ಎಂಬುದು ಅವರ ಕಂಡುಕೊಂಡ ದೃಷ್ಟಿಕೋನವಾಗಿದೆ. ಇತ್ತೀಚಿಗೆ ಎಲ್ಲರಲ್ಲಿಯೂ ಈ ಎರಡು ಪದ್ಧತಿ ಬಳಕೆಯಲ್ಲಿದೆ.

**ಪಶುಗಳ ವಿಶೇಷ ಆರೈಕೆ**

ಸುಯೋಗ್ಯ ವಸತಿ, ಪೌಷ್ಟಿಕ ಆಹಾರ, ಪರೋಪಕೀಟಗಳ ನಿವಾರಣೆ, ವಿವಿಧ ರೋಗಗಳಿಂದ ರಕ್ಷಣೆ ಇವೆಲ್ಲ ಸುಮಧುರ ಪಶುಪಾಲನೆಯ ಪ್ರಮುಖ ಭಾಗವಿದ್ದಂತೆ. ಬೆಳವಣಿಗೆಯ ವಿವಿಧ ಹಂತಗಳಲ್ಲಿ ದನಕರಗಳನ್ನು ವಿಶೇಷ ಆರೈಕೆಯ ಪಶುನಿರ್ವಹಣೆಯ ಒಂದು ಮುಖ್ಯ ಅಂಶ ಎಂಬುದನ್ನು ಗಮನದಲ್ಲಿಡಬೇಕು. ವಿಶೇಷ ಆರೈಕೆಗೆ ಸಂಬಂಧಿಸಿದ ಕೆಲವು ವಿವರಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಗರ್ಭಧರಿಸಿದ ಪಶುಗಳ ಆರೈಕೆ:**

ಗರ್ಭಧರಿಸುವ ದನಗಳನ್ನು ಈ ರೀತಿ ಪಟ್ಟಿಮಾಡಲಾಗಿದೆ. ಆಕಳು, ಎಮ್ಮೆ, ಕುರಿ, ಆಡು ಇವುಗಳ ಬಗ್ಗೆ ಸೂಕ್ಷ್ಮವಾದ ಎಚ್ಚರಿಕೆಯನ್ನು ಮತ್ತು ಆರೈಕೆಯನ್ನು ಕೃಷಿಸಮುದಾಯವಾದ ದೀವರು ವಹಿಸಿಕೊಂಡಿರುತ್ತಾರೆ. ಈ ಸಂದರ್ಭದಲ್ಲಿ ದೀವರ ಸ್ತ್ರೀಯ ಪಾತ್ರ ತುಂಬ ಮುಖ್ಯವಾಗಿ ಕಂಡುಬರುತ್ತದೆ. ಒಬ್ಬ ತಾಯಿ ತನ್ನ ಮಗುವನ್ನು ಹೇಗೆ ಲಾಲನೆ-ಪಾಲನೆ ಮಾಡುತ್ತಾಳೋ ಹಾಗೆಯೇ ದನಗಳ ಲಾಲನೆ-ಪಾಲನೆ ಆರೈಕೆಯನ್ನು, ಬಹು ಸೂಕ್ಷ್ಮತೆಯಿಂದ ಮಾಡುತ್ತಾಳೆ.

ಗರ್ಭದ ದನಗಳೊಡನೆ ಬಹು ಆತ್ಮೀಯತೆಯಿಂದ ನಡೆದುಕೊಳ್ಳುತ್ತಾರೆ. ಹೆದರಿಸುವುದು, ಬಯ್ಯುವುದು, ಹೊಡೆಯುವುದು, ಒದೆಯುವುದು ಇತ್ಯಾದಿ ಅನುಚಿತ ಕಾರ್ಯಗಳನ್ನು ಮಾಡಬಾರದು. ಅದರಂತೆಯೇ ಸಾಕು ಪ್ರಾಣಿಯಾದ ನಾಯಿಯನ್ನು ಬಹಳ ಪ್ರೀತಿಯಿಂದ ಕಾಣುತ್ತಾರೆ. ಅದರ ಆರೈಕೆಯನ್ನು ಮಗುವಿನಂತೆ ನೋಡಿಕೊಳ್ಳುವರು. ಕಾರಣ ನಾಯಿಯು ನಂಬಿಗೆಯ ಪ್ರಾಣಿ ಜೊತೆಗೆ ಮನೆಯ ರಕ್ಷಣೆಯನ್ನು ಮತ್ತು ಬೇಟೆಗೆ ಪ್ರಚೋದನೆಯನ್ನು ನೀಡುವುದರಿಂದ ಇದರ ಆರೈಕೆಯನ್ನು ವ್ಯವಸ್ಥಿತವಾಗಿ ಮಾಡುವರು. ಹಾಗೆಯೇ ಗರ್ಭದ ದನಗಳಿಗೆ ಅತೀ ದೂರ ಓಡಿಸಿಕೊಂಡು ಬರುವರು. ಒಟ್ಟಿನಲ್ಲಿ ಈ ಹಂತದಲ್ಲಿ ವಿಶೇಷವಾದ ಆರೈಕೆಯನ್ನು ಮಾಡುವರು.

**ಆಹಾರದ ಪೂರೈಕೆ:** "ದನಗಳು ಕರು ಹಾಕಲು ಒಂದು ವಾರವಿರುವಾಗ ಆಹಾರದಲ್ಲಿ ಹಿಡಿತವಿರುವುದು ಅವಶ್ಯಕ. ಈ ಅವಧಿಯಲ್ಲಿ ನೀರಿನಲ್ಲಿ ನೆನಸಿದ ತೌಡು ಮತ್ತು ಹಸಿರು ಹುಲ್ಲನ್ನು ಕೊಡುವುದು ವಿಹಿತ. ದೊಡ್ಡ

ಪ್ರಮಾಣದಲ್ಲಿ ಕೊಡಬೇಕಾಗುವಂಥ ಒಣಹುಲ್ಲು, ಕರುಗಳಂತಹ ಆಹಾರವನ್ನು ತಿನ್ನಿಸುವುದರಿಂದ ಪಾದಕಾಲಿಗಳು ಹಿಗ್ಗಿ ಕರು ಹೊರಬರಲು ಆತಂಕ ಉಂಟಾಗುವ ಸಂದರ್ಭ ಹೆಚ್ಚು.''[೧] ಗರ್ಭದ ದನಗಳಿಗೆ ಒಣಗಿದ ಬಿಳಿಜೋಳದ ದಂಟು ಮತ್ತು ಭತ್ತದ ಹುಲ್ಲನ್ನು ಮತ್ತು ಇತರೆ ವಿವಿಧ ಹುಲ್ಲುಗಳನ್ನು ಹಾಕುವರು. ಇದರಿಂದ ದನಗಳಿಗೆ ಸಲೀಸಾಗಿ ಹೆರಿಗೆ ಆಗುವುದು ಎಂಬುದನ್ನು ಮನಗಂಡಿದ್ದಾರೆ.

**ಕರುಗಳ ಆರೈಕೆ:** ಆಕಳು ಮತ್ತು ಎಮ್ಮೆಗಳ ಪಾಲನೆಯನ್ನು ಉತ್ತಮ ರೀತಿಯಿಂದ ಮಾಡಿದರೆ ಬಲಿಷ್ಠ ಮತ್ತು ನಿರೋಗಿ ಕರುಗಳು ಹುಟ್ಟುತ್ತವೆ. ಇಂಥ ಕರುಗಳ ಆರೈಕೆಯನ್ನು ಸರಿಯಾಗಿ ಮಾಡಿದರೆ ಅವು ತೀವ್ರಗತಿಯಿಂದ ಬೆಳೆದು ಉತ್ತಮ ಆಕಳು ಇಲ್ಲವೆ ಎಮ್ಮೆಗಳಾಗಿ ಅಧಿಕ ಹಾಲನ್ನು ಉತ್ಪಾದಿಸುತ್ತವೆ. ಆದ್ದರಿಂದ ಕರುಗಳ ಆರೈಕೆಗೆ ಬಹು ಮಹತ್ವವಿದೆ ಎನ್ನುತ್ತಾರೆ.

**ಗಿಣ್ಣದ ಹಾಲಿನ ಮಹತ್ವ:**

ಗಿಣ್ಣದ ಹಾಲು ಸಾದಾ ಹಾಲಿಗಿಂತ ಹಲವಾರು ಗುಣಗಳಲ್ಲಿ ಭಿನ್ನವಾಗಿದೆ. ''ಗಿಣ್ಣದ ಹಾಲಿನಲ್ಲಿ ಸಾದಾ ಹಾಲಿನಲ್ಲಿ ಇರುವುದಕ್ಕಿಂತ ಮೂರರಿಂದ ಐದು ಪಟ್ಟು ಅಧಿಕ ಸಸಾರಜನಕ ಇರುತ್ತದೆ. ಗ್ಲೋಬಿನ್ ಸಾರಜನಕ ಪ್ರಮಾಣ ಹೆಚ್ಚು. ಇದಲ್ಲದೆ ತಾಮ್ರ, ಕಬ್ಬಿಣ, ಮ್ಯಾಗ್ನಿಸಿಯಂ, ಮ್ಯಾಂಗನೀಸ್ ಮೊದಲಾದ ಇತರ ದ್ರವ್ಯಗಳ 'ಏ' ಮತ್ತು ಇತರೆ ವಿಷಯಗಳು ಸಾದಾ ಹಾಲಿನಲ್ಲಿ ಇರುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಇರುತ್ತವೆ''.[೨] ಗಿಣ್ಣದ ಹಾಲಿಗೆ ವಿಶೇಷ ಗುಣವಿರುವುದರಿಂದ ಕರುವಿನ ಪಾದಕಾಂಗದಲ್ಲಿರುವ ಮೊದಲ ಮೊಲವು ಸುಲಭವಾಗಿ ಹೊರಬರಲು ಸಹಾಯಕವಾಗುತ್ತದೆ. ರೋಗಾಣು ನಾಶಪಡಿಸಬಲ್ಲ ಪದಾರ್ಥವು ಗಿಣ್ಣದ ಹಾಲಿನಲ್ಲಿರುವುದರಿಂದ ಕರುವನ್ನು ಹಲವಾರು ಸಾಂಕ್ರಮಿಕ ರೋಗಗಳಿಂದ ಕಾಪಾಡುವ ಸಾಮರ್ಥ್ಯ ಗಿಣ್ಣದ ಹಾಲಿನಲ್ಲಿದೆ. ಆದುದರಿಂದ ಕರುವಿಗೆ ಗಿಣ್ಣದ ಹಾಲನ್ನು ತಪ್ಪದೇ ಪೂರೈಸಬೇಕು.''

ದನಗಳು ಕರು ಹಾಕಿದಾಗ ವಿಶೇಷವಾಗಿ ಗಿಣ್ಣದ ಅಡುಗೆಯನ್ನು ಮಾಡುವರು. ಮತ್ತು ಸಂತೋಷಕ್ಕಾಗಿ ಸಂಬಂಧಿಕರಿಗೆ ಮತ್ತು ನೆಂಟರಿಗೆ ಗಿಣ್ಣವನ್ನು ಕೊಡುವರು. ಇದು ಅವರ ವಾಡಿಕೆ. ದೀವರು ಗಿಣ್ಣದ ಅಡುಗೆಯಲ್ಲಿ ಪಾಳಗಿಣ್ಣ ಮತ್ತು ಸಾದಾಗಿಣ್ಣದ ಅಡುಗೆಯೆಂದು ಮಾಡುವರು. ಗಿಣ್ಣವನ್ನು ಮೊದಲು ಮನೆಯ ದೇವರಿಗೆ ಮತ್ತು ಹೊಲದಲ್ಲಿರುವ ದೇವರುಗಳಿಗೆ ಎಡೆಯನ್ನು ಹಿಡಿದು ಪೂಜೆ ಮಾಡುವರು. ನಂತರ ಊಟವನ್ನು ಮಾಡುವರು.

ದನವು ಕಾಡಿನಲ್ಲಿ ಅಥವಾ ಮೇಯಲು ಹೋದ ಜಾಗದಲ್ಲಿ ಕರುವನ್ನು ಹಾಕಿದರೆ ಅದನ್ನು ದನಕಾಯುವ ವ್ಯಕ್ತಿ ಮನೆಗೆ ತಂದು ಕೊಡುವನು. ಆಗ ಅವನಿಗೆ ಹೊಸಬಟ್ಟೆಯನ್ನು ತಂದು ಮನೆಗೆ ಕರೆದು ಸ್ನಾನ ಮಾಡಿಸಿ, ಗಿಣ್ಣದ ಊಟ ಮಾಡಿಸಿ ಹಣವನ್ನು ಕೊಟ್ಟು ಕಳಿಸುವರು. ಹಾಗೆಯೇ ದನವು ಎಲ್ಲಿ ಕರುವನ್ನು ಹಾಕಿರುತ್ತದೆಯೋ ಅಲ್ಲಿಯ ಸುತ್ತಮುತ್ತಲಿರುವ ದೇವರ ಹೆಸರನ್ನು ಇಡುವುದು ವಾಡಿಕೆಯಿದೆ. ಇದು ದೀವರ ಪಶುಪಾಲನೆಯ ಸಮೃದ್ಧಿಯ ಸಂಕೇತವಾಗಿದೆ.

**ಆಹಾರದ ಪೂರೈಕೆ:** ದೈನಂದಿನ ಕಾರ್ಯಗಳನ್ನು ನೆಡೆಸುತ್ತ ನಿರೋಗಿಯಾಗಿ ಜೀವಿಸಲು ಪಶುಗಳಿಗೆ ಆಹಾರಬೇಕು. ಅದೇ ರೀತಿ ಬೆಳವಣಿಗೆ ಯಾಗಲು ಅಭಿವೃದ್ಧಿ ಹೊಂದಲು, ಹಾಲನ್ನು ಉತ್ಪಾದಿಸಲು, ಮತ್ತು ಕೃಷಿಕಾರ್ಯಗಳನ್ನು ಮಾಡಲು ಅವಶ್ಯವಿರುವ ಸಾಮರ್ಥ್ಯವನ್ನು ಗಳಿಸಲು ಆಹಾರಬೇಕು. ಈ ದೈವಿಕ ಕಾರ್ಯಗಳು ಸರಿಯಾಗಿ ಸಾಗಲು ಉತ್ತಮ ಆಹಾರವನ್ನು ಒದಗಿಸುವುದು ಪಶುಪಾಲನೆಯ ಪ್ರಮುಖ ಕೆಲಸಗಳಲ್ಲೊಂದು. ಪಶುಪಾಲನೆಗೆಂದು ವ್ಯಯಮಾಡುವ ಹಣದ ಬಹುಭಾಗವು ಆಹಾರ ಪೂರೈಕೆಗೆ ಒದಗಿಸುವುದು ಖಚಿತ. ಆದ್ದರಿಂದ

ಪೌಷ್ಠಿಕ ಅಸಮತೋಲನ ಆಹಾರವನ್ನು ಪೂರೈಸುವುದರ ಕಡೆಗೆ ಲಕ್ಷ್ಯಕೊಡುವುದಲ್ಲದೆ, ಆಹಾರದ ಬಗ್ಗೆ ಆಗುವ ನಿರ್ಜನ್ಯ ತಗ್ಗಿಸುವುದರ ಕಡೆಗೂ ಗಮನ ಹರಿಸಿದ್ದರೆ ಪಶುಪಾಲನೆ ವೃತ್ತಿಯಿಂದ ದೊರೆಯುವ ಲಾಭಾಂಶವನ್ನು ಅಧಿಕಗೊಳಿಸಲು ಸಾಧ್ಯವಾದೀತು.

೧. **ನೀರು:** ನೀರು ಪಶುಗಳ ಜೀವಾಳ. ಪ್ರಾಣಿಗಳ ತೂಕದ ಪ್ರತಿಶತ ಸುಮಾರು ೬೫ರಷ್ಟು ನೀರೇ ಎಂಬುದು ಗಮನಿಸಬೇಕಾದ ಸಂಗತಿ. ಘನ ಆಹಾರವಿಲ್ಲದೆ ಪ್ರಾಣಿಯು ನೂರು ದಿನಗಳಿಗಿಂತಲೂ ಹೆಚ್ಚು ಸಮಯ ಜೀವಿಸಬಲ್ಲದು. ಆದರೆ ನೀರಿನ ಪೂರೈಕೆಯನ್ನು ತಡೆಹಿಡಿದರೆ ಪ್ರಾಣಿಯು ಐದರಿಂದ ಹತ್ತು ದಿನಗಳಲ್ಲಿ ಮೃತಪಡುವುದೆಂದು ಪ್ರಯೋಗಗಳಿಂದ ಕಂಡು ಬಂದಿದೆ. ಕುಡಿಯಲು ಕೊಟ್ಟ ನೀರು, ಆಹಾರದಲ್ಲಿರುವ ಹಸಿ, ಶಾರೀರಿಕ ಕ್ರಿಯೆಗಳಿಂದ ಉತ್ಪನ್ನವಾದ ಜಲ ಇವು ಪ್ರಾಣಿಗಳಿಗೆ ನೀರಿನ ಪೂರೈಕೆಯಾಗುವ ಪ್ರಮುಖ ಮೂಲಗಳು

ಪ್ರಾಣಿಯ ಶರೀರದಲ್ಲಿ ನೀರು ಹಲವಾರು ಕಾರ್ಯಗಳನ್ನು ನೆರವೇರಿಸುತ್ತದೆ. ನೀರಿನ ಕೊರತೆಯಾದರೆ ಪಚನಕಾರ್ಯ ವಿಳಂಬವಾಗುವುದು. ಪಚನವಾದ ಆಹಾರವು ರಕ್ತದೊಡನೆ ಸರಿಯಾಗಿ ಸೇರಲು ಹಾಗೂ ದೇಹಕ್ಕೆ ಪ್ರಯೋಜನಕಾರಿಗಳಲ್ಲದ ಕಲ್ಮಷಗಳು ಬೆವರು, ಮಲಮೂತ್ರದ ರೂಪಗಳಲ್ಲಿ ಸುಲಭವಾಗಿ ಹೊರಬರುವುದು, ನೀರಿನ ಕೊರತೆ ಮುಂದುವರಿದರೆ ರಕ್ತವು ಗಟ್ಟಿಯಾಗತೊಡಗುವುದಲ್ಲದೆ ದೇಹದ ಉಷ್ಣತಾಮಾನವು ಏರತೊಡುಗುವುದು.

೨. **ಮೇವುಗಳು:**

**ಹಸಿರು ಮೇವುಗಳು:**

ಅಲಸಂದಿ, ಚವಳಿ, ಕುದುರೆಮೆಂತೆ, ಮುಂತಾದವು ಮೊದಲನೆಯ ಬಗೆಯ ಹಸಿರು ಮೇವುಗಳು. ಜೋಳ, ಮುಸುಕಿನ ಜೋಳ, ಸಜ್ಜೆ, ಸುಧಾರಿತ ತಳಿಗಳ ಹುಲ್ಲು ಮುಂತಾದವು ಹಸಿರು ಮೇವಿನ ಎರಡನೇ ಗುಂಪಿಗೆ ಸೇರಿದ ಬೆಳೆಗಳು. ಇವುಗಳು ದನಗಳಿಗೆ ಉತ್ತಮ ರೀತಿಯ ಆಹಾರವಾಗಿವೆ. ಈ ಮೇವುಗಳಿಂದ ದನಗಳು ಆರೋಗ್ಯ ಹಾಗೂ ಧೃಡಕಾಯವಾಗಿರುತ್ತವೆ ಎಂಬ ನಂಬಿಕೆ ಅವರದಾಗಿದೆ.

**ಒಣಮೇವುಗಳು:** ಒಣಮೇವುಗಳಲ್ಲಿ ಒಣಗಿದ ಮೇವು ಮತ್ತು ಒಣಗಿಸಿಟ್ಟ ಮೇವು ಎಂಬ ಎರಡು ವಿಧವನ್ನು ರೂಪಿಸಿದ್ದಾರೆ. ಜೋಳ, ಭತ್ತ, ರಾಗಿ, ಸಜ್ಜೆ, ನವಣೆ, ಅಲಸಂದಿ, ಶೇಂಗಾ ಅದರಂತೆಯೇ ಒಣಗಿ ನಿಂತ ಹುಲ್ಲು ಕರಡ ಇವುಗಳಿಗೆ ಒಣಗಿದ ಮೇವುಗಳೆನ್ನುವರು.

**ದಾಣಿಗಳು:** ಪಶುಗಳ ಬೆಳವಣಿಗೆ ಅಭಿಮುಖ ಮತ್ತು ಉತ್ಪಾದನೆಗಳಿಗೆ ಬೇಕಾಗುವ ಪೋಷಕಗಳಾದ ಕೊಬ್ಬು ಮತ್ತು "ಸಾರಜನಕಗಳನ್ನು ಅಧಿಕ ಪ್ರಮಾಣದಲ್ಲಿ ಹೊಂದಿರುವ ವಸ್ತು ಅಥವಾ ವಸ್ತುಗಳ ಮಿಶ್ರಣಕ್ಕೆ ದಾಣಿ ಎನ್ನಬಹುದು. ಇವು ಪ್ರಮುಖವಾಗಿ ಶಕ್ತಿಯನ್ನೊದಗಿಸಬಲ್ಲ ದಾಣಿಗಳಿರಬಹುದು. ಅಥವಾ ಸಸಾರಜನಕ ಪ್ರಧಾನ ದಾಣಿಗಳಿರಬಹುದು ನೀರಿನ ಪ್ರಮಾಣ ದಾಣಿಯಲ್ಲಿ ಕಡಿಮೆ."[೧೫]

**ಶಕ್ತಿಯ ಪ್ರಾಬಲ್ಯವಿರುವ ದಾಣಿಗಳು** ಜೋಳ ಮತ್ತು ಗೋವಿನ ಜೋಳಗಳ ಕಾಳುಗಳು ಅಕ್ಕಿಯ ನುಚ್ಚು ಇತ್ಯಾದಿಗಳು ಈ ಗುಂಪಿಗೆ ಸೇರಿದ ದಾಣಿಗಳು. ಈ ಗುಂಪಿಗೆ ಸೇರಿದ ಇತರೆ ತೊಗರಿ, ಅವರೆ ಮೊದಲಾದ ದ್ವಿದಳ ಧಾನ್ಯಗಳು ಹಾಗೆಯೇ ಅಕ್ಕಿಯ, ಗೋದಿಯ, ತೌಡು ಬೆಳಗಳ ನುಚ್ಚು ಮಿಶ್ರಿತ ಹೊಟ್ಟು, ಇವು ಈ ಗುಂಪಿಗೆ ಸೇರಿದ ಇತರೆ ದಾಣಿಗಳು. ಇವುಗಳನ್ನು ದೀವರು ಪಶುಪಾಲನೆಗೆ ಆಹಾರವಾಗಿ ಉಪಯೋಗಿಸುವರು.

**ಅಸಂಪ್ರದಾಯಿಕ ಆಹಾರಗಳು:** ಸೂರ‍್ಯಕಾಂತಿ ಹಿಂಡಿ, ಎಳ್ಳುಹಿಂಡಿ, ಮಡಿ, (ಹುರುಳಿ ಮತ್ತು ಜೋಳ) ದಾಣೆ (ಹುರುಳಿ ನುಚ್ಚು) ಹತ್ತಿಕಾಳು ಹಿಂಡಿ, ತೊಗರಿಹಿಂಡಿ, ಭತ್ತದ ಹುಲ್ಲು, ಜೋಳದ ರವದಿ, ಮುಸುರಿ ಇತ್ಯಾದಿ ಹೈನುಗಾರಿಕೆ ಹೆಚ್ಚಿಸಲು ಸೂಕ್ತವಾದ ಪಶುತಿಂಡಿಗಳಾಗಿವೆ ಎನ್ನುತ್ತಾರೆ.

**ಪಶುಗಳ ರೋಗಗಳು:**

ಗಂಟಲು ಬೇನೆ, ಕೆಚ್ಚಲುಬಾವು, ಚಪ್ಪೆಬೇನೆ, ದೊಡ್ಡರೋಗ, ಕಾಲು ಬೇಯಬೇನೆ, ಹುಚ್ಚುನಾಯಿ ರ‍್ಯಾಬೀಸ್, ಹಸುವಿನ ಅಮ್ಮ ವಾಯು, ಕ್ಷಯರೋಗ, ಜ್ವರ ಬೇನೆ, ಗಳಲಬೇನೆ, ನೆರಡಿಬೇನೆ, ಹೊಟ್ಟೆಹುಬ್ಬರ ಬೇನೆ, ಕಾರಲು ಹುಳು ರೋಗ, ದನಗಳ ಕಟ್ಟಿ, ಮೂತ್ರನಾಳದಲ್ಲಿ ಹುಳು, ಮಾಸಚೀಲ ಬೀಳದಿರುವುದು, ಗರ್ಭದ ಕೋಶದ ಉರಿಯೂತ, ಕುಂಟುಬೇನೆ, ಮೊಲೆ ಹೊಡೆಯುವುದು, ಕತ್ತಿನ ಮೇಲೆ ಗಂಟುಗಳು

**ದೊಡ್ಡರೋಗ:**ದೊಡ್ಡರೋಗ ಎಮ್ಮೆ ಮತ್ತು ಆಕಳಿಗೆ ಬರುವ ಅತಿ ಸಾಂಕ್ರಮಿಕ ರೋಗ. ಮಿಶ್ರತಳಿ ಆಕಳುಗಳು ಸ್ಥಾನಿಕ ಪಶುಗಳಿಗಿಂತ ಬಹು ಬೇಗನೆ ಈ ರೋಗದಲ್ಲಿ ಬಲಿಯಾಗುತ್ತವೆ. ಹೊರಗಿನಿಂದ ತಂದ ರೋಗಪೀಡಿತ ಪ್ರಾಣಿಗಳು ಕಲುಷಿತ (ಪಾತ್ರೆಗಳು) ಬಾನಿಗಳು ಮೂಲಕ ಈ ರೋಗವು ನಿರೋಗಿ ಪ್ರಾಣಿಗಳಿಗೆ ಪಸರಿಸುತ್ತದೆ.

**ಕಾಲು ಮತ್ತು ಬಾಯಿ ಒಡೆ ರೋಗ;** ಈ ರೋಗವು ಆಕಳು ಮತ್ತು ಎತ್ತುಗಳಿಗೆ ಬರುವುದು ಸಾಮಾನ್ಯಸಂಗತಿ ಆದರೆ ಎಮ್ಮೆಗಳು ಈ ರೋಗಕ್ಕೆ ತುತ್ತಾಗಿರುವುದು ಅಪರೂಪ. ಮಿಶ್ರತಳಿ ಆಕಳುಗಳು ಹೆಚ್ಚಾಗಿ ಸಾಯುತ್ತವೆ. ವರ್ಷದ ಯಾವುದೇ ಹಂಗಾಮಿನಲ್ಲಿ ಪ್ರಾಣಿಗಳಿಗೆ ರೋಗಗಳು ಬರಬಹುದು. "ರೋಗಾಣುಗಳಿಂದ ಕಲುಷಿತಗೊಂಡ ನೀರು, ಸಗಣಿ, ಮೇವು ಮುಂತಾದ ಅಂಶಗಳ ಮೂಲಕ ಇಲ್ಲವೆ ನೇರ ಸಂಪರ್ಕದಿಂದ ಈ ರೋಗವು ನಿರೋಗಿ ಪ್ರಾಣಿಗಳಿಗೆ ಅಂಟಬಹುದು. ಇಲಿಗಳು, ಮುಳ್ಳುಹಂದಿ, ಮತ್ತು ಹಕ್ಕಿಗಳು ಸಹಾ ರೋಗವಾಹಕಗಳಾಗಬಹುದು."[೨]

**ಪರಿಹಾರಗಳು:** ಬುಡಕಟ್ಟು ಸಮುದಾಯದವರಾದ ದೀವರು ಪಶುಗಳಿಗೆ ಕಾಯಲೆ ಬಂದಾಗ ತಮ್ಮಲ್ಲಿ ಕಂಡುಕೊಂಡ ಚಿಕಿತ್ಸಾಕ್ರಮವನ್ನು ಅಳವಡಿಸಿಕೊಂಡು ರೋಗಗಳನ್ನು ನಿವಾರಣೆ ಮಾಡುತ್ತಾರೆ. ಕೆಲವು ಫಲಿಸುತ್ತವೆ. ಮತ್ತೆ ಕೆಲವು ನಿವಾರಣೆಯಾಗದೆ ಇರುತ್ತವೆ. ಪರಿಣಾಮವಾಗಿ ಅವರು ಪಶು ಆಸ್ಪತ್ರೆಗಳಿಗೆ ಹೋಗಿ ಕಾಯಿಲೆಯನ್ನು ನಿವಾರಿಸಿಕೊಂಡು ಬರುತ್ತಾರೆ. ಒಟ್ಟಿನಲ್ಲಿ ದನಕರುಗಳು ಇಡೀ ಜವಾಬ್ದಾರಿಯನ್ನು ದೀವರು ತಮ್ಮ ಬದುಕಿನ ಅವಸ್ಥೆಯಲ್ಲಿ ಪ್ರತಿಬಿಂಬಿಸಕೊಂಡಿದ್ದಾರೆ.

ಬುಡಕಟ್ಟು ಸಮುದಾಯವಾದ ದೀವರು ಪಶುಪಾಲನೆಯನ್ನು ಆದಿಯಿಂದಲೆ ಪೂಜ್ಯ ಭಾವನೆಯಿಂದ ಕಂಡುಕೊಂಡು ಬಂದಿದ್ದಾರೆ. ಪಶುಪಾಲನೆಯೆಂಬುದು ದೀವರಿಗೆ ಅಂತರ್ಗತವಾಗಿ ಬಂದಿರುವುದು. ಇಡೀ ದೇಶದಲ್ಲಿಯೇ ಕಾಗೋಡ್ ಕ್ರಾಂತಿಯ ಕಿಡಿ ನೆಡೆದಿದ್ದು ಕೃಷಿಯ ಭೂಮಿಗಾಗಿ, ಅಲ್ಲಿ ಪ್ರಮುಖ ಪಾತ್ರವಹಿಸುವ ಎತ್ತುಗಳು, ಕೃಷಿ ಜೀವಂತಿಕೆಗೆ ಹಿಡಿದ ಕನ್ನಡಿ. ಈ ಹಿನ್ನೆಲೆಯಲ್ಲಿ ಪಶುಪಾಲನೆಗೂ ದೀವರಿಗೂ ನಿಕಟ ಸಂಬಂಧವಿದೆ.

**ರೋಗದ ಪರಿಹಾರೋಪಾಯಗಳು**

ದೀವರು ಕಾಡುಜನ್ಯ ವಸ್ತುಗಳಿಂದ ದೊರೆಯುವ ಗಿಡಮೂಲಿಕೆಗಳನ್ನು ಬಳಸಿ ಪಶುಗಳಿಗೆ ಚಿಕಿತ್ಸೆ ಮಾಡುವರು ಮತ್ತು ದನದ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಚಿಕಿತ್ಸೆ ಮಾಡಿಸುವರು. ಇವರು ಎರಡು ರೀತಿಯಲ್ಲಿ ಕಾರ‍್ಯಮಾಡಿ ಪಶುಗಳಿಗೆ ರಕ್ಷಣೆ ಕೊಡುವರು. ಒಟ್ಟಿನಲ್ಲಿ ಪಶುಗಳ ಆರೈಕೆ ದೀವರಿಗೆ ಒಂದುರೀತಿಯ ಸಂತಸವನ್ನು ತಂದು ಕೊಡುತ್ತದೆ. ಎನ್ನುತ್ತಾರೆ.

**ಅಡಿಟಿಪ್ಪಣಿಗಳು**

೧. ದೀಕ್ಷಿತ್ ಎ.ಎಲ್., ಮಲೆನಾಡಿನ ಪಶುಪಾಲನೆ, ಸ್ರು. ೨೮

೨. ಕೈಂತಜೆ ವಿಷ್ಣುಭಟ್., ಕೃಷಿಲೋಕ ಪ್ರವೇಶ, ಪು. ೨೧೩

೩. ವೆಂಕಟರಾವ್ ಡಿ., (೧೯೮೫), ಕೃಷಿಬೆಳವಣಿಗೆ, ಪು. ೪೮

೪. ಲೌಕಿಕ -ಅಲೌಕಿಕ (೨೦೦೧), ಪು. ೮೭

೫. ಪೂರ್ವೋಕ್ತಿ., ಪು. ೮೭

೬. ಬೈರಪ್ಪ ಕೆ., ಸಮಾಜಶಾಸ್ತ್ರ ಪರಿಚಯ, (೧೯೮೯), ಪು. ೨೧೩

೭. ಪೂರ್ವೋಕ್ತಿ ೪೫ನೇ ಟಿಪ್ಪಣಿ., ಪು. ೨೦೯

೮. ಪುರಾಣನಾಮ ಚೂಡಾಮಣಿ., ೧೯೪೧, ಪು. ೩೪೫

೯. ಶಂಭಾಕೃತಿ ಸಂಪುಟ., (೧೯೯೯), ಪು. ೧೪೨

೧೦. ದೀಕ್ಷಿತ್ ಎ.ಎಲ್., ಮಲೆನಾಡಿನಲ್ಲಿ ಪಶುಪಾಲನೆ, ಪು. ೧೬

೧೧. ಅದೇ., ಪು. ೧೭

೧೨. ಕೀದೂರು ವೇಣುಗೋಪಾಲ ಶೆಟ್ಟಿ., ದಕ್ಷಿಣ ಕನ್ನಡದಲ್ಲಿ ದನಗಳ ಸಾಕಣಿಕೆ, ಪು. ೫೯

೧೩. ಅದೇ., ೨೭

೧೪. ದೀಕ್ಷಿತ್ ಎ.ಎಲ್., ಮಲೆನಾಡಿನಲ್ಲಿ ಪಶುಪಾಲನೆ, ಪು. ೨೯

೧೫. ಅದೇ., ಪು. ೪೧

೧೬. ಎನ್.ಎ. ಪಾಟೀಲ್., ಹೈನುದನಗಳ ರೋಗ ಔಷಧಿ ಚಿಕಿತ್ಸೆ, ಪು.೩೮

ಇಪ್ಪತ್ತನೆಯ ಶತಮಾನದ ಆದಿಭಾಗದವರಿಗೆ ಭಾರತದಲ್ಲಿ ಕೃಷಿ 'ಜೀವನಾಧಾರ' ಮಟ್ಟದಲ್ಲಿ ನೆಡೆಯುತ್ತಿತ್ತು. ರೈತರು ತಮಗೆ ಸಾಕಾಗುವಷ್ಟು ಪ್ರಮಾಣದಲ್ಲಿ ಮಾತ್ರ ಆಹಾರಧಾನ್ಯಗಳನ್ನು ಬೆಳೆದುಕೊಳ್ಳುತ್ತಿದ್ದರು. ಗೇಣಿಪಾವತಿ, ಸಾಲಗಳ ಮರುಪಾವತಿ ಮತ್ತು ಇತರೆ ಖರ್ಚುವೆಚ್ಚಗಳನ್ನು ಭರಿಸಲು ಕೇವಲ ಅಲ್ಪ ಪ್ರಮಾಣದ ಕೃಷಿ ಪದಾರ್ಥಗಳನ್ನು ಮಾರಾಟಮಾಡಲಾಗುತ್ತಿತ್ತು. ಆದುದರಿಂದ ಆ ಸಂದರ್ಭದಲ್ಲಿ ಮಾರುಕಟ್ಟೆಯ ಸಮಸ್ಯೆ ಉದ್ಭವಿಸಿರಲೇ ಇಲ್ಲ. ಆದರೆ ಇತ್ತೀಚಿನ ದಿನಗಳಲ್ಲಿನ ವೈಜ್ಞಾನಿಕ ಮತ್ತು ತಾಂತ್ರಿಕ ಬೆಳವಣಿಗೆಗಳು, ಹಸಿರುಕ್ರಾಂತಿಯಂಥ, ನೂತನ ಕೃಷಿವಿಧಾನ ಅಳವಡಿಕೆ ಮುಂತಾದ ಕಾರಣಗಳಿಂದಾಗಿ ಕೃಷಿಚಟುವಟಿಕೆಯನ್ನು ಒಂದು ಉದ್ಯಮ ವ್ಯವಹಾರಿಕ ರೀತಿಯಲ್ಲಿ ನೆಡೆಸಿಕೊಂಡು ಹೋಗಲಾಗುತ್ತಿದೆ. ಅಷ್ಟೇ ಅಲ್ಲದೆ ಕೃಷಿ ಸಾಮಗ್ರಿಗಳನ್ನು ಅಗಾಧ ಪ್ರಮಾಣದಲ್ಲಿ ಉತ್ಪಾದಿಸಲಾಗುತ್ತದೆ. ಹಾಗೂ ಅನೇಕ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತಿದೆ. ಈ ಕಾರಣಗಳಿಂದಾಗಿ ಕೃಷಿ ಉತ್ಪನ್ನಗಳ ಮಾರಾಟ ಬಹುದೊಡ್ಡ ಸಮಸ್ಯೆಯಾಗಿ ಪರಿಣಮಿಸಿದೆ.

ಉತ್ತಮ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಸ್ಥೆ ನಿಸ್ಸಂದೇಹವಾಗಿ ರೈತನಿಗೆ ವರ ಪ್ರಧಾನವಾಗಿರುತ್ತದೆ. ಏಕೆಂದರೆ ಇದರಿಂದ ರೈತ ತಾನು ಬೆಳೆದ ಬೆಳೆಗಳಿಗೆ ಉತ್ತಮ ಬೆಲೆ ಪಡೆಯುವುದು ಸಾಧ್ಯವಾಗುತ್ತದೆ. ಹಾಗೂ ಅವನ ಸ್ಥಿತಿಗತಿಗಳು ಸುಧಾರಿಸುತ್ತವೆ. ಉತ್ತಮ ಮಾರುಕಟ್ಟೆ ವ್ಯವಸ್ಥೆ ಕೃಷಿ ಮತ್ತು ಕೈಗಾರಿಕಾ ವಲಯಗಳೆರಡರ ಪ್ರಗತಿಗೆ ಪ್ರಚೋಧಕವಾಗುತ್ತದೆ. ಕೃಷಿ ಪ್ರಧಾನವಾದ ಭಾರತದಂತಹ ಆರ್ಥಿಕ ವ್ಯವಸ್ಥೆಯಲ್ಲಿ ವ್ಯವಸ್ಥಿತವಾದ ಮತ್ತು ಕ್ರಮಬದ್ಧ ಮಾರುಕಟ್ಟೆ ಅತ್ಯವಶ್ಯಕ.

ಕೃಷಿ ಮಾರುಕಟ್ಟೆಯು ಕೃಷಿಕರ ಬದುಕಿನ ಜೀವನಾಡಿಯಾಗಿದೆ. ಅದು ನಿರಂತರ ಚಲನಶೀಲತೆಯನ್ನು ಕೃಷಿಕರ ಮೂಲಕ ಅಂತರ್ಗಿಸಿಕೊಂಡಿರುತ್ತದೆ. ಕೃಷಿಯ ಉತ್ಪನ್ನಗಳು ಕೃಷಿ ಮಾರುಕಟ್ಟೆಯ ಅಂಗಭಾಗವಾಗಿ ರೂಪಿತವಾಗುತ್ತವೆ. ಇವು ಒಂದು ನಾಣ್ಯದ ಎರಡು ಮುಖವಿದ್ದಂತೆ ಎಲ್ಲಾ ಹಳ್ಳಿಗಳು ಬಂದು ಸಮುದ್ರವನ್ನು ಸೇರುವಂತೆ ಎಲ್ಲಾ ಬೆಳೆ ಉತ್ಪನ್ನಗಳು ಮಾರುಕಟ್ಟೆಗೆ ಬಂದು ಸೇರುತ್ತವೆ. ಹಾಗಾಗಿ ಇವು ಕೃಷಿಕ ಸಮುದಾಯದ ಇಡೀ ವ್ಯವಸ್ಥೆಯನ್ನು ಆಲಂಗಿಸಿಕೊಂಡಿದೆ. ಕೃಷಿ ಮಾರುಕಟ್ಟೆಗಳು ಆಯಾ ಪ್ರದೇಶದ ಅಭಿವೃದ್ಧಿಗನುಗುಣವಾಗಿ ಸ್ಥಿರ ರೂಪವನ್ನು ಕಂಡುಕೊಂಡಿರುತ್ತವೆ. ಮಾರುಕಟ್ಟೆಗಳಿಗೆ ದೇಶದಲ್ಲಿರುವ ಎಲ್ಲಾ ರೈತನ ಸಮುದಾಯಗಳ ಉತ್ಪನ್ನಗಳು ಬಂದು ಸೇರುತ್ತವೆ. ಕೃಷಿ ಮಾರುಕಟ್ಟೆಯು ಸಾಮಾಜಿಕ ವ್ಯವಸ್ಥೆಯಾಗಿರುತ್ತವೆ. ಮತ್ತು ವಿವಿಧ ನೆಲೆಗಳನ್ನು (ಆಯಾಮ) ಹೊಂದಿರುತ್ತವೆ. ಸಂತೆಗಳು, ಮಂಡೆಗಳು, ಗ್ರಾಮೀಣವ್ಯಾಪಾರಿಗಳು ಮತ್ತು ಮಾರುಕಟ್ಟೆ, ಹೀಗೆ ವಿಭಿನ್ನ ನಿಲುವುಗಳನ್ನು ಹೊಂದಿ ಕಾರ್ಯನಿರ್ವಹಿಸುತ್ತವೆ.

ಇತ್ತೀಚಿಗೆ ಸರ್ಕಾರಿ ಮಾರುಕಟ್ಟೆಗಳ ಜೊತೆಗೆ ಖಾಸಗಿ ಮಾರುಕಟ್ಟೆಗಳು ರೂಪಿತವಾಗಿವೆ. ಸರ್ಕಾರಿ ಮಾರುಕಟ್ಟೆಗಳು ಸರ್ಕಾರದ ನಿಯಮಗಳೊಂದಿಗೆ ಕಾರ್ಯ ನಿರ್ವಹಿಸುತ್ತವೆ. ಖಾಸಗಿ ವಲಯ ತನಗೆ ಸಂಬಂಧಪಟ್ಟ ರೂಪ ರೇಷೆಗಳಿಗನುಗುಣವಾಗಿ ಕಾರ್ಯನಿರ್ವಹಿಸುತ್ತವೆ. ಇವೆರಡರ ಮಧ್ಯದಲ್ಲಿ ಕೃಷಿಕರು ತಮ್ಮ ಕೃಷಿ ಜೀವನವನ್ನ

ನಿರ್ಧಾರ ಮಾಡಿಕೊಳ್ಳಬೇಕಾಗಿದೆ. ಮತ್ತು ಇವೆರಡರ ವಿಭಿನ್ನ ದೋಷಗಳನ್ನು ಹಾಗೂ ಪ್ರತಿಫಲಗಳನ್ನು ಕೃಷಿಕರು ತಿಳಿದುಕೊಳ್ಳಬೇಕಾಗಿದೆ.

ದೀವರು ಮತ್ತು ಕೃಷಿಗೂ ಅವಿನಾಭಾವ ಸಂಬಂಧವಿರುವುದು ದೀವರ ಸಮುದಾಯದ ಮೂಲವೃತ್ತಿಯಿಂದ ತಿಳಿದುಬರುತ್ತದೆ. ದೀವರು ಕೃಷಿಯನ್ನು ಜೀವನದ ಒಂದು ಅವಿಭಾಜ್ಯ ಅಂಗವಾಗಿ ಕಾಣುತ್ತಾರೆ. ಕೃಷಿಯ ಹೊರತು ಅವರು ಆರ್ಥಿಕವಾಗಿ ಯಾವುದೇ ಉದ್ದಿಮೆಯನ್ನು ಕೈಗೊಳ್ಳದಿರುವುದನ್ನು ಕಾಣಬಹುದಾಗಿದೆ. ಅವರು ಇಡೀ ಜೀವನದ ಹಾದಿಯಲ್ಲಿ 'ಕೃಷಿ' ಒಂದು ಸರ್ವ ಅಭ್ಯುದಯದ ಚೇತನವಾಗಿದೆ. ಬದುಕು ಎಂಬುದನ್ನು ತಮ್ಮ ಮೂಲವೃತ್ತಿಯಾದ ಕೃಷಿಯ ಮೂಲಕ ಸಾಬೀತುಪಡಿಸುತ್ತಾರೆ.

ದೀವರು ಒಂದು ವಿಶಿಷ್ಟ ಬಗೆಯ ವೈಚಾರಿಕ ಚಿಂತನೆಯನ್ನು ಕೃಷಿಯಲ್ಲಿ ಕಂಡುಕೊಂಡಿದ್ದಾರೆ. ಅಂದರೆ ಇಡೀ ದೇಶಕ್ಕೆ 'ಅನ್ನಮಾತೆ'ಯಾಗಿರುವ ಭೂಮಿತಾಯಿ ತನ್ನಲ್ಲಿ ಕಾರ್ಯತ್ಮಕವಾಗಿ ನಂಬಿದವರಿಗೆ ಯಾವಾಗಲೂ ಸುಖ ಸಮೃದ್ಧಿಯನ್ನು ಕೊಟ್ಟು ಕಾಪಾಡುವಳು ಎಂಬ ಅಚಲ ನಿಲುವನ್ನು ಬುಡಕಟ್ಟು ಸಮುದಾಯದವರಾದ ದೀವರು ನಂಬಿದ್ದಾರೆ. ಹಾಗಾಗಿಯೇ 'ಕೃಷಿ' ಎಂಬುದು ಅವರಿಗೆ ದೇವರು ಕೊಟ್ಟ ವರವಾಗಿದೆ. ಎಂಬುದರಲ್ಲಿ ಎರಡು ಮಾತಿಲ್ಲ. ಈ ಕೃಷಿಯ ಹಿನ್ನೆಲೆಯಲ್ಲಿ ವಿವಿಧ ಕೃಷಿ ಉದ್ದಿಮೆ ಪರಿಕರಗಳನ್ನು ಗುರುತಿಸಲಾಗಿದೆ. ಬುಡಕಟ್ಟು ಸಮುದಾಯದ ದೀವರು ಸಂಪೂರ್ಣ ಆರ್ಥಿಕವಾಗಿ ಪ್ರಬಲರಾಗಿಲ್ಲ ಅವರಲ್ಲಿಯೇ ಶೈಕ್ಷಣಿಕವಾಗಿ, ರಾಜಕೀಯವಾಗಿ, ಹೆಚ್ಚು ಅಭಿವೃದ್ಧಿ ಹೊಂದಿದ ಜನರು ಮಾತ್ರ ಆರ್ಥಿಕವಾಗಿ ಪ್ರಬಲವಾಗಿದ್ದು ಉಳಿದವರು ಆರ್ಥಿಕವಾಗಿ ಹಿನ್ನಡೆ ಸಾಧಿಸಿದ್ದಾರೆ. (ಅವರು ಕೃಷಿಯನ್ನೇ ನಂಬಿಕೊಂಡು ಜೀವಿಸುವವರಾಗಿದ್ದಾರೆ.) ಈ ಹಿನ್ನೆಲೆಯಲ್ಲಿ ನೋಡಿದಾಗ ಕೃಷಿಕರಾದ ದೀವರು ತಾವು ವ್ಯವಸಾಯ ಪ್ರಾರಂಭ ಮಾಡುವ ಮೊದಲು ಗ್ರಾಮದ ವ್ಯಾಪಾರಿಗಳಿಂದ ಇಲ್ಲವೆ, ಶ್ರೀಮಂತ ವ್ಯಕ್ತಿಗಳಿಂದ ಬೇಸಾಯಕ್ಕೆ ಬೇಕಾದ (ಪರಿಕರಗಳನ್ನು ಕೊಳ್ಳಲು)- ಔಷಧ, ಗೊಬ್ಬರ, ಬೀಜಗಳನ್ನು ಕೊಳ್ಳಲು ಹಣ ಪಡೆದುಕೊಂಡಿರುತ್ತಾರೆ. ಹೀಗಿರುವಾಗ ಅವರು ತಾವು ಬೆಳೆದ ಉತ್ಪಾದನೆಯನ್ನು ಅದೇ ಶ್ರೀಮಂತನಿಗೆ ಇಲ್ಲವೆ ಗ್ರಾಮದ ವ್ಯಾಪರಿಗೆ ಕಡಿಮೆ ಬೆಲೆಯಲ್ಲಿ ಧಾನ್ಯಗಳನ್ನು ಕೊಡುವುದು ವ್ಯಾಪಾರಿಗಳು ತಾನು ಕೊಟ್ಟಿದ್ದಕ್ಕೆ ಬಡ್ಡಿಯನ್ನು ತೆಗೆದುಕೊಂಡು ಅವರನ್ನು ನಿರಾಶದಾಯಕರನ್ನಾಗಿ ಮಾಡುವಂತದ್ದು ಕೃಷಿ ಮಾರುಕಟ್ಟೆ ವ್ಯವಸ್ಥೆಯ ಪರಿರೂಪದಲ್ಲಿ ಕಾಣಲಾಗಿದೆ. ಈ ಸಂಗತಿಯು ಘಟಿಸಲು ಪ್ರಮುಖ ಕಾರಣವೆಂದರೆ ಕೃಷಿಯನ್ನು ನಂಬಿ ಬದುಕುತ್ತಿರುವ ದೀವರು ವ್ಯವಸಾಯಕ್ಕೆ ಬೇರೆಯವರನ್ನು ಆಶ್ರಯಿಸಿ ಬದುಕುವುದಾಗಿದೆ.

**ದೀವರು ಪ್ರಮುಖವಾಗಿ ಬೆಳೆಯುವ ಬೆಳೆಗಳು:**

ಭತ್ತ, ಕಬ್ಬು, ರಾಗಿ, ಜೋಳ, ಹೆಸರು, ಅಲಸಂದಿ, ಶೆಂಗಾ, ಸೂರ್ಯಕಾಂತಿ, ಹುರುಳಿ, ಅವರೆ, ತೊಗರಿ, ಕಡಲೆ, ಹತ್ತಿ, ಮುಸುಕಿನಜೋಳ.

**ತರಕಾರಿ ಬೆಳೆಗಳು:** ಹೀರೆಕಾಯಿ, ಬದನೆಕಾಯಿ, ಮರಗೆಣಸು, ಸೌತೆಕಾಯಿ, ಮೂಲಂಗಿ, ಕುಂಬಳಕಾಯಿ, ತೊಂಡೆಬಳ್ಳಿ, ಟಮೋಟೋ ಇತ್ಯಾದಿ ದೀವರು ಪ್ರಮುಖವಾಗಿ ಮತ್ತು ಪ್ರಧಾನವಾಗಿ ಬೆಳೆಯುವ ಬೆಳೆಯೆಂದರೆ ಭತ್ತ. ಆಹಾರದ ದೃಷ್ಠಿಯಿಂದಾಗಲಿ ಮತ್ತು ಮಾರಾಟಕ್ಕಾಗಲಿ ಎರಡೂ ಆಯಾಮಗಳಿಗೂ ಭತ್ತನೇ ಪ್ರಧಾನ ಬೆಳೆಯಾಗಿದೆ. ಅದರಿಂದಾಗಿ ದೀವರು ಹೊಸ ಬಗೆಯ ಭತ್ತದ ತಳಿಗಳನ್ನು ಕೃಷಿಯಲ್ಲಿ ಮೈಗೂಡಿಸಿಕೊಂಡಿದ್ದಾರೆ. ಹಿಡಿಕುಣಿಭತ್ತ, ಕಿಷ್ನ, ಅಭಿಲಾಷ, ಡೈನಾಮ್‌ಸೋನಾ, ಕರಿಇಂಟಾನು, ಬಿಳಿಇಂಟಾನು ಇತ್ಯಾದಿ. ಇವುಗಳ ವ್ಯಾಪಾರವೇ ದೀವರಿಗೆ ಪ್ರಮುಖವಾಗಿದೆ.

ದೀವರು ತಾವು ಬೆಳೆದ ಬೆಳೆಗಳನ್ನು ಮಾರುಕಟ್ಟೆಗೆ ಮತ್ತು ಸಂತೆಗಳಿಗೆ ಒಯ್ಯುತ್ತಾರೆ. ಭತ್ತ, ಜೋಳ, ಮೆಕ್ಕೆಜೋಳ, ಹತ್ತಿಯನ್ನು ಮಾರುಕಟ್ಟೆಗೆ ಒಯ್ದರೆ, ಹೆಸರುಕಾಳು, ಅಲಸಂದಿ, ತೋಟಗಾರಿಕೆ ಬೆಳೆಗಳಾದ ಅವರೆ, ಬೆಂಡೆಕಾಯಿ, ಕುಂಬಳಕಾಯಿ, ತೊಂಡೆಕಾಯಿ, ಟಮೋಟೋ, ಸೌತೆಕಾಯಿ, ಮರಗೆಣಸು, ಹೂಗಳು ಮುಂತಾದವುಗಳನ್ನು ಸಂತೆಯಲ್ಲಿ ಮಾರಾಟ ಮಾಡುತ್ತಾರೆ.

**ದೀವರು ಪ್ರಮುಖವಾಗಿ ಮಾರಾಟ ಮಾಡುವ ವಸ್ತುಗಳು:**

೧. ಭತ್ತ, ಜೋಳ, ಮೆಕ್ಕೆಜೋಳ, ಹತ್ತಿ.

೨. ಹೂವುಗಳ ಮಾರಾಟ

೩. ತರಕಾರಿಗಳ ಮಾರಾಟ

೪. ಹಾಲಿನ ಮಾರಾಟ

೫. ಕೋಳಿಗಳ ಮಾರಾಟ

೬. ದನಗಳ ಮಾರಾಟ

೭. ನಾರಿನ ಸಲಕರಣೆಗಳ ಮಾರಾಟ

ದೀವರು ಮೂಲತಃ ಕೃಷಿಕರಾಗಿದ್ದಾರೆ. ವ್ಯವಸಾಯವೇ ಅವರ ಅವಿಭಾಜ್ಯ ಅಂಗವಾಗಿದೆ. ಈ ನಿಟ್ಟಿನಲ್ಲಿ 'ರೈತನಿಂದ ನಾಡೆಲ್ಲ' ಬದುಕುವುದು. ರೈತನೇ ಇಡೀ ಸಾಮಾಜಿಕ ಜೀವನಕ್ಕೆ ಆಧಾರವಾಗಿದ್ದಾನೆ. ಹಾಗಾಗಿಯೇ ಅವನು ಸಮಾಜಕೇಂದ್ರಿತ ಬಿಂದುವಾಗಿ ಪರಿಣಮಿಸಿದ್ದಾನೆ. ಸಮಾಜದ ಸ್ಥಿತ್ಯಂತರಗಳ ಕಾರಣಕ್ಕೆ ರೈತರು ಪ್ರಮುಖ ಪಾತ್ರವಹಿಸುತ್ತಾರೆ. ಅಂದರೆ ರೈತರು ಬೆಳೆಯುವ ಉತ್ಪನ್ನಗಳಲ್ಲಿ ಸಡಿಲತೆಯನ್ನು ಕಂಡುಕೊಂಡಾಗ ಮಾರುಕಟ್ಟೆಯು ಅತಂತ್ರ ಸ್ಥಿತಿಯನ್ನು ಕಾಣುತ್ತದೆ. ಅದೇ ರೈತರ ಸಮೃದ್ಧಿ ರೀತಿಯಲ್ಲಿ ಬೆಳೆದರೆ ಇಡೀ ನಾಡಿನ ಜನತೆ ಮತ್ತು ಮಾರುಕಟ್ಟೆಗಳು ಪ್ರಜ್ವಲಿಸುತ್ತವೆ. ಈ ಹಿನ್ನೆಲೆಯಲ್ಲಿಯೇ ದೀವರ ರೈತರು ಕೂಡಾ ಪ್ರತಿ ಸಂತದಲ್ಲೂ ಪ್ರಮುಖವಾದ ಪಾತ್ರವನ್ನು ವಹಿಸುತ್ತಾರೆ.

ದೀವರು ತಾವು ಬೆಳೆದ ಉತ್ಪನ್ನಗಳನ್ನು ಮಾರಾಟ ಮಾಡಲು ಮಾರುಕಟ್ಟೆಗಳಿಗೆ ಮತ್ತು ಸಂತೆಗಳಿಗೆ ಒಯ್ಯುತ್ತಾರೆ. ಅವರ ಮಾರಾಟ ವಿಧಾನವು ಸರಳವಾಗಿದೆ. ದೀವರು ಎಲ್ಲಾ ಬೆಳೆಗಳನ್ನು ಬೆಳೆದರೂ ಎತೇಚ್ಛವಾಗಿ ಭತ್ತ ಪ್ರಮುಖ ಮತ್ತು ಪ್ರಧಾನ ಪಾತ್ರವಹಿಸುತ್ತದೆ. (ದೀವರು ಭತ್ತದ ಮಾರಾಟವನ್ನು ಮಿಲ್‌ಗಳಿಗೆ ಇಲ್ಲವೆ ಎ.ಪಿ.ಎಂ.ಸಿಗಳಿಗೆ ಬಿಡುವರು.) ದೀವರು ಊಟಕ್ಕಾಗಿ ಭತ್ತವನ್ನೇ ಪ್ರಧಾನವಾಗಿಸಿಕೊಂಡಿದ್ದಾರೆ. ಭತ್ತವನ್ನು ವರ್ಷಪಿಡೀ ತಮ್ಮ ಕುಟುಂಬಕ್ಕೆ ಎಷ್ಟುಬೇಕೂ ಅಷ್ಟನ್ನು ಇಟ್ಟುಕೊಂಡು, ಉಳಿದೆಲ್ಲಾ ಭತ್ತವನ್ನು ಮಾರಾಟ ಮಾಡುವರು.

ಮಾರಾಟವು ರೈತರನ್ನು ಅವಲಂಬಿಸಿರುತ್ತದೆ. ರೈತರು ತಾವು ಉತ್ಪಾದಿಸಿದ ಪ್ರತಿಯೊಂದು ಪರಿಕರಗಳನ್ನು ಮಾರುಕಟ್ಟೆ ಪರೀಕ್ಷೆ ಮಾಡುತ್ತಿರುತ್ತದೆ. ಹೀಗಿರುವಾಗ ರೈತರು ಪ್ರತಿಯೊಂದು ಮಾರುಕಟ್ಟೆಯ ಆಯಾಮಗಳನ್ನು ತಿಳಿದುಕೊಳ್ಳಬೇಕಾಗುತ್ತದೆ.

**ಬೆಲೆ:** ದೀವರು ಬೆಳೆದ ಬೆಳೆಯು ಕೂಡಾ ರೈತ ಗ್ರಾಹಕನ ಮೇಲೆ ಪ್ರಭಾವ ಬೀರುವ ಪ್ರಮುಖ ಅಂಶವಾಗಿದೆ. ದೀವರು ಮೊದಲು ಬೆಳೆಯನ್ನು ಬೆಳೆಯುವಾಗ ಉತ್ತಮ ತಳಿಗಳನ್ನು ಆಯ್ಕೆಮಾಡಿಕೊಂಡು ಬೆಳೆಗೆ ಬೆಲೆ ಮತ್ತು ಬೇಡಿಕೆ ಬರುವಂತೆ ಗುಣಮಟ್ಟದ ಬೆಳೆಗಳನ್ನು ಬೆಳೆಯುತ್ತಾರೆ (ಭತ್ತ). ಹಾಗಾಗಿಯೇ ಭತ್ತಕ್ಕೆ ಮಾರುಕಟ್ಟೆಯಲ್ಲಿ ವಿಶೇಷ ಸ್ಥಾನವಿರುತ್ತದೆಂದು ಅವರ ಅಭಿಪ್ರಾಯವಾಗಿದೆ.

ಡಾ. ಮಾರ್ಷಲ್ ಅವರು ಹೇಳುವ ಹಾಗೆ "ಬೇಡಿಕೆ ಹಾಗೂ ಪೂರೈಕೆಗಳು ಒಂದು ಕತ್ತರಿಯ ಎರಡು ಅಲುಗುಗಳಿದ್ದಂತೆ ಕಾಗದವನ್ನು ಕತ್ತರಿಸಲು ಎರಡು ಅಲುಗುಗಳು ಅತ್ಯಾವಶ್ಯಕ ಒಂದೇ ಅಲಗಿನಿಂದ ಕತ್ತರಿಸಲು ಸಾಧ್ಯವಿಲ್ಲ. ಅದರಂತೆ ಬೆಲೆ ನಿರ್ಧಾರವಾಗಬೇಕಾದರೆ ಬೇಡಿಕೆ ಮತ್ತು ಪೂರೈಕೆಗಳೆರಡು ಅತ್ಯಾವಶ್ಯಕ." ಬೆಲೆಗಳು ಮಾರುಕಟ್ಟೆಯಲ್ಲಿ ಯಾವಾಗಲೂ ಸ್ಥಿರವಾಗಿರುವುದಿಲ್ಲ. ಪೈಪೋಟಿಗೆ ತಕ್ಕಂತೆ ಬದಲಾಗಬಹುದು. ಇವತ್ತಿನ ಮಾರುಕಟ್ಟೆಯ ಉತ್ತಮ ಗುಣಮಟ್ಟದ ಬೆಳೆಗಳನ್ನು ಅಪೇಕ್ಷಿಸುತ್ತದೆ. ಮತ್ತು ಗ್ರಾಹಕರು ಕೂಡಾ ಉತ್ತಮ ಗುಣಮಟ್ಟದ ದವಸ- ಧಾನ್ಯಗಳನ್ನು ಬೇಡುತ್ತಾರೆ. ಹಾಗಾಗಿ ಗ್ರಾಹಕರು ಕೊಳ್ಳುವ ಉದ್ದೇಶ ಸಾಮರ್ಥ್ಯ ಹಾಗೂ ಪ್ರಸ್ತುತ ಮಾರುಕಟ್ಟೆಯಲ್ಲಿಯ ಪೈಪೋಟಿಯನ್ನು ನಿರ್ಧರಿಸುತ್ತದೆ.

**ವಿತರಣೆ:** ಕೃಷಿಕರಾದ ದೀವರು ತಾವು ಬೆಳೆದ ಬೆಳೆಗಳನ್ನು ಸಮಯೋಚಿತವಾಗಿ ಕಡಿಮೆ ವೆಚ್ಚದಲ್ಲಿ ಸಗಟು ಇಲ್ಲವೆ ಚಿಲ್ಲರೆ ವ್ಯಾಪಾರಗಳ ಮೂಲಕ ಗ್ರಾಹಕರಿಗೆ ತಲುಪಿಸುತ್ತಾರೆ. ಇದು ಅವರ ವಿತರಣೆಯ ಕಲೆಯಾಗಿದೆ. ಹೂವುಗಳನ್ನು ಸಂತೆಗಳಲ್ಲಿ ಮಾರಾಟ ಮಾಡುತ್ತಾರೆ. ಮತ್ತು ವಾಹನಗಳ ಪ್ರಯಾಣಿಕರಿಗೆ ಹೂವುಗಳನ್ನು ಮಾರಾಟ ಮಾಡುವರು.

**ಉತ್ತೇಜಕಗಳು:** ರೈತರು ಬೆಳೆಯುವ ಬೆಳೆಗಳು ಗ್ರಾಹಕರನ್ನು ಉತ್ತೇಜಿಸುವಂತಿರಬೇಕು. ಅಂದಾಗ ಮಾತ್ರ ಉತ್ಪನ್ನಗಳಿಗೆ ತಕ್ಕುದಾದ ಬೆಲೆ ಬರಲು ಸಾಧ್ಯವಾಗುತ್ತದೆ. ಉತ್ತೇಜಕಗಳು ಗ್ರಾಹಕನ ಕೊಳ್ಳುವ ಶಕ್ತಿ, ಸಾಮರ್ಥ್ಯ ಮತ್ತು ಆಸಕ್ತಿಯನ್ನು ಒಳಗೊಂಡಿರುತ್ತವೆ. ಕೃಷಿಕರಾದ ದೀವರು ಬೆಳೆಯುವ ಬೆಳೆಗಳು ಗ್ರಾಹಕರು ತಮ್ಮ ದಿನನಿತ್ಯ ಜೀವನದಲ್ಲಿ ಬಳಸುವಂತವುಗಳಾಗಿವೆ. ಹಾಗಾಗಿ ಅವುಗಳಿಗೆ ಬೇಡಿಕೆ ಯಾವಾಗಲೂ ಇರುತ್ತದೆ.

**ಬಂಡವಾಳದ ಕೊರತೆ:** ಕೃಷಿಕರಾದ ದೀವರ ಸಮುದಾಯದವರು ಬಡವರಾಗಿರುವುದರಿಂದ ಕೃಷಿಗೆ ತೊಡಗಿಸಿಕೊಳ್ಳಲು ಬಂಡವಾಳದ ಕೊರತೆಯನ್ನು ಅನುಭವಿಸುತ್ತಾರೆ. ಇವರು ಕೃಷಿಗೆ ಖಾಸಗಿ ವ್ಯಕ್ತಿಗಳಿಂದ ಸಾಲ ಪಡೆದು ಕೃಷಿಯನ್ನು ಮಾಡುತ್ತಾರೆ. ಇದಿರಂದ ಇವರ ಸರಾಸರಿ ಬೆಳೆ ಲಾಭದ ಪ್ರಮಾಣ ಕಡಿಮೆಯಾಗಿ ಮತ್ತೆ ಬಡತನ ಸ್ಥಿತಿಯಲ್ಲಿ ಇರುವುದನ್ನು ಕಾಣಬಹುದಾಗಿದೆ.

**ಉತ್ಪಾದನಾ ವಿಧಾನ:** ಬುಡಕಟ್ಟು ಸಮುದಾಯದ ದೀವರ ಕೃಷಿಯು ಉತ್ಪಾದನೆಯ ವಿಧಾನ ಸಾಂಪ್ರದಾಯಿಕವಾಗಿದ್ದು, ಉತ್ಪಾದನೆಯನ್ನು ತೀವ್ರಗೊಳಿಸಲು ಸಾಧ್ಯವಾಗಿಲ್ಲ. ಕೃಷಿಯಲ್ಲಿ ಆಧುನಿಕ ತಳಿಗಳು ಬಂದರೂ ಮತ್ತು ಆಧುನಿಕ ಔಷದೋಪಾಚರಗಳ ಬಳಕೆ ಇದ್ದರೂ ಮೂಲ ವ್ಯವಸಾಯದಲ್ಲಿ ಅಲ್ಪಪ್ರಮಾಣದ ಉತ್ಪಾದನೆ ಇರುವುದರಿಂದ ಹೆಚ್ಚಿನ ಇಳುವರಿಯಾಗಲು ಸಾಧ್ಯವಾಗಿಲ್ಲ. ಹಾಗೆಯೇ ಇವರಲ್ಲಿ ಉತ್ಪನ್ನಗಳ ಮಾರಾಟವು ಕೂಡಾ ಕಡಿಮೆ ಪ್ರಮಾಣದಲ್ಲಿದೆ.

ಕೃಷಿಕರಾದ ದೀವರಲ್ಲಿ ಸುಗ್ಗಿಯ ನಂತರ ಉತ್ಪನ್ನಗಳ ಮಾರಾಟ ಪ್ರಾರಂಭವಾಗುತ್ತದೆ. ಇವರು ತಾವು ಬೆಳೆಯುವ ವಸ್ತುಗಳನ್ನು ಮಾರಾಟ ಮಾಡಲು ಮಾರುಕಟ್ಟೆ ಮತ್ತು ಸಂತೆಗಳನ್ನು ಅವಲಂಬಿಸಿದ್ದಾರೆ. ಇವರು

ಪ್ರಮುಖವಾಗಿ ಮಾರಾಟ ಮಾಡುವ ಉತ್ಪನ್ನಗಳೆಂದರೆ, ಭತ್ತ, ಜೋಳ, ಮೆಕ್ಕೆಜೋಳ, ಹತ್ತಿ ಇವುಗಳನ್ನು ಕೃಷಿಕರಾದ ದೀವರು ಮಾರುಕಟ್ಟೆಯಲ್ಲಿ ಮಾರಾಟ ಮಾಡುವರು. ಮತ್ತು ಭತ್ತದ ಮಿಲ್‌ಗಳಿಗೆ ಮಾರಾಟ ಮಾಡುವರು. ಇದರಿಂದ ಬಂದ ಹಣವನ್ನು ತನ್ನ ಜೀವನದ ನಿರ್ವಹಣೆಗಾಗಿ ಉಪಯೋಗಿಸುವರು. ಮತ್ತೆ ಕೆಲವರು ಮುಂಬರುವ ವ್ಯವಸಾಯಕ್ಕೆ ಇಟ್ಟುಕೊಳ್ಳುವರು. ಇದರಿಂದ ಅವರು ಅಷ್ಟೇನು ಪ್ರಗತಿ ಹೊಂದಲು ಸಾಧ್ಯವಾಗಿಲ್ಲ. ಕಾರಣ ಅವರಿಗೆ ಆಧುನಿಕ ಕೃಷಿ ಪರಿಕರಗಳ ಅಲಭ್ಯ ಮತ್ತು ಬಂಡವಾಳದ ಕೊರತೆ ಹೀಗಾಗಿ ದೀವರು ಆರ್ಥಿಕವಾಗಿ ಪ್ರಬಲರಾಗಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿಯತ್ತ ಸಾಗುತ್ತಿದ್ದಾರೆ.

೧. **ಹೂಗಳ ಮಾರಾಟ:** ದೀವರು ಮೂಲತಃ ಕೃಷಿಕರಾಗಿದ್ದರೂ ಕೂಡಾ ತಮ್ಮ ಬದುಕಿನಲ್ಲಿ ಜೀವನದ ನಿರ್ವಹಣೆಗಾಗಿ ಉಪಕಸುಬಾಗಿ ಹೂವುಗಳನ್ನು ಮಾರಾಟ ಮಾಡುವರು. ಕಾಡಿನಲ್ಲಿ ಸಿಗುವ ಮತ್ತು ಮನೆಯ ಹಿತ್ತಲಿನಲ್ಲಿ ಬೆಳೆಸಿದ ಹೂವುಗಳನ್ನು ಅಂದರೆ ಚಂಡಿ ಹೂ, ಡೇರೆಹೂ, ಕನಕಾಂಬರ, ಕಮಲ, ತಾವರೆ, ಗುಲಾಬಿ, ಸೇವಂತಿಗೆ, ಮಲ್ಲಿಗೆಹೂ ಹೀಗೆ ಹತ್ತು ಹಲವಾರು ಹೂಗಳನ್ನು ಸಂತೆಗೆ ತಂದು ಸ್ತ್ರೀಯರೇ ಮಾರಾಟ ಮಾಡುವರು. ಇದು ದೊಡ್ಡ ಪ್ರಮಾಣದ ವ್ಯತ್ಯಾಸವೇನಲ್ಲ. ಕೇವಲ ತಮ್ಮ ಜೀವನದ ನಿರ್ವಹಣೆಗಾಗಿ ತಾವು ಮಾಡಿಕೊಂಡ ಒಂದು ಬದುಕಿನ ನೆಲೆಯಾಗಿದೆ. ದೀವರಲ್ಲಿ ಹೂಗಳು ವಿಶೇಷವಾಗಿ ಪ್ರತಿಯೊಂದು ಹಬ್ಬಹರಿದಿನಗಳಲ್ಲಿ ಪೂಜಿಸಲ್ಪಡುತ್ತವೆ.

೨. **ತರಕಾರಿಗಳ ಮಾರಾಟ:** ಬುಡಕಟ್ಟು ಸಮುದಾಯದವರಾದ ದೀವರು ತರಕಾರಿಗಳನ್ನು ಬೆಳೆಯುತ್ತಾರೆ. ತರಕಾರಿ ಬೆಳೆಗಳು ಗ್ರಾಹಕರ ಹಿತದೃಷ್ಟಿಯಿಂದ ಮತ್ತು ಆಹಾರದ ಪೂರೈಕೆಗೆ ಪ್ರಮುಖ ಬೆಳೆಯಾಗಿವೆ. ಗ್ರಾಹಕರಿಗೆ ತರಕಾರಿಗಳು ಅವಶ್ಯಕವಾಗಿ ಬೇಕಾಗಿರುವ ವಸ್ತುಗಳಾಗಿರುವುದರಿಂದ ಮಾರುಕಟ್ಟೆಗಳು ತರಕಾರಿಗಳನ್ನು ಹೆಚ್ಚಿನ ಮಟ್ಟದಲ್ಲಿ ನಿರೀಕ್ಷೆ ಮಾಡುತ್ತವೆ. ದೀವರು ಅಲ್ಪ ಪ್ರಮಾಣದ ಭೂಮಿಯನ್ನು ಹೊಂದಿರುವುದರಿಂದ ಆ ಭೂಮಿಯಲ್ಲಿಯೇ ಜೀವನದ ನಿರ್ವಹಣೆಗಾಗಿ ತರಕಾರಿಗಳನ್ನು ಬೆಳೆಯುವರು. ಬೆಳೆದ ತರಕಾರಿಗಳನ್ನು ಸಂತೆಗಳಲ್ಲಿ ಮಾರಾಟ ಮಾಡುವರು. ಇಲ್ಲವೆ ಊರಿನಲ್ಲಿಯೇ ಮಾರಾಟ ಮಾಡುತ್ತಾರೆ. ಇದು ಕೂಡಾ ದೊಡ್ಡ ಪ್ರಮಾಣದ ಬೆಳೆಯೇನಲ್ಲ. ತಮ್ಮ ಜೀವನಕ್ಕಾಗಿ ಮಾಡಿಕೊಂಡ ಒಂದು ಸಣ್ಣ ಉಪಕಸುಬಾಗಿದೆ. ಇದರಿಂದ ಬಂದ ಹಣದಲ್ಲಿ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುತ್ತಾರೆ. ಹಾಗೆಯೇ ಕುಟುಂಬದ ವ್ಯವಸ್ಥೆಯನ್ನು ನೋಡಿಕೊಂಡು ಹೋಗುತ್ತಾರೆ. ಈ ಎಲ್ಲಾ ಕೆಲಸ -ಕಾರ್ಯಗಳಿಗೆ ದೀವರ ಸ್ತ್ರೀಯರೇ ಪ್ರಮುಖ ಪಾತ್ರವಹಿಸುವರು. ಇವರಲ್ಲದೆ ಕೌಟುಂಬಿಕ ಬದುಕು ಸಾಗಿಸಲು ಸಾಧ್ಯವಿಲ್ಲ ಎಂಬುದನ್ನು ಅವರ ಗಂಡಸರೆ ತಿಳಿಸುತ್ತಾರೆ.

೩. **ಹಾಲಿನ ಮಾರಾಟ:** ದೀವರು ಇಡೀ ನಾಡಿನ ಬದುಕಿನಲ್ಲಿ ಒಂದು ಹೊಸತನವನ್ನು ಕಂಡುಕೊಂಡು ಬದುಕುವ ಸಮುದಾಯವಾಗಿದೆ. ಇವರ ಜೀವನ ವಿಧಾನ ವಿವಿಧ ಮಜಲುಗಳಿಂದ ಕೂಡಿದೆ. ಕೃಷಿಯ ಜೊತೆಗೆ ವಿವಿಧ ರೂಪರೇಷೆಗಳನ್ನು ಕಂಡುಕೊಂಡು ಬದುಕುವ ಜನಾಂಗವಾಗಿರುವ ಇವರು ಪಶುಪಾಲನೆಯನ್ನು ತಮ್ಮ ಬದುಕಿನಲ್ಲಿ ಯಾವಾಗಲೂ ಮಾಡಿಕೊಂಡು ಬಂದಿದ್ದಾರೆ. ಪಶುಪಾಲನೆ ಎಂಬುದು ದೀವರಿಗೆ ಒಂದು ಬಗೆಯ ಮಿತ್ರ ಕರ್ತವ್ಯವಾಗಿ ಪರಿಣಮಿಸಿದೆ. ದೀವರು ಹಾಲಿನ ಉತ್ಪಾದನೆಗಾಗಿ ಆಕಳು, ಎಮ್ಮೆಯನ್ನು ಸಾಕುತ್ತಾರೆ.

ಇವುಗಳನ್ನು ಹಾಲಿನ ಮಾರಾಟಕ್ಕಾಗಿಯೇ ಕೊಂಡು ತರುವರು. ಇದರಿಂದ ಬಂದ ಹಾಲು ಮತ್ತು ಬೆಣ್ಣೆಯನ್ನು ಸಂತೆಯಲ್ಲಿ ಮಾರಾಟ ಮಾಡುವರು. ಬಂದ ಹಣವನ್ನು ತಮ್ಮ ಕುಟುಂಬದ ನಿರ್ವಹಣೆಗಾಗಿ ಬಳಸಿಕೊಳ್ಳುವರು. ಇತ್ತೀಚಿಗೆ ಊರಿನಲ್ಲಿಯೇ ಹಾಲಿನ ಡೈರಿಗಳು ಪ್ರಾರಂಭವಾಗಿರುವುದರಿಂದ ಹಾಲನ್ನು ಡೈರಿಯಲ್ಲಿಯೇ ಮಾರಾಟ ಮಾಡುವರು. ಇಲ್ಲಿಯೂ ಕೂಡಾ ದೀವರ ಮಹಿಳೆಯ ಪಾತ್ರ ವಿಶಿಷ್ಟವಾಗಿದೆ. ಅವಳೇ ಇಡೀ ಪಶುಪಾಲನೆಯ ಜವಾಬ್ದಾರಿಯನ್ನು ತೆಗೆದುಕೊಳ್ಳುವುದು ಒಂದು ವಿಶೇಷವಾಗಿದೆ.

೪. **ಕೋಳಿಗಳ ಮಾರಾಟ:** ಬುಡಕಟ್ಟು ಸಮುದಾಯದವರಾದ ದೀವರು ತಮ್ಮ ನಿತ್ಯದ ಬದುಕಿನಲ್ಲಿ ಕೋಳಿಗಳನ್ನು ಸಾಕುತ್ತಾರೆ. ಕೋಳಿಗಳು ಇವರ ಸಮುದಾಯಕ್ಕೆ ಹಿಂದಿನಿಂದಲೂ ಅಂಟಿಕೊಂಡು ಬಂದ ಒಂದು ಬಗೆಯ ಸಾಂಪ್ರದಾಯಿಕ ಬದುಕಿನ ನೆಲೆಯಾಗಿವೆ. ಕೋಳಿಗಳು ದೀವರ ಸಮುದಾಯದಲ್ಲಿ ವಿಶೇಷ ಸ್ಥಾನವನ್ನು ಪಡೆದುಕೊಂಡಿವೆ. ಇವುಗಳಿಗೆ ಪ್ರತ್ಯೇಕ ಮನೆಗಳನ್ನು ಮಾಡಿ ವ್ಯವಸ್ಥಿತವಾಗಿ ಸಾಕುತ್ತಾರೆ. ಇವುಗಳನ್ನು ಕೋಳಿ ಮಾರುಕಟ್ಟೆಯಲ್ಲಿ ಇಲ್ಲವೆ ಸಂತೆಗಳು ಮತ್ತು ಊರಿನಲ್ಲಿ ಬೇಕಾದವರಿಗೆ ಮಾರಾಟ ಮಾಡುತ್ತಾರೆ. ಇದರಿಂದ ಬಂದ ಹಣವನ್ನು ಕೂಡಾ ತಮ್ಮ ಬದುಕಿನ ನಿರ್ವಹಣೆಗಾಗಿ ಉಪಯೋಗಿಸುವರು. ಹಿಂದಿನ ತಮ್ಮ ಹಿರಿಯರ ಕಾಲದಲ್ಲಿ ಕೋಳಿಗಳ ಮೊಟ್ಟೆಗಳನ್ನೇ ಮಾರಾಟ ಮಾಡಿ ಶಿಕ್ಷಣವನ್ನು ಕೊಡಿಸಿ, ಸರಕಾರಿ ನೌಕರಿಯಲ್ಲಿ ಸೇರುವಂತೆ ಮಾಡಿರುವುದನ್ನು ಅವರು ತಿಳಿಸುತ್ತಾರೆ. ಕೋಳಿಗಳು ದೀವರಲ್ಲಿ ಪ್ರತಿಯೊಂದು ಹಂತಕ್ಕೂ ಉಪಯೋಗವಾಗುತ್ತವೆ. ಹಬ್ಬಹರಿದಿನಗಳಲ್ಲಿ ದೇವರಿಗೆ ಬಲಿಕೊಡಲು ಮತ್ತು ತಮಗೆ ಮಾಂಸಹಾರಕ್ಕೆ, ಹಾಗೂ ಜೀವನದ ನಿರ್ವಹಣೆಗೆ, ಮಾರಾಟಕ್ಕೆ, ಉಪಯೋಗವಾಗುತ್ತದೆ. ಇಲ್ಲಿ ಕೂಡಾ ಸ್ತ್ರೀಯ ಪಾತ್ರ ಪ್ರಮುಖವಾಗಿದೆ.

೫. **ದನಗಳ ಮಾರಾಟ:** ದೀವರು ಮೂಲತಃ ಕೃಷಿಕರಾಗಿರುವುದರಿಂದ ಇವರು ಹಿಂದಿನಿಂದಲೂ ಕೂಡಾ ಪಶುಪಾಲನೆಯನ್ನು ತಮ್ಮ ಬದುಕಿನಲ್ಲಿ ಸಾಗಿಸಿಕೊಂಡು ಬಂದಿದ್ದಾರೆ. ಹೀಗೆ ಪ್ರಾಚೀನ ವ್ಯವಸ್ಥೆಯಲ್ಲಿ ಬೇಟೆ-ಪಶುಪಾಲನೆ -ಕೃಷಿ ಹಂತ -ಹಂತವಾಗಿ ಹೇಗೆ ಸಾಗಿಕೊಂಡು ಬಂದವೋ ಅಂದಿನಿಂದಲೂ ಪಶುಪಾಲನೆಯನ್ನು ತಮ್ಮ ಬದುಕಿನ ಒಂದು ಅಂಗವಾಗಿ ರೂಢಿಸಿಕೊಂಡು ಬಂದರು. ದೀವರ ಸಮುದಾಯಕ್ಕೆ ಪಶುಪಾಲನೆಯು ತನ್ನ ಜೀವನದ ಎಲ್ಲಾ ಹಂತಗಳಲ್ಲೂ ಪ್ರಮುಖ ಸ್ಥಾನವನ್ನು ಪಡೆದುಕೊಂಡು ಬಂದಿದೆ. ದೀವರು ಇವುಗಳ ಮಾರಾಟವನ್ನು ಮಾಡುವುದು ಅಂದರೆ ದಿನನಿತ್ಯ ಇವರ ಕಸಬೇನಲ್ಲ. ತಮಗೆ ಬೇಕಾದ ದನಗಳನ್ನು ಇಟ್ಟುಕೊಳ್ಳುವರು, ಉಳಿದವುಗಳನ್ನು ಮಾರಾಟ ಮಾಡುವರು. ವಿಶೇಷವಾಗಿ ದನಗಳನ್ನು ಹಾವೇರಿ, ಶಿರಾಳಕೊಪ್ಪ, ಹಾಸನ, ಮೈಸೂರಿನಂತಹ ಮಾರುಕಟ್ಟೆಯಲ್ಲಿ ಮಾರಾಟ ಮಾಡುವರು. ಹಾಗೆಯೇ ತಮಗೆ ಬೇಸಾಯಕ್ಕೆ ಮತ್ತು ಹಾಲಿನ ದೃಷ್ಠಿಯಿಂದ ಉತ್ತಮವಾದ ದನಕರುಗಳನ್ನು ಕೊಂಡು ತರುವರು. ಇಲ್ಲಿ ಪುರುಷರೆ ಪ್ರಮುಖ ಪಾತ್ರವಾದರೂ ದನಗಳ ಆರೈಕೆಯ ಎಲ್ಲಾ ಜವಾಬ್ದಾರಿಯನ್ನು ಮಹಿಳೆಯರೆ ತೆಗೆದುಕೊಳ್ಳುವಳು. ಇದರಿಂದಾಗಿ ಅವಳ ಪಾತ್ರ ವಿಶಿಷ್ಠವಾಗಿದೆ.

೬. **ನಾರಿನ ಸಲಕರಣೆಗಳ ಮಾರಾಟ:** ದೀವರು ತಮ್ಮ ನಿತ್ಯ ಬದುಕಿನಲ್ಲಿ ಕಲಾತ್ಮಕವಾಗಿ ದನಕರುಗಳಿಗೆ ನಾರಿನ ಸಲಕರಣೆಗಳನ್ನು ಮಾಡುವರು. ಇದು ವ್ಯವಸಾಯದ ಜೊತೆಗೆ ಬಿಡುವಿನ ವೇಳೆಯಲ್ಲಿ ಮಾಡುವ ಕುಲಕಸುಬಾಗಿದೆ. ಧನಗಳಿಗೆ ಹಗ್ಗ, ಕಣ್ಣಿಗೊಂಡೇವು, ಮೂಗುದಾಣ ಹೀಗೆ ವ್ಯವಸಾಯಕ್ಕೆ ಸಂಬಂಧಪಟ್ಟ ಎಲ್ಲ

ಕೃಷಿಪರಿಕರಗಳನ್ನು ತಯಾರು ಮಾಡಿ ಸಂತೆಗಳಲ್ಲಿ ಮಾರಾಟ ಮಾಡುವರು. ವ್ಯವಸಾಯಗಾರರು ಊರಿನಲ್ಲಿಯೇ ಇವರಿಂದ ಮಾರಾಟಕ್ಕೆ ಪಡೆಯುವರು. ಇದರಿಂದ ಬಂದ ಹಣವನ್ನು ತಮ್ಮ ದಿನ ನಿತ್ಯ ಬದುಕಿನ ನಿರ್ವಹಣೆಗೆ ಉಪಯೋಗಿಸಿಕೊಳ್ಳುವರು. ಈ ಕೆಲಸವನ್ನು ಗಂಡಸರೆ ಮಾಡುವರು. ಸಾಗರದ ಯಲಕುಂದ್ಲಿಯಲ್ಲಿ ಇಂಥ ವ್ಯವಸಾಯಗಾರರನ್ನು ಕಾಣಬಹುದಾಗಿದೆ. ಹೀಗೆ ಕೃಷಿಯ ಜೊತೆಗೆ ವಿವಿಧ ಕುಲಕಸುಬುಗಳನ್ನು ತಮ್ಮ ಜೀವನದ ನಿರ್ವಹಣೆಗಾಗಿ ಮಾಡಿಕೊಂಡ ದೀವರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತಮ್ಮ ಜೀವನಕ್ಕೆ ಭದ್ರಬುನಾದಿಯನ್ನು ಹಾಕಿಕೊಂಡಿದ್ದಾರೆ.

**ದೀವರಿಗೂ ಮತ್ತು ಮಾರುಕಟ್ಟೆಯ ಸಂಬಂಧ:**

ಕೃಷಿ ಸಮುದಾಯದವರಾದ ದೀವರು ವ್ಯವಸಾಯವನ್ನೇ ತಮ್ಮ ಮೂಲವೃತ್ತಿಯನ್ನಾಗಿ ಮಾಡಿಕೊಂಡಿರುವುದರಿಂದ ಅವರಿಗೆ ಜೀವನದ ಬದುಕಿಗೆ ವ್ಯವಸಾಯ ದಾರಿದೀಪವಾಗಿದೆ. ದೀವರ ಸಮುದಾಯದವರು ಅಲ್ಪ ಪ್ರಮಾಣದ ಭೂಮಿಯನ್ನು ಹೊಂದಿರುವುದರಿಂದ ಅವರು ವ್ಯವಸಾಯದ ಜೊತೆಗೆ ಸಣ್ಣಪುಟ್ಟ ಕುಲಕಸುಬುಗಳನ್ನು ಮಾಡಿಕೊಂಡಿದ್ದಾರೆ. ಇದರಿಂದ ಜೀವನದ ನಿರ್ವಹಣೆ ಸಾಗಿಸುತ್ತಿದ್ದಾರೆ. ಇಲ್ಲಿ ದೀವರಿಗೂ ಮಾರುಕಟ್ಟೆಗೆ ಯಾವುದೇ ರೀತಿಯ ಸಂಬಂಧ ಕಂಡುಬರುವುದಿಲ್ಲ. ಕೇವಲ ಕೃಷಿಯಲ್ಲಿ ಬೆಳೆದ ಕೆಲವು ಪರಿಕರಗಳನ್ನು ಮಾರಾಟಕ್ಕೆ ಮಾರುಕಟ್ಟೆಗೆ ಒಯ್ದು ಅದರಿಂದ ಹಣ ಪಡೆದುಕೊಂಡು ಬರುವುದನ್ನು ಬಿಟ್ಟರೆ ಮತ್ಯಾವುದೇ ಆಚರಣಾತ್ಮಕ ಸಂಬಂಧವಿಲ್ಲ. ಇವರ ವ್ಯವಸಾಯದ ಮುಖ್ಯ ಬೆಳೆ ಭತ್ತವಾಗಿರುವುದರಿಂದ ಅದು ಒಂದೇ ವಿಶೇಷವಾಗಿ ಮಾರುಕಟ್ಟೆಗೆ ಹೋಗುತ್ತದೆ. ಅಲ್ಲಿ ಭತ್ತಕ್ಕೆ ನಿಗದಿಯಾದ ಬೆಲೆಗೆ ಹಣ ಬರುತ್ತದೆ. ಇದರಿಂದ ಮುಂದಿನ ಕೌಟುಂಬಿಕ ಜೀವನ ಮತ್ತು ವ್ಯವಸಾಯಕ್ಕೆ ದಾರಿಯಾಗುತ್ತದೆ. ಇತ್ತೀಚೆಗೆ ಮೆಕ್ಕೆಜೋಳ, ಹತ್ತಿ, ಜೋಳದ ಬೆಳೆಗಳನ್ನು ಬೆಳೆಯಲು ಪ್ರಾರಂಭ ಮಾಡಿದ್ದಾರೆ. ದೀವರಿಗೆ ಸಣ್ಣಪುಟ್ಟ ಮಾರುಕಟ್ಟೆಗಳ ಸಂಬಂಧವೇ ಜಾಸ್ತಿ. ಉಳಿದಂತೆ ದೊಡ್ಡ ಮಾರುಕಟ್ಟೆಗಳಿಗೆ ಅವರ ಸಂಬಂಧ ತೀರಾ ಕಡಿಮೆ ಎನ್ನಬಹುದು.

**ಸರ್ಕಾರ ಕೈಗೊಂಡ ಕ್ರಮಗಳು:**

ನಾಡಿನ ವಿವಿಧ ಸಮುದಾಯದ ರೈತರು, 'ದೇಶದ ಬೆನ್ನೆಲುಬು' ರೈತರೇ ಇಡೀ ದೇಶವನ್ನು ತಮ್ಮ ಕೃಷಿ ಉತ್ಪನ್ನಗಳ ಯುವಕ ಜನರ, ಜೀವನವನ್ನು ಸಾಗಿಸುವಂತೆ ಮಾಡುತ್ತಾರೆ. ಹಾಗಾಗಿ ಕೃಷಿಕರನ್ನು ಜನರು ನಂಬಿ ಬದುಕುವವರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ರೈತರು ತಾವು ಬೆಳೆದ ಬೆಳೆಗಳಿಗೆ ಮಾರುಕಟ್ಟೆಯಲ್ಲಿ ತಕ್ಕುದಾದ ಬೆಲೆ ಸಿಗಬೇಕು. ಸರ್ಕಾರದಿಂದ ರೈತರಿಗೆ ವಿವಿಧ ರೀತಿಯ ಸಾಲ-ಸೌಲಭ್ಯಗಳು ದೊರೆಯುವಂತಾಗಬೇಕು ಮತ್ತು ಕೃಷಿಉತ್ಪನ್ನಗಳ ಮಾರುಕಟ್ಟೆ ವ್ಯವಸ್ಥೆ ದೋಷಮುಕ್ತದಿಂದ ಕೂಡಿರಬೇಕು. ಇದು ಅವರ ನಿಲುವಾಗಿದೆ. ಆದರೆ ಇಲ್ಲಿ ರೈತರಿಗೆ ತಾವು ಬೆಳೆದ ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಸರಿಯಾದ ಬೆಲೆ ಸಿಗದೆ ಇರುವುದು, ದಲ್ಲಾಳಿಗಳ ಮೋಸದ ಕಾರ್ಯದಿಂದ ನಿರಾಶರಾಗಿರುವುದು, ತೂಕದ ಶುಲ್ಕ, ವ್ಯಾಪಾರಸ್ಥರ ಕಮಿಷನ್, ಸ್ಥಳೀಯ ತೆರಿಗೆಗಳು, ಕೂಲಿ, ಸ್ಯಾಂಪಲ್ ರೂಪದಲ್ಲಿ ಮೋಸ, ಉಗ್ರಾಣಗಳು ಇಲ್ಲದಿರುವುದು, ರೈತರಿಗೆ ಸರಿಯಾದ ಮಾರುಕಟ್ಟೆಗಳ ಬಗ್ಗೆ ಮಾಹಿತಿ ತಿಳಿಸದಿರುವುದು, ಸರಿಯಾದ ಸಾರಿಗೆ ಸೌಲಭ್ಯ ಇಲ್ಲದಿರುವುದು, ದೇಶದ ರೈತರಲ್ಲಿ ಮತ್ತು

ಪ್ರಾದೇಶಿಕವಾಗಿ ಬರುವ ವಿವಿಧ ಸಮುದಾಯಗಳ ರೈತರಿಗೆ ನಿರಾಶಭಾವನೆಯನ್ನು ಮೂಡಿಸಿವೆ. ಹಾಗಾಗಿ ರೈತರು ತಮ್ಮ ಕೃಷಿಕಾರ್ಯದಲ್ಲಿ ಸಫಲತೆಯನ್ನು ಕಾಣಲು ಹಿಂದಾಗಿದ್ದಾರೆ, ಹಾಗಾಗಿ ಇತ್ತೀಚಿಗೆ ಸರ್ಕಾರ, ಎಲ್ಲ ರೈತ ಸಮುದಾಯಗಳ ಹಿತ ಕಾಪಾಡುವ ದೃಷ್ಟಿಯಿಂದ ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ಕೃಷಿ ಮಾರುಕಟ್ಟೆಯಲ್ಲಿ ಅಗಾಧ ಬದಲಾವಣೆಯನ್ನು ತಂದಿದೆ.

ಬುಡಕಟ್ಟು ಸಮುದಾಯಗಳು, ಬಡ ರೈತರು, ಹಿಂದುಳಿದವರು ಮತ್ತು ಇಡೀ ಕೃಷಿಕರನ್ನು ಒಳಗೊಂಡಂತೆ ಸರ್ಕಾರ ವಿವಿಧ ರೀತಿಯಲ್ಲಿ ಮಾರುಕಟ್ಟೆಯನ್ನು ರೂಪಾಂತರಿಸಿದೆ. ಮತ್ತು ರೈತರಿಗೆ ಅನುಕೂಲವಾಗುವಂಥ ರೂಪರೇಷೆಗಳನ್ನು ಜಾರಿಗೆ ತಂದಿದೆ. ಈ ಹಿನ್ನೆಲೆಯಲ್ಲಿ ಕೃಷಿ ಮಾರುಕಟ್ಟೆಯ ಸ್ಥಿತಿಗತಿಗಳ ಸುಧಾರಣೆಗೆ ಸರ್ಕಾರ ಕೈಗೊಂಡ ಕ್ರಮಗಳು ಇಂತಿವೆ.

**ನಿಯಂತ್ರಿತ ಮಾರುಕಟ್ಟೆಗಳ ಸಂಘಟನೆ:**

ಸರ್ಕಾರ ಬುಡಕಟ್ಟು ಸಮುದಾಯಗಳು ಅಲ್ಪ ಹಿಡುವಳಿದಾರರು, ಬಡರೈತರು ಮತ್ತು ಹಿಂದುಳಿದವರನ್ನೊಳಗೊಂಡಂತೆ ನಿಯಂತ್ರಿತ ಮಾರುಕಟ್ಟೆಗಳನ್ನು ಸ್ಥಾಪನೆ ಮಾಡಿದೆ. ಈ ಎಲ್ಲ ಮಾರುಕಟ್ಟೆಗಳು ನಗರ ಮತ್ತು ಪಟ್ಟಣಗಳಲ್ಲಿವೆ. ನಿಯಂತ್ರಿತ ಮಾರುಕಟ್ಟೆಯನ್ನು ೧೮೬೭ರಲ್ಲಿ ಬೇರಾರ್‌ನಲ್ಲಿ ಸ್ಥಾಪಿಸಲಾಯಿತು. ಇತ್ತೀಚಿಗೆ ಇದರ ಆಡಳಿತವನ್ನು ರಾಜ್ಯಸರ್ಕಾರದ ಸ್ಥಳೀಯ ಸಂಸ್ಥೆಗಳು, ರೈತರ ಪ್ರತಿನಿಧಿಗಳಿಂದ ರಚಿತವಾದ ಸಮಿತಿ ನೋಡಿಕೊಳ್ಳುತ್ತಿವೆ.

**ಇದರ ಕಾರ್ಯಗಳು:**

ಮಾರುಕಟ್ಟೆ ವೆಚ್ಚ, ತೂಕ, ಅಳತೆ, ಕಮೀಷನ್‌ಗಳ ನಿರ್ಧಾರ ಮಾಡುತ್ತದೆ.

ಮಾರುಕಟ್ಟೆ ಅವ್ಯವಹಾರಗಳನ್ನು ತಡೆಗಟ್ಟುತ್ತದೆ

ಅಳತೆ ಮತ್ತು ತೂಕವನ್ನು ವ್ಯವಸ್ಥೆಗೊಳಿಸಿದೆ.

ಮಾರುಕಟ್ಟೆಯ ಬಗ್ಗೆ ಮಾಹಿತಿ ಒದಗಿಸುತ್ತದೆ

ಉಗ್ರಾಣ ಸೌಲಭ್ಯ ಒದಗಿಸುತ್ತದೆ.

ಸಹಕಾರಿ ಮಾರಾಟ ವ್ಯವಸ್ಥೆ

ಸರ್ಕಾರ ನಾಡಿನ ಎಲ್ಲ ರೈತ ಸಮುದಾಯಗಳ ಹಿತದೃಷ್ಟಿಯಿಂದ ಸಹಕಾರಿ ಸಂಘಗಳನ್ನು ಸ್ಥಾಪಿಸಿದೆ. ಈ ಸಂಘಗಳ ಮೂಲಕ ಬುಡಕಟ್ಟು ಸಮುದಾಯಗಳನ್ನೊಳಗೊಂಡ ಎಲ್ಲ ರೈತರಿಗೆ ವಿವಿಧ ರೀತಿಯ ಅನುಕೂಲಗಳನ್ನು ಮಾಡಿಕೊಟ್ಟಿದೆ. ರೈತರ ಉತ್ಪನ್ನಕ್ಕೆ ಯೋಗ್ಯ ಬೆಲೆ ದೊರಕಿಸಿ ರೈತರ ಉನ್ನತಿಗಾಗಿ ಶ್ರಮಿಸುವುದೇ ಸಹಕಾರಿ ಮಾರಾಟದ ಪ್ರಥಮ ಧ್ಯೇಯ. ಈ ಸಂಘಗಳು ಬೆಲೆ ಜಾಸ್ತಿ ಇದ್ದಾಗ ರೈತರ ಉತ್ಪನ್ನಗಳನ್ನು ಮಾರಾಟ ಮಾಡುತ್ತವೆ. ಇದರಿಂದ ರೈತರು ಸುಗ್ಗಿಯ ಕಾಲದಲ್ಲೇ ದಾನ್ಯಗಳನ್ನು ಮಾಡಿ ನಷ್ಟ ಹೊಂದುವುದು ಕಾಣೆಸುತ್ತದೆ. ರೈತರ ಉತ್ಪನ್ನದ ಆಧಾರದ ಮೇಲೆ ಮುಂಗಡವಾಗಿ ಹಣ ಒದಗಿಸುತ್ತವೆ. ಇದರಿಂದ ರೈತರ ಜೀವನ ಸಾಗಿಸಲು ಸಹಾಯಕವಾಗುವಂತೆ ಮಾಡುತ್ತದೆ. ರೈತರಿಗೆ ಯೋಗ್ಯ ಬೆಲೆಗಳಿಗೆ ಸಾಧನ ಸಲಕರಣೆಗಳನ್ನು ಪೂರೈಸುತ್ತವೆ. ಪೇಟೆಯ ಸ್ಥಿತಿಗತಿಗಳ ಬಗ್ಗೆ ಉತ್ತಮ ಬೀಜಗಳ ಬಳಕೆಯ ಬಗ್ಗೆ ಸೂಕ್ತ ತಿಳುವಳಿಕೆ ನೀಡುತ್ತದೆ. ಕೃಷಿಯಲ್ಲಿ ಆಧುನಿಕ ಪ್ರಯೋಗಗಳನ್ನು ತೋರಿಸುತ್ತದೆ.

ದಾಸ್ತಾನು ಸೌಲಭ್ಯ ಒದಗಿಸಿದೆ. ಮತ್ತು ರೈತರಿಗೆ ಸಾಲ ಸೌಲಭ್ಯ ಒದಗಿಸುತ್ತದೆ. ಈ ಸಂಘಗಳು "ಒಬ್ಬನಿಗಾಗಿ ಎಲ್ಲರು, ಎಲ್ಲರಿಗಾಗಿ ಒಬ್ಬನು" ಎಂಬ ತತ್ವದ ತಳಹದಿಯ ಮೇಲೆ ರೂಪಗೊಂಡಿದ್ದು, ಎಲ್ಲರಿಗೂ ಸಮಾನ ಭಾವನೆಯನ್ನು ತೋರಿಸುತ್ತದೆ. ಈ ಸಂಘಗಳಲ್ಲಿ ಮೋಸದ ಕಾರ್ಯಕ್ಕೆ ಎಡೆ ಇಲ್ಲ. ಸಹಕಾರಿ ಮಾರಾಟವು ಸಮಗ್ರ ಕೃಷಿ ಉತ್ಪನ್ನ ಮಾರಾಟ ವ್ಯವಸ್ಥೆಯ ಒಂದು ಅವಿಭಾಜ್ಯ ಅಂಗವಾಗಿದೆ.

**ಯೋಗ್ಯತೂಕ ಮತ್ತು ಅಳತೆ ಪ್ರಮಾಣಗಳ ಬಳಕೆ:**

ಸರ್ಕಾರ ನಾಡಿನ ಎಲ್ಲ ಸಮುದಾಯದ ರೈತಗಿಗೆ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಆಗುತ್ತಿರುವ ಅನ್ಯಾಯವನ್ನು ತಡೆಗಟ್ಟಲು ತೂಕ ಮತ್ತು ಅಳತೆಯ ಪ್ರಮಾಣದ ಬಳಕೆಯನ್ನು ೧೯೫೮ರಲ್ಲಿ ಜಾರಿಗೆ ತಂದಿದೆ. ಪರಿಣಾಮವಾಗಿ ಏಕರೀತಿಯ ತೂಕ ಮತ್ತು ಅಳತೆ ಜಾರಿಗೆ ಬಂದು ದೇಶದ್ಯಾಂತ ರೈತರು ನೆಮ್ಮದಿಯಿಂದ ಇರಲು ಸಾಧ್ಯವಾಗಿದೆ.

**ಉಗ್ರಾಣ ಸೌಲಭ್ಯಗಳು:** ಸರ್ಕಾರವು ಎಲ್ಲ ರೈತ ಸಮುದಾಯಗಳನ್ನು ಕೃಷಿಯಲ್ಲಿಟ್ಟುಕೊಂಡು ಕೃಷಿ ಉತ್ಪನ್ನಗಳನ್ನು ಸಂರಕ್ಷಿಸಲು ದಾಸ್ತಾನು ಮಳಿಗೆಗಳನ್ನು ಸ್ಥಾಪನೆ ಮಾಡಿದೆ. ಕೇಂದ್ರೀಯ ಉಗ್ರಾಣ ನಿಗಮವು ೧೯೫೭, ಭಾರತ ಆಹಾರ ನಿಗಮ(I.C.I) ೧೯೬೫, ನಂತರ ೧೯೯೧ರ ವೇಳೆಗೆ F.C.I.C.W.C S.W.C.ಮತ್ತು ಇತರೆ ರಾಜ್ಯ ಉಗ್ರಾಣ ಸಂಸ್ಥೆಗಳು ಸ್ಥಾಪನೆಯಾಗಿ ರೈತರಿಗೆ ಅನುಕೂಲ ಒದಗಿಸಿಕೊಟ್ಟಿವೆ.

ಮಾರುಕಟ್ಟೆ ಮಾಹಿತಿ ಪ್ರಸಾರ: ಬುಡಕಟ್ಟು ಸಮುದಾಯಗಳನ್ನೊಳಗೊಂಡ ನಾಡಿನ ಎಲ್ಲ ರೈತ ಸಮುದಾಯಗಳಿಗೆ ಸರ್ಕಾರದ ಮಾರುಕಟ್ಟೆಯ ಬಗ್ಗೆ ಮಾಹಿತಿ ನೀಡಲು ಆಕಾಶವಾಣಿ ಮತ್ತು ದೂರದರ್ಶನಗಳ ಮೂಲಕ ಬೆಲೆ ನಿರ್ಧಾರದ ಮಾಹಿತಿ ಪ್ರಸಾರ ಮಾಡುತ್ತಿವೆ. ವೃತ್ತಪತ್ರಿಕೆಗಳು ಮತ್ತು ನಿಯತಕಾಲಿಕೆಗಳ ಮೂಲಕ ಮಾಹಿತಿ ರೈತರಿಗೆ ದೊರೆಯುತ್ತಿದೆ. ಇತ್ತೀಚಿಗೆ ರೈತರು ಪ್ರಜ್ಞಾವಂತರಾಗಿದ್ದಾರೆ.

**ಸರ್ಕಾರ ಕೊಳ್ಳುವಿಕೆ ಮತ್ತು ಬೆಂಬಲ ಬೆಲೆ ಘೋಷಣೆ:**

ಸರ್ಕಾರವು ನಾಡಿನ ಎಲ್ಲಾ ರೈತ ಸಮುದಾಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರ ಉತ್ಪನ್ನಗಳಿಗೆ ಬೆಂಬಲ ಬೆಲೆ ಬರುವಂತೆ ಮಾಡುತ್ತಿದೆ. ಖುದ್ದಾಗಿ ಸರ್ಕಾರವೇ ರೈತರಿಂದ ನೇರವಾಗಿ ಕೃಷಿಉತ್ಪನ್ನಗಳನ್ನು ಕೊಂಡು, ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿ ಜನರಿಗೆ ವಿತರಿಸುತ್ತದೆ. ಮಾರುಕಟ್ಟೆಯಲ್ಲಿ ಹೊಂದಾಣಿಕೆ ಸಾಧಿಸಲು ಸರ್ಕಾರದ "ಪರಿವೀಕ್ಷಣಾ ನಿರ್ದೇಶನಾಲಯವೊಂದನ್ನು" ಸ್ಥಾಪಿಸಿದೆ.

**ಮಾರುಕಟ್ಟೆ ಸಮೀಕ್ಷೆ:** ಸರ್ಕಾರವು ನಾಡಿನ ಎಲ್ಲ ರೈತ ಸಮುದಾಯಗಳನ್ನು ತನ್ನ ಕೇಂದ್ರ ಪರಿವೃತ್ತಿಯಲ್ಲಿಟ್ಟುಕೊಂಡು ಅವರಿಗೆ ಅನುಕೂಲವಾದ ಮಾರುಕಟ್ಟೆ ಸ್ಥಿತಿಗತಿಗಳ, ಬೆಲೆ ಮುಂತಾದ ಅಂಶಗಳ ಬಗ್ಗೆ ಸಮೀಕ್ಷೆ ನಡೆಸಿ ವರದಿಗಳನ್ನು ರೈತರಿಗೆ ತಿಳಿಸುತ್ತದೆ. ಈ ನಿಟ್ಟಿನಲ್ಲಿ ಸರ್ಕಾರದ ಬಡರೈತರು, ಗೇಣಿದಾರರು, ಚಿಕ್ಕಹಿಡುವಳಿದಾರರು ಮತ್ತು ಬುಡಕಟ್ಟು ಸಮುದಾಯಗಳ ರೈತರು ಮತ್ತು ನಾಡಿನ ಎಲ್ಲ ಸಮುದಾಯಗಳನ್ನು ಕೇಂದ್ರವಾಗಿಟ್ಟುಕೊಂಡು ಈ ಮೇಲಿನ ಯೋಜನೆಗಳನ್ನು ಜಾರಿಗೆ ತಂದು, ನಾಡಿನ ಎಲ್ಲ ರೈತರು ತಮ್ಮ ಕೃಷಿಯಲ್ಲಿ ಹೊಸ ಆಯಾಮವನ್ನು ಕಂಡುಕೊಳ್ಳುವಲ್ಲಿ ಮತ್ತು ಕೌಟುಂಬಿಕ ಬದುಕಿನಲ್ಲಿ ನೆಮ್ಮದಿಯಿಂದ ಇರುವಂತೆ ಮಾಡಿವೆ. ಆದರೂ ಇತ್ತೀಚಿನ ಸಾಮಾಜಿಕ ಕೃಷಿ ವ್ಯವಸ್ಥೆಯಲ್ಲಿ ದೋಷಗಳು ಏತೇಚ್ಛವಾಗಿದ್ದು ರೈತರ ನೆಮ್ಮದಿಯ ಬದುಕು ಕಷ್ಟಸಾಧ್ಯವಾಗಿದೆ. ಎಂಬುದನ್ನು ಮರೆಯುವಂತಿಲ್ಲ.

ಶಿವಮೊಗ್ಗ ಜಿಲ್ಲೆಯ ಸಾಗರ-ಸೊರಬ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ದೀವರ ನೆಲೆಗಳಿಗೆ ಭೇಟಿ ನೀಡಿ ಅವರ ಜೀವನ ವಿಧಾನ ಅವರ ಸಂಸ್ಕೃತಿ, ಸಂಪ್ರದಾಯವನ್ನು ಸಮಾಜಶಾಸ್ತ್ರೀಯ ವ್ಯಾಪ್ತಿಯಲ್ಲಿ ಮತ್ತು ಬದಲಾವಣೆ ದೃಷ್ಟಿಯಿಂದ ಪರಿಶೀಲಿಸಿ ಈ ಪ್ರಬಂಧವನ್ನು ರಚಿಸಲಾಗಿದೆ. ಈ ಪ್ರಬಂಧಕ್ಕೆ ಸಂಬಂಧಿಸಿದಂತೆ ಇದರ ನಿರೂಪಣೆಯನ್ನು ಹೆಚ್ಚಾಗಿ ಕ್ಷೇತ್ರ ಕಾರ್ಯದಿಂದ ಬಂದಿರುವ ಮಾಹಿತಿಗಳನ್ನು ಬಳಸಿಕೊಂಡು ಅಗತ್ಯವಿದ್ದಂತೆ ಇತರೆ ಆಕರಗಳನ್ನು ದಾಖಲಿಸಲಾಗಿದೆ.

ಶಿವಮೊಗ್ಗ ಜಿಲ್ಲೆಯಾದ್ಯಾಂತ ಈ ಸಮುದಾಯ ನೆಲೆಸಿದೆ. ಕೆಲವು ಜನರು ನಾಗರೀಕತೆ ಸೋಂಕಿಲ್ಲದೆ ಹಳ್ಳಿಗಾಡುಗಳಲ್ಲಿ ನೆಲೆಸಿದ್ದರೆ, ಇನ್ನೂ ಕೆಲವು ಜನರು ಅತ್ಯಂತ ಮುಂದುವರೆದ ಮಹಾನಗರಗಳಲ್ಲಿ ಜೀವಿಸುತ್ತಿದ್ದಾರೆ. ಇಂತಹ ಪ್ರದೇಶಗಳಲ್ಲಿ ಬದುಕುತ್ತಿರುವ ಕೆಲವು ಬುಡಕಟ್ಟುಗಳ ಜನರ ಜೀವನ ವಿಧಾನವು ಬದಲಾವಣೆಗೊಂಡಿದೆ. ಇನ್ನು ಬೆಳವಣಿಗೆ ಹಂತದಲ್ಲಿರುವ ಸಾಗರ-ಸೊರಬ ಪಟ್ಟಣದಂಥ ಪ್ರದೇಶಗಳಲ್ಲಿ ಜೀವಿಸುವ ಜನರು ಕೂಡಾ ಜೊತೆ-ಜೊತೆಗೆ ಪರಿವರ್ತನೆಗೊಳ್ಳುತ್ತಲಿದ್ದಾರೆ. ಇಂತಹ ಪ್ರಸಂಗಗಳನ್ನು ಸಾಗರ-ಸೊರಬ ಪಟ್ಟಣದ ದೀವರಲ್ಲಿ ಕಾಣುತ್ತೇವೆ. ಈ ಸಮುದಾಯದ ಜನರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಬದುಕಿನಲ್ಲಿನ ವಿಶೇಷತೆ ಹಾಗೂ ಇವುಗಳಲ್ಲಾದ ಕೆಲವು ಬದಲಾವಣೆಗಳನ್ನು ಅತಿ ಸೂಕ್ಷ್ಮವಾಗಿ ಅವಲೋಕಿಸಿ ವಿಶ್ಲೇಷಿಸಲಾಗಿದೆ. ಆದರೆ ಇಲ್ಲಿನ ಜನರು ತಮ್ಮ ಸಂಸ್ಕೃತಿಯನ್ನು ಸಂಪೂರ್ಣವಾಗಿ ಬಿಡದೆ ಮುಂದುವರಿಯುತ್ತಿದ್ದಾರೆ.

ಪ್ರಸ್ತುತ ಸಮಾಜದಲ್ಲಿ ಅನೇಕ ಜಾತಿ ಭೇದಗಳಿದ್ದರೂ ಸಹ, ಅಪಾರ ಜ್ಞಾನ ಸಂಪತ್ತನ್ನು ಕಟ್ಟಿಕೊಂಡ, ಅನೇಕ ಸಮುದಾಯಗಳು ಇನ್ನೂ ಸಾಮಾಜಿಕ ಪರಿಸರದ ಮಧ್ಯದಲ್ಲಿ ಅನನ್ಯತೆಯನ್ನು ಕಾಯ್ದುಕೊಂಡಿವೆ. ಆಧುನಿಕ ಜಗತ್ತಿನ ಅಭಿವೃದ್ಧಿ ಚಕ್ರಕ್ಕೆ ಸಿಲುಕಿದ ಸಮುದಾಯಗಳು ಬದಲಾಗುವುದು ಸಹಜ ಕ್ರಿಯೆಯಾಗಿದೆ. ಬದಲಾವಣೆ ಎಂಬುದು ಆರ್ಥಿಕ ವರ್ತುಲದ ನೀತಿಯೇನೋ ನಿಜ. ಆದರೆ ಸಮುದಾಯಗಳ ಪಾರಂಪರಿಕ ಜ್ಞಾನಸಾಹಿತ್ಯ, ಕಲೆ, ಸಾಂಪ್ರದಾಯಿಕ ಆಚರಣೆಗಳು, ನಂಬಿಕೆಗಳು, ಮುಂತಾದ ವಿಷಯಗಳ ಸ್ಥಿತ್ಯಂತರಗಳನ್ನು ತಿಳಿಯಲಾಗಿದೆ. ಹಾಗೆಯೇ, ಭೌತಿಕ ಸಮಾಜವನ್ನು ಸುಂದರವಾಗಿ ನಿರ್ಮಿಸಿದ್ದು, ವಿವಿಧ ಭಿನ್ನತೆಗಳನ್ನು ಹೊಂದಿದ್ದ ಸಮಾಜದಲ್ಲಿ, ದುಡಿಯುವ ವರ್ಗವನ್ನು ನಿರಂತರವಾಗಿ ಆಳಿದ ಪ್ರಬಲ ಜಾತಿವರ್ಗಗಳು ಅತ್ಯಂತ ಕ್ರೂರವಾಗಿ ನಡೆಸಿಕೊಂಡು ಬಂದಿವೆ. ಅದರಲ್ಲೂ ಸ್ವಾತಂತ್ರ್ಯಪೂರ್ವದಲ್ಲಿ ಇಂತವರ ದಬ್ಬಾಳಿಕೆಗೆ ನಲುಗಿದ್ದ ಬುಡುಕಟ್ಟು ಸಮುದಾಯಗಳು ಇಂದು ಪ್ರಜಾಪ್ರಭುತ್ವದ ನಿರ್ಧಾರದಿಂದಾಗಿ ತಮ್ಮ ಕೈಯಲ್ಲಿ ಅಧಿಕಾರ ಹಸ್ತಾಂತರಮಾಡಿಕೊಂಡಿವೆ. ಭಾರತದ

ಶ್ರೇಣೀಕೃತ ಸಮಾಜವನ್ನು ಸೃಷ್ಟಿಸಿದ ಧರ್ಮಶಾಸ್ತ್ರಗಳು ಮತ್ತು ಅಚ್ಚರಿ ಪಡುವಂತಹ ವಿದ್ಯಾಮಾನಗಳು ನಡೆದು ಹೋದವು. ಸ್ವತಂತ್ರ ಭಾರತದಲ್ಲಿ ಅನೇಕ ಘಟನೆಗಳು ಜರುಗಿ ಪ್ರಜಾಪ್ರಭುತ್ವ ನೀತಿಯಿಂದಾಗಿ ಎಲ್ಲ ಸಮುದಾಯಗಳು ಆರ್ಥಿಕ ಮತ್ತು ಶೈಕ್ಷಣಿಕ ಸವಲತ್ತುಗಳನ್ನು ಪಡೆದುಕೊಂಡವು. ಈ ಐವತ್ತು ವರ್ಷಗಳಲ್ಲಾದ ಬದಲಾವಣೆಯ ಗಾಳಿಯಿಂದಾಗಿ ಬುಡಕಟ್ಟು ಸಮುದಾಯಗಳ ಚಿತ್ರಣಗಳು ಬದಲಾದವು. ಲೌಕಿಕ ಅಧಿಕಾರದ ಹಸ್ತಾಂತರದಿಂದಾಗಿ ಸಾಮಾಜಿಕ ನ್ಯಾಯ ಮತ್ತು ಆರ್ಥಿಕವ್ಯವಸ್ಥೆಯಲ್ಲಿ ಅನೇಕ ಮಾರ್ಪಾಡುಗಳಾದವು.

ಸಂಶೋಧನಾ ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ದೀವರ ಸಮುದಾಯವು ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಉಂಟಾದ ಅನೇಕ ರೂಪಾಂತರಗಳಿಗೆ ಮೂಕಸಾಕ್ಷಿ. ಸುಮಾರು ೧೨೦೦ ವರ್ಷ ಇತಿಹಾಸವಿರುವ ದೀವರು ಮೂಲತಃ ಬೇಟೆಗಾರರಾಗಿ ನಂತರ ವಿಜಯನಗರ ಕೆಳದಿ ಅರಸರ ಕಾಲದಲ್ಲಿ ಸೈನ್ಯದ ದಂಡನಾಯಕರಂತಹ ಪದವಿಯನ್ನು ಹೊಂದಿದ್ದು, ಈ ಜನಾಂಗದ ಧೈರ್ಯ ಸಾಹಸಕ್ಕೆ ದೊರಕಿದ ಸ್ಥಾನಮಾನವಾಗಿದೆ.

ಮಲೆನಾಡಿನ ದುಡಿಯುವ ವರ್ಗದವರಾದ ದೀವರು ನಿರಂತರವಾಗಿ ಭೂಮಾಲೀಕರಿಂದ ಹಿಂಸೆಗೊಳಗಾದವರೇ ಆಗಿದ್ದಾರೆ. ಇಲ್ಲಿ ಗಮನಿಸಬೇಕಾದ ಮುಖ್ಯ ವಿಷಯ ಎಂದರೆ ಬ್ರಿಟೀಷ್ ಮತ್ತು ಭೂಮಾಲೀಕರು ಶೋಷಣೆಯಲ್ಲಿ ನಲುಗಿದ ದೀವರು ಸ್ವಾತಂತ್ರ್ಯ ನಂತರದಲ್ಲಿ ಕಾಂಗ್ರೆಸ್ ಮತ್ತು ಭೂಮಾಲೀಕರ ಹಿಡಿತದಲ್ಲಿ ಸಿಲುಕಿದ್ದು ಒಂದು ವಿಪರ್ಯಾಸವೇ ಸರಿ. ಸ್ವಾತಂತ್ರ್ಯ ನಂತರ ಭಾರತದ ರಾಜಕೀಯ ಚಿತ್ರಣವನ್ನು ಗಮನಿಸಿದಾಗ ಅಧಿಕಾರ ಎಂಬುದು ಭೂಮಾಲೀಕರ ಹಿಡಿತದಲ್ಲಿದ್ದದರಿಂದ ಶೋಷಣೆ ಎಂಬುದು ದುಡಿಯುವ ವರ್ಗಕ್ಕೆ ಶಾಪವಾಗಿ ಪರಿಣಮಿಸಿತು.

ಪ್ರಸ್ತುತ ಸಂಶೋಧನಾ ಪ್ರಬಂಧದಲ್ಲಿ ದೀವರ ಸಮುದಾಯದ ಬದುಕಿನ ವಿವರಗಳನ್ನು ಮತ್ತು ವಿಶೇಷವಾಗಿ ಕೃಷಿಗೆ ಸಂಬಂಧಿಸಿದ ವಿಷಯಗಳನ್ನೂ ಪ್ರಸ್ತಾಪಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಒಟ್ಟು ಹತ್ತು ಅಧ್ಯಾಯಗಳನ್ನು ಮಾಡಿಕೊಂಡಿದ್ದು ಅನುಬಂಧದಲ್ಲಿ ಸಂಪ್ರಬಂಧಕ್ಕೆ ಸಂಬಂಧಿಸಿದಂತೆ ಹಲವು ಮಾಹಿತಿಗಳನ್ನು ಕೊಡಲಾಗಿದೆ. ಸಂಶೋಧನೆಯ ಶೀರ್ಷಿಕೆಯ ವಿಷಯಕ್ಕೆ ಸಂಬಂಧಿಸಿದಂತೆ ಸಂಶೋಧನೆ ನಡೆಸಲಾಗಿದೆ.

ಅಧ್ಯಾಯ ಒಂದರಲ್ಲಿ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಇವುಗಳಿಗೆ ಸಂಬಂಧಿಸಿದಂತೆ ಪ್ರಸ್ತಾಪಿಸಲಾಗಿದೆ.

ಅಧ್ಯಾಯ ಎರಡರಲ್ಲಿ ದೀವರ ಮೂಲ ಮತ್ತು ಪರಂಪರೆ ಇದಕ್ಕೆ ಪೂರಕವಾಗಿ ದೀವರ ಬಗೆಗಿನ, ಕಥೆಗಳು, ಪುರಾಣಗಳು ಐತಿಹ್ಯಗಳು, ಶಾಸನಗಳು, ಕೈಫಿಯತ್ತುಗಳಲ್ಲಿ ಯಾವ ವಿವರಣೆ ಇದೆ ಎಂಬುದರ ಬಗ್ಗೆ ವಿಶ್ಲೇಷಿಸಲಾಗಿದೆ. ನಂತರ ದೀವರ ಪದದ ಅರ್ಥವನ್ನೂ, ಅರ್ಥಕೋಶದಲ್ಲಿ ಪರ್ಯಾಲೋಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ದೀವರ ಸಾಮಾಜಿಕ ಬದುಕು ಎಂತಹುದು, ಕುಟುಂಬ ಪದ್ಧತಿ, ಬಳಿಗಳು, ಒಳಪಂಗಡಗಳು, ನ್ಯಾಯಪದ್ಧತಿ, ಇವುಗಳಲ್ಲಿ ಕೆಲವು ಬದಲಾವಣೆಗಳಾಗಿವೆ. ಅದು ವಿವಾಹದ ವಿಷಯಕ್ಕೆ ಬಂದಾಗ

ಸಾಗರ ಸೊರಬದಲ್ಲಿ ಸಾಕಷ್ಟು ಬದಲಾವಣೆಗಳು ಕಂಡುಬರುತ್ತವೆ. ಹಿಂದೆ ಉಪಪಂಗಡಗಳಾದ ಈಡಿಗರು ಮತ್ತು ದೀವರ ಮಧ್ಯೆ ವಿವಾಹ ವಾಗುತ್ತಿರಲಿಲ್ಲ ಆದರೆ ಇಂದು ಸಾಮಾನ್ಯವಿಷಯವಾಗಿದೆ. ಆಗಿನ ಕಾಲದಲ್ಲಿದ್ದ ಪಂಚಾಯ್ತಿ ತೀರ್ಮಾನಗಳು ಕಾಣದಾಗಿವೆ. ಮತ್ತು ದೀವರ ಉಡುಗೆ ತೊಡುಗೆಗಳಲ್ಲಿ ಮಹತ್ತರವಾದ ಬದಲಾವಣೆಗಳಾಗಿರುವುದು ಕಂಡುಬರುತ್ತದೆ. ಹಿಂದೆ ಇದ್ದ ಇವರ ವಿಶೇಷ ರೀತಿಯ ವಸ್ತು ಆಭರಣಗಳು ಅಷ್ಟಾಗಿ ಕಂಡುಬರುವುದಿಲ್ಲ. ಆಧುನಿಕ ರೀತಿಯ ಉಡುಗೆ ತೊಡುಗೆಗಳು ಇವರಲ್ಲಿ ಕಂಡುಬರುತ್ತವೆ. ಈಗ ಹಳ್ಳಿಗಳ ಪ್ರದೇಶಗಳಲ್ಲಿ ಕೆಲವು ಜನರು ಮಾತ್ರ ಸಂಪ್ರದಾಯ ಬಟ್ಟೆಗಳನ್ನು ಧರಿಸಿದರೆ ಪಟ್ಟಣಗಳಲ್ಲಿ ಇದರ ಸುಳಿವೇ ಇಲ್ಲದಂತಾಗಿದೆ. ಒಟ್ಟಾರೆ ಇವರ ಉಡುಗೆ ತೊಡುಗೆಗಳಲ್ಲಿ ಸಾಕಷ್ಟು ಪರಿವರ್ತನೆಗಳಾಗಿರುವುದು ತಿಳಿದುಬರುತ್ತದೆ. ಹಿಂದಿನ ಕಾಲದಲ್ಲಿ ದೀವರು ಬೆಳ್ಳಿ ಬಂಗಾರದ ಬಗ್ಗೆ ಹೆಚ್ಚು ಆಸಕ್ತಿ ಉಳ್ಳವರಾಗಿದ್ದರು. ಹಾಗೆಯೇ ಅವುಗಳನ್ನು ಮುಂದುವರೆಸಿಕೊಂಡು ಬಂದಿರುವುದು ಕಾಣುತ್ತದೆ. ಒಟ್ಟಿನಲ್ಲಿ ಬೆಳ್ಳಿ, ಬಂಗಾರದ ಆಭರಣಗಳು ದೀವರ ಮಹಿಳೆಯರಲ್ಲಿ ವಿಶೇಷತೆಯನ್ನು ಪಡೆದುಕೊಂಡಿವೆ. ಹಾಗು ಆಹಾರ ಪದ್ಧತಿ, ಇನ್ನಿತರ ವಿಷಯಗಳ ಬಗೆಗೆ ಪ್ರಸ್ತಾಪಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ದೀವರು ಮತ್ತು ಭೂಮಿ, ದೀವರು ಭೂಮಿಯೊಂದಿಗೆ ಒಡನಾಟ, ಭೂಮಿಗೆ ಸಂಬಂಧಿಸಿದಂತೆ ಎಲ್ಲ ಹಬ್ಬಗಳು ಆಚರಣೆಗಳು, ಭೂಮಿ ಹುಣ್ಣಿಮೆ, ಗೌರಿಹಬ್ಬ, ಕಾಗೋಡ್ ರೈತ ಹೋರಾಟ ಹೀಗೆ ಇವುಗಳಿಗೆ ಸಂಬಂಧಿಸಿದಂತೆ ವಿಶ್ಲೇಷಿಸಲಾಗಿದೆ.

ಅಧ್ಯಾಯ ಐದರಲ್ಲಿ ದೀವರು ಮತ್ತು ಮಳೆಗೆ ಸಂಬಂಧಿಸಿದಂತೆ, ಮಳೆಯ ಬಗ್ಗೆ ನಂಬಿಕೆಗಳು, ಆಚರಣೆಗಳು ವಿಶೇಷವಾಗಿ ಆರಿದ್ರಮಳೆ ಹಬ್ಬ, ಗಂಗೆ-ಗೌರಿ ಕಥೆ, ನೀರುಪೂಜೆ ಹೀಗೆ ವಿಶ್ಲೇಷಿಸಲಾಗಿದೆ.

ಅಧ್ಯಾಯ ಆರುರಲ್ಲಿ ಕೃಷಿಯಲ್ಲಿ ದೀವರು ಬಳಸುವ ಉಪಕರಣಗಳಿಗೆ ಸಂಬಂಧಿಸಿದಂತೆ ಎಲ್ಲ ಪರಿಕರಗಳನ್ನೂ ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಳುರಲ್ಲಿ ದೀವರಲ್ಲಿಯ ಸುಗ್ಗಿಸಂಪ್ರದಾಯಕ್ಕೆ ಸಂಬಂಧಿಸಿದಂತೆ ಎಲ್ಲ ವಿಷಯಗಳನ್ನೂ ಪ್ರಸ್ತಾಪಿಸಲಾಗಿದೆ.

ಅಧ್ಯಾಯ ಎಂಟರಲ್ಲಿ ದೀವರಲ್ಲಿಯ ಪಶುಪಾಲನೆಗೆ ಸಂಬಂಧಿಸಿದಂತೆ ಎಲ್ಲ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ.

ಅಧ್ಯಾಯ ಒಂಬತ್ತರಲ್ಲಿ ಕೃಷಿ ಉತ್ಪನ್ನಗಳ ಮಾರಾಟಕ್ಕೆ ಸಂಬಂಧಿಸಿದಂತೆ, ವಿಷಯವನ್ನು ಪ್ರಸ್ತಾಪಿಸಲಾಗಿದೆ.

ಅಧ್ಯಾಯ ಹತ್ತರಲ್ಲಿ ಸಮಾರೋಪದಲ್ಲಿ, ಅಧ್ಯಯನಕ್ಕೆ ಸಂಬಂಧಿಸಿದ ಕಂಡುಕೊಂಡ ವಿಷಯಗಳನ್ನು ಪ್ರಸ್ತಾಪಿಸಿಲಾಗಿದೆ. ಅನುಬಂಧದಲ್ಲಿ ನಕ್ಷೆ, ಗ್ರಂಥಸೂಚಿ, ಪತ್ರಿಕೆಗಳು, ಛಾಯಾಚಿತ್ರಗಳು, ಗಾದೆಗಳು, ಒಗಟುಗಳು ಮತ್ತು ವಕ್ತೃವಿವರಗಳ ಪಟ್ಟಿಯನ್ನು ಕೊಡಲಾಗಿದೆ. ಈ ಎಲ್ಲಾ ವಿಷಯಗಳನ್ನು ಕ್ಷೇತ್ರಕಾರ್ಯದ ಮೂಲಕ ಪ್ರತ್ಯಕ್ಷವಾಗಿ ನೋಡಿ, ಗಮನಿಸಿ ದಾಖಲಿಸಲಾಗಿದೆ.

ನನ್ನ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಇದುವರೆಗೂ ನಾನು ಕಂಡುಕೊಂಡು ವಿಷಯಗಳ ಬಗ್ಗೆ ನನಗೆ ತಿಳಿದ ಮಟ್ಟಿಗೆ ವಿಶ್ಲೇಷಿಸಿದ್ದೇನೆ. ನನ್ನ ಗಮನಕ್ಕೆ ಬಾರದ ವಿಷಯಗಳು ಇಲ್ಲಿ ಇರಬಹುದು. ಸಾಗರ ಸೊರಬ ಪ್ರದೇಶಗಳಲ್ಲಿ ನೆಲೆಸಿರುವ ದೀವರು ತಮ್ಮ ಮೂಲವೃತ್ತಿಯಾದ ಕೃಷಿಯೊಂದಿಗೆ ಹೊಸ ಬದುಕಿನತ್ತ ಜೀವನ ಸಾಗಿಸುತ್ತಿದ್ದಾರೆ. ಇಲ್ಲಿ ಕೊಡುವ ಹಲವು ಅನುಭವಗಳು ಮತ್ತು ಮಾಹಿತಿಗಳು ಸಂಪ್ರಬಂಧದುದ್ದಕ್ಕೂ ಕಂಡುಬರುತ್ತವೆ. ಈ ಎಲ್ಲಾ ಮಾಹಿತಿಗಳು ಮುಂದಿನ ಅಧ್ಯಯನಕಾರರಿಗೆ ಹೆಚ್ಚು ಪೂರಕವಾಗಬಲ್ಲದು ಎಂಬ ಆಶಯವಿದೆ.

**ಪ್ರಸ್ತುತ ಅಧ್ಯಯನದಲ್ಲಿನ ಫಲಿತಗಳು**

೧. ದೀವರು ಸಾಗರ, ಸೊರಬ, ಹೊಸನಗರ, ತೀರ್ಥಹಳ್ಳಿ, ಶಿಕಾರಿಪುರದಲ್ಲಿ ಹೆಚ್ಚಾಗಿ ವಾಸವಾಗಿರುವ ಇವರು ಸಿದ್ದಾಪುರ ಮತ್ತು ಉ.ಕ. ದಲ್ಲಿ ವಿರಳವಾಗಿ ಕಂಡುಬರುತ್ತಾರೆ.

೨. ಹಸೆಚಿತ್ತಾರದಲ್ಲಿ ದೇವರು ಕೌಶಲ್ಯ ಮೆರೆದಿದ್ದಾರೆ. ಪ್ರವೀಣರಾಗಿದ್ದಾರೆ.

೩. ಭೂಮಿ ಹುಣ್ಣಿಮೆ ಬುಟ್ಟಿಯ ಚಿತ್ತಾರದಲ್ಲಿ ಪರಿಣಿತರಾಗಿದ್ದಾರೆ.

೪. ಕೃಷಿ ಸಂಬಂಧಿತ ಆಚರಣೆಗಳು ಇವರಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

೫. ದೀವರು ಭೂಮಿಯನ್ನು ಮಾತೃಸ್ವರೂಪದಲ್ಲಿ ಕಾಣುವರು.

೬. ಆರಿದ್ರ ಮಳೆಹಬ್ಬವನ್ನು ದೀವರು ಮಾತ್ರ ಆಚರಿಸುವರು.

೭. ಕೃಷಿ ಉಪಕರಣಗಳನ್ನು ದೈವ ಸ್ವರೂಪದಲ್ಲಿ ಕಾಣುವರು.

೮. ಕರ್ನಾಟಕದಲ್ಲಿ ದೀವರು ಪ್ರಥಮ ರೈತ ಹೋರಾಟವನ್ನು ೧೯೫೧.೫೨ ರಲ್ಲಿ ಸಂಘಟಿಸಿರುವರು.

೯. ಬೇಟೆ, ಸೈನಿಕ, ಗೇಣಿರೈತ, ಹಾಗೂ ಭೂಮಾಲಿಕ ಸ್ಥಿತಿಗೆ ಪರಿವರ್ತನೆ ಹೊಂದಿದ ಇವರು ಇಂದು ಎಲ್ಲ ಕ್ಷೇತ್ರಗಳಲ್ಲೂ ಕಂಡುಬರುವರು.

೧೦. ಆಧುನಿಕತೆ ಮತ್ತು ಜಾಗತೀಕರಣದ ಇಂದಿನ ವ್ಯವಸ್ಥೆಯಲ್ಲಿ ಇವರು ಸಂಪ್ರದಾಯ ಆಚರಣೆಗಳನ್ನು ಇಂದಿಗೂ ರೂಢಿಸಿಕೊಂಡಿರುವರು.

೧೧. ರಾಜಕೀಯ ಕ್ಷೇತ್ರವಾದ ಶಿವಮೊಗ್ಗ ಜಿಲ್ಲೆಯಲ್ಲಿ ಇವರು ಪ್ರಮುಖ ಪಾತ್ರವಹಿಸುವರು.

# ಆಧಾರ ಗ್ರಂಥಗಳು

ರಾಧ್ಯ ಬಿ.ಎಂ.ಎಂ., ೧೯೮೫, ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಕರ್ನಾಟಕ ಸರ್ಕಾರ, ಬೆಂಗಳೂರು.

ದರಮಂಡಲಗಿ ಎಸ್.ಜಿ., ೧೯೯೧, ಭೂಬಳಕೆ ಯೋಜನೆ.

ಂತಜೆ ವಿಷ್ಣುಭಟ್., ೧೯೯೨, ಕೃಷಿಲೋಕ ಪ್ರವೇಶ, ಕನ್ನಡ ಪ್ರಪಂಚ ಪ್ರಕಾಶನ ದರ್ಬೆ.

ಳೇಗೌಡನಾಗವಾರ, ಆನಂದಮೂರ್ತಿ ಜಿ.ವಿ., (ಸಂ) ೧೯೯೭, ಶಾಂತವೇರಿ ಗೋಪಾಲಗೌಡರ ನೆನಪಿನ ಸಂಪುಟ, ಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಂಡೋಬ ಪಿ.ಕೆ., ೨೦೦೩, (ಪ್ರಸಂ.) ನಾಯಕ ಡಿ.ಬಿ. ಗಿರಿಜನ ಸಿರಿ, ಪ್ರೊ. ಖಂಡೋಬಾ ಅಭಿನಂದನಾ ಸಮಿತಿ, ನ್ನಡ ಅಧ್ಯಯನ ಸಂಸ್ಥೆ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

ೋಪಾಲಕೃಷ್ಣರಾವ್., ೧೯೮೬, ಸಾಮಾಜಿಕ ರಾಜಕೀಯ ಜ್ಞಾನದ ಮೂಲ ಪಾಠಗಳು, (ಅನು) ಪ್ರಗತಿ ಪ್ರಕಾಶನ, ಂಗಳೂರು.

ೌಡ ಜಿ.ವಿ., ೧೯೮೮, ಸಸ್ಯತಳಿ ಸುಧಾರಣೆ, ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ ಬೆಂಗಳೂರು.

ಂಗಾಧರ ದೈವಜ್ಞ., ೨೦೦೦, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಬುಡಕಟ್ಟು ಅಧ್ಯಯನ ಮಾಲೆ, ನ್ನಡ ವಿಶ್ವವಿದ್ಯಾಲಯ, ಹಂಪಿ.

ದಾನಂದಮೂರ್ತಿ ಎಂ., ೧೯೭೦, ಸಂಶೋಧನಾ ತರಂಗ ಸಂ-೨, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಚಿದಾನಂದಮೂರ್ತಿ ಎಂ., ೧೯೭೭, ಗ್ರಾಮೀಣ, ಬಾಪ್ಕೊ ಪ್ರಕಾಶನ, ಬೆಂಗಳೂರು.

ಚಂದ್ರಶೇಖರ ಬಿ. ದಾಮ್ಲೆ., ೧೯೫೨, ಭಾರತೀಯ ಸಾಮಾಜಿಕ ಅಧ್ಯಯನ, ನವೀನ ಪ್ರಕಾಶನ, ಬೆಂಗಳೂರು.

ಚನ್ನಬಸಪ್ಪ ಗೋರೂರು., ೧೯೯೭, (ಸಂ) ಕರ್ನಾಟಕ ಜಾನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು.

ಜೋಗನಶಂಕರ್., ೧೯೯೫, ಗ್ರಾಮಸಮಾಜ, ಜೀವನ ಪ್ರಕಾಶನ, ಮೈಸೂರು.

ದೇವೇಂದ್ರಕುಮಾರ ಹ ಕಾರಿ., ೨೦೦೦, ಕೆ.ಎಸ್. ಸಂದ್ಯಾರೆಡ್ಡಿ, ಗ್ರಾಮೀಣ ಪಶುಸಾಕಾಣೆ, ಕನ್ನಡ ಪುಸ್ತಕ ಪ್ರಾಧಿಕಾರ.

ದೇವೇಂದ್ರಕುಮಾರ ಹ ಕಾರಿ., ೨೦೦೦, ಗ್ರಾಮೀಣ ವೃತ್ತಿಗಳು, ಕನ್ನಡ ಪುಸ್ತಕ ಪ್ರಾಧಿಕಾರ.

ದೇವೇಂದ್ರಕುಮಾರ ಹ ಕಾರಿ., ೨೦೦೦, ಕೆ.ಎಸ್. ಸಂದ್ಯಾರೆಡ್ಡಿ, ಗ್ರಾಮೀಣ ಉಡುಗೆ-ತೊಡುಗೆಗಳು, ಕನ್ನಡ ಪುಸ್ತಕ ಪ್ರಾಧಿಕಾರ.

ನಾಗೇಶ್ ಎಚ್.ವಿ., ೧೯೮೬, ಭಾರತೀಯ ಗ್ರಾಮ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ನಾಗೇಶ್ ಎಚ್.ವಿ., ಪುನಿತ್ ಎ.೯., ೧೯೮೬, ಭಾರತದಲ್ಲಿ ರೈತ ಹೋರಾಟಗಳು, ಚಂದ್ರನಾಥ್ ಪ್ರಕಾಶನ, ಧಾರವಾಡ.

ನಾಗರಾಜ ಟಿ., ೧೯೯೯, ಸಾಮಾಜಿಕ ಚಳುವಳಿಗಳು, ಚೇತನ್ ಬುಕ್‌ಹೌಸ್, ಮೈಸೂರು.

ನಾಗಮೋಹನ ದಾಸ್ ಎಚ್.ಎಸ್., ೧೯೬೬, ಸಮಾಜವಾದ, ಕನ್ನಡ ಪರಿಷತ್, ಬೆಂಗಳೂರು.

ನಾರಾಯಣಸ್ವಾಮಿ ಜೆ.ಹೋ., ೧೯೮೧, (ಅನು) ಭಾರತದ ರೈತ, ನೆಲಮನೆ ಪ್ರಕಾಶನ, ಮೈಸೂರು.

ನಾರಾಯಣ ಕೆ.ವಿ., ೧೯೯೯, ಕೃಷಿ ಪದಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಾಡಕರಣಿ ಎಂ.ವಿ., ೧೯೮೬, ಕರ್ನಾಟಕ ರೈತ ಹೋರಾಟಗಳು, ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು.

ಪ್ರಧಾನ ಗುರುದತ್ತ., ೧೯೮೫, (ಅನು) ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಪ್ರಭಾಕರ ಎ.ಎಸ್., ೨೦೦೦, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಭಾಕರ ಎ.ಎಸ್., ೨೦೦೫, ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬರಗೂರು ರಾಮಚಂದ್ರಪ್ಪ., ೧೯೯೪, ಸಂಸ್ಕೃತಿ-ಉಪಸಂಸ್ಕೃತಿ, ಭೂಮಿಬಳಗ ಮಾನಸ ಗಂಗೋತ್ರಿ, ಮೈಸೂರು.

ಬೋರಲಿಂಗಯ್ಯ ಹಿ.ಚಿ., ೧೯೯೫, ಕಾಡುಕಾಂಕ್ರೀಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡ ಸಾಗರ.

ಬೋರಲಿಂಗಯ್ಯ ಹಿ.ಚಿ., ೧೯೯೬, ಗಿರಿಜನ ನಾಡಿಗ ಪಯಣ, ರಾಶಿರೊಟ್ಟಿ ಪ್ರಕಾಶನ, ಬೆಂಗಳೂರು.

ಬೋರಲಿಂಗಯ್ಯ ಹಿ.ಚಿ., ೧೯೯೬, ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ.

ಬೋರಲಿಂಗಯ್ಯ ಹಿ.ಚಿ., ಎನ್. ಹುಚ್ಚಪ್ಪ ಮಾಸ್ತರ, ೨೦೦೦, ಕಾಗೋಡ ಚಳುವಳಿ ಸುವರ್ಣ ಸಂಪುಟ.

ಬೋರಲಿಂಗಯ್ಯ ಹಿ.ಚಿ., ಒಂದು ಬುಡಕಟ್ಟಿನ ಲೋಕದೃಷ್ಟಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬ್ರಹ್ಮದೇವಶರ್ಮ., ೧೯೯೫, ಕೃಷಿ ಘೋಷಣಾ ಪತ್ರ, ನವಪ್ರಕಾಶನ, ಬೆಂಗಳೂರು.

ಮಂಗಳಾ ಚ.ನಾ., ೧೯೯೯, ಮಾತೃಪೂಜೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮರಳ ಸಿದ್ಧಯ್ಯ ಎಚ್.ಎಂ., ೧೯೯೩, ಗ್ರಾಮೋನ್ನತಿ, ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು.

ಮಧುದಂಡವತೆ., ೧೯೮೦, ಮಾರ್ಕ್ಸ್ ಮತ್ತು ಗಾಂಧಿ, ಜನಪ್ರಕಾಶನ, ಬೆಂಗಳೂರು.

ಮೊಗಳ್ಳಿ ಗಣೇಶ್., ೧೯೯೯, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಜಶೇಖರ್ ಜಿ., ೧೯೮೦, ಕಾಗೋಡ ಸತ್ಯಾಗ್ರಹ, ಅಕ್ಷರ ಪ್ರಕಾಶನ, ಹೆಗ್ಗೋಡ ಸಾಗರ.

ರಾಜಶೇಖರ್ ಜಿ., ೧೯೯೩, ದಾರು ಪ್ರತಿಮಾ ನಾ ಪೂಜವೇ, ಅಕ್ಷರ ಪ್ರಕಾಶನ, ಹೆಗ್ಗೋಡ ಸಾಗರ.

ರಾಮಕೃಷ್ಣ ಜಿ., ದೇವಿ ಪ್ರಸಾದ್ ಮತ್ತು ಚಟ್ಟೋಪಾಧ್ಯಯ, ೧೯೮೪, ಲೋಕಾಯಿತ ದರ್ಶನ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ರಾಮಸ್ವಾಮಿ ಎಸ್.ಆರ್., ೧೯೮೯, ಶತಮಾನದ ತಿರುವಿನಲ್ಲಿ ಭಾರತ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು.

ರಾಮಪ್ಪ ಗೌಡ ಕೆ.ಎಸ್., ೧೯೯೫, ಮಲೆನಾಡಿನ ಅಂದಿನ ನೆನಪುಗಳು, ಸಹ್ಯಾದ್ರಿ ಪ್ರಕಾಶನ, ತೀರ್ಥಹಳ್ಳಿ.

ಲಕ್ಕಪ್ಪಗೌಡ ಎಚ್.ಜೆ., ೧೯೯೮, ಕರ್ನಾಟಕ ಬುಡಕಟ್ಟುಗಳು ಸಂ-೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ಲಕ್ಷ್ಮಣ ತೆಲಗಾವಿ., ೧೯೯೯, ಹಿಂದುಳಿದ ವರ್ಗಗಳು ಮತ್ತು ದಲಿತ ಚಳುವಳಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವೀಣಾ ಎಂ.ಪಿ., ಮನೆ, ಸಮಾಜ, ಸಂಸ್ಕೃತಿ, ನೆಲಮನೆ ಪ್ರಕಾಶನ ಶ್ರೀರಂಗಪಟ್ಟಣ ಮಂಡ್ಯ.

ವೆಂಕಟರಾವ್ ಬಿ,ವ್ಹಿ., ೧೯೯೨, ಮಣ್ಣು ಮತ್ತು ಬೆಳೆ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್, ಬೆಂಗಳೂರು.

ವೆಂಕಟರಾವ್ ಬಿ.ವ್ಹಿ., ೨೦೦೦, ಸತತ ಬೇಸಾಯ ಹಾಗೂ ಭೋಜನ ಪರಿಸರ ವಿಕಾಸ, ಸ್ವಪ್ನಬುಕ್‌ಹೌಸ್, ಬೆಂಗಳೂರು.

ಶಂಕರನಾರಾಯಣ ತೀ.ನಂ., ೧೯೮೭, ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಶಿವರಾಜ್ ಕೆ., ೧೯೯೫, ಪರಿಸರ ಆಧಾರಿತ ಕೃಷಿ, ಪ್ರಾರಂಭ ಅಲಿ ಅಸ್ಕರ್ ರಸ್ತೆ, ಬೆಂಗಳೂರು.

ಶ್ರೀಪತಿಕಲ್ಲೂರಾಯ., ೧೯೯೮, ಕೃಷಿರಂಗ ಒಂದು ಅವಲೋಕನ, ಪ್ರಸಾರಾಂಗ ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

ಶ್ರೀ ಪಡ್ರೆ., ಕೃಷಿ ಕೈಗೆ ಲೇಖನಿ, ಫಾರ್ಮರ್ ಫಸ್ಟ್‌ಟ್ರಸ್ಟ್, ಪುತ್ತೂರು.

ಶ್ರೀವಿಲಾಸ ರಾವ್ ಶಂಕ್ರಪ್ಪ ಮಾಗಿ., ೧೯೯೯, ಇಸ್ರೇಲ್ ಕೃಷಿದರ್ಶನ, ಎಸ್.ವಿ.ಬಾಗಿ ಎಜ್ಯುಕೇಶನ್ ಟ್ರಸ್ಟ್, ಬೆಳಗಾವಿ.

ಶ್ರೀಕಂಠ ಕೂಡಗಿ., ೧೯೮೨, ಭೂಮಿ ಹುಣ್ಣಿಮೆ.

ಶ್ರೀಕಂಠಯ್ಯ ಎಲ್., ೧೯೮೫, ಸಮಾಜವಾದ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಶ್ರೀನಿವಾಸ ಕಕ್ಕಿಲಾಯಿ., ೧೯೮೩, (ಅನು) ಮಾರ್ಕ್ಸ್‌ವಾದ ಮತ್ತು ಭಾರತದಲ್ಲಿ ದುಡಿಯುವ ವರ್ಗದ ಪಾತ್ರ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಶ್ರೀನಿವಾಸಚಾರಿ., ಬಡಗಿತನದ ದೇಶೀಯ ತಂತ್ರಜ್ಞಾನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸುಬ್ಬಣ್ಣ ಕೆ.ವಿ., ಮತ್ತು ಅಕ್ಷರ, ೧೯೮೩, ಮಾರ್ಕ್ಸ್ ಮತ್ತು ಗಾಂಧಿ, ಜನಪ್ರಕಾಶನ, ಬೆಂಗಳೂರು.

ಸೂರ್ಯನಾಥ್ ಕಾಮತ್., ೧೯೭೯, (ಸಂ) ಕರ್ನಾಟಕ ಚರಿತ್ರೆ ೯ನೇ ಸಂಪುಟ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹನುಮಂತ., ೧೯೭೧, (ಸಂ) ಸಮಾಜವಾದದೆಡೆಗೆ, ಜನಪ್ರಕಾಶನ ಬೆಂಗಳೂರು.

ಹೆದ್ದೂರು ಶೆಟ್ಟಿ ಬಾಪು., ೧೯೮೩, ಸಾಮಾಜಿಕ ಕ್ರಾಂತಿ, ಜನಪ್ರಕಾಶನ ಬೆಂಗಳೂರು.

ಷೇಖ್ ಅಲಿ ಬಿ., ೧೯೯೭, (ಪ್ರ.ಸಂ.) ಕರ್ನಾಟಕ ಚರಿತ್ರೆ ೯ನೇ ಸಂಪುಟ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತ್ರಿಕೆಗಳು

ಕನ್ನಡ ಪ್ರಭ

ಕಾಗೋಡ ಕ್ರಾಂತಿ, ನೆನಪಿನ ಸಂಚಿಕೆ

ನಮ್ಮನಾಡು

ಪ್ರಜಾವಾಣಿ

ಲಂಕೇಶ್ ಪತ್ರಿಕೆ

ವಿಜಯಕರ್ನಾಟಕ

ಸಂಯುಕ್ತ ಕರ್ನಾಟಕ

ಹೊಸತು

# ಜಾನಪದ ಸಾಹಿತ್ಯ

## ಜನಪದ ಹಾಡುಗಳು

### ೧. ಮಳೆಯ ಹಾಡು

ತಂದೆ ಬೀರಪ್ಪನ ಕಾಜವಳಿತನಕೆ ಶೋಭಾನೆ ಅನ್ನೀರಿ
ದರುಕನೊಬ್ಬಳಿಸೆ ಗುಡಿಕಟ್ಟೀ ಶೋಭಾನ ಅನ್ನೀರಿ
ದರಕನು ಒಬ್ಬಳಿಸೆ ಗಾಡಿಕಟ್ಟಿ ಬೀರಪ್ಪ.
ಜಾಗ ಒಳ್ಳೆದಂದೆ ನೆಲೆಗೊಂಡೆ ಶೋಭಾನ ಅನ್ನೀರೆ.
ಗುತ್ತಿಂದ ಎಳೆಬಂದೆ ಗುತ್ತಿಂದ ಗಳೆ ಬಂದೆ.
ಗುತ್ತಿಂದ ಜಾರಿ ಮಗ ಬಂದೆ ಗುತ್ತಿಂದ ಜಾರಿಮಗ ಬಂದು ಕಟ್ಟಾರೆ ಶೋಭಾನ ಅನ್ನಿರೆ
ವಾಲೆ ಮಾಸುತ್ತವೇ ಹೊಸಗುಡಿ ಶೋಭಾನೆ
ಹೊಸಗುಡಿ ಬೀರಪ್ಪನ ಸೋಬಾನೆ ಅನ್ನೀರೆ.
ತಾವಳ್ಳೆದೆಂದೇ ನೆಲಿಗುಂದು ಶೋಭಾನೆ
ಕಾಯಿ ಹೇರಿ ಬಂದ ಬಾಗಲಗು ನಿಂದಾವೆ ಶೋಭಾನೆ ಅನ್ನಿರೆ.
ತಂದೆ ಬೀರಪ್ಪನ ಸುಳಿವಿಲ್ಲ ಶೋಭಾನ
ತಂದೆ ಬೀರಪ್ಪನ ಸುಳಿವಿಲ್ಲ. ಆ ಹೆರತಾಕಿ ಬರಿ ಅವರ ಏಳಿವಿಕೆ ಶೋಭಾನ
ಬಾಳೆಹಣ್ಣ ಹೇರ ಬಂದು ಬಾಗಲಿಗೂ ನಿಂದಂತಿ ಶೋಭಾನ ಅನ್ನೀರೆ.
ತಂದೆ ಬೀರಪ್ಪನ ಸುಳಿವಿಲ್ಲ ಶೋಭಾನ.
ತಂದೆ ಬೀರಪ್ಪನ ಸುಳಿವಿಲ್ಲ. ಅಹೇರ ಶೋಭಾನ ಅನ್ನಿರೆ.
ತೂರೆ ಬಲ್ಲಿ ಅವನ ಏಳವಿಕೆ ಶೋಭಾನ.
ಮುತ್ತಿನ ಡೊಳ್ಳೆ ಮತ್ತೆಲ್ಲಿ ನುಡಿದವೆ ಸೋಭಾನ ಅನ್ನಿರೆ.
ಚಿಕ್ಕಪಟ್ಟಣದ ನೆಲ್ಲೂರ ಬವುಲಿಗೆ ಶೋಭಾನ ಅನ್ನಿರೆ.

ಮುತ್ತಿನ ಡೊಳ್ಳೆ ನುಡುದಾವೆ ಶೋಭಾನ
ಕೆನ್ನೆ ವಲವಲಿದೆ ಕುಣವರಿಗೆ ಶೋಭಾನ
ಕೆನ್ನೆ ವಲವಲಿದೆ ಕುಣೆಯ ಅಣ್ಣಯ್ಯಗೆ ಶೋಭಾನ ಅನ್ನಿರೆ
ನ್ಯಾವಳ ಒಪ್ಪಿ ಕೊರಳಿಗೆ ಶೋಭಾನೆ.

೨. ನೀರು ತುಂಬುವ ಹಾಡು (ಬೂರೆಹಬ್ಬ)

ಆಚೇರ ಬಲಗೊಂಬೆ ಈಚೇರ ಬಲಗೊಂಬೆ
ಎಳ್ಳು ಜೀರಿಗೆಯ ಬಲಗೊಂಬೆ ಭೂಮಿಕವ್ವ
ಎಲ್ಲರ ಸೋಭಾನಕ್ಕೆ ಇವಮೇಲು ಪ

ಆಚೇರ ಬಲಗೊಂಬೆ ಈಚೇರ ಬಲಗೊಂಬೆ
ಕಾಕ ಜೀರಿಗೆ ಬಲಗೊಂಬೆ
ಕಾಕ ಜೀರಿಗೆ ಬಲಗೊಂಬೆ ಭೂಮಿಕವ್ವ
ಎಲ್ಲರ ಸೋಭಾನಕ್ಕೆ ಬಲಗೊಂಬೆ ೧

ಬಂದ ನೋಡಕೆ ಒಂದೇ ಗಂಧದ ಬಟ್ಟೆ
ಬಂದೆ ಸುರವರದ ಕೋನೆ ಹಣ್ಣು
ಬಂದೆ ಸುರವರದ ಕೋನೆ ಹಣ್ಣು ತಕ್ಕೊಂಡು
ಮಾಡ್ಯಾರ ಗಂಗವ್ವನ ಪೂಜೆಯ ೨

ಅರಲು ಬೆಳಕೀಲಿ ನಾರಿಯರು ದೇವ ಗೂಡತುಂಬಿ
ತುಂಬೆ ಹೂ ಮೇಲೆ ಉದಿರ‍್ಯಾವ ಗಂಗವ್ವ
ತುಂಬಿ ಕೊಡು ತಾಯಿ ನೀ ದಾನವ ೩

ತುಂಬಿ ಕೊಡು ತಾಯಿ ನೀ ದಾನವ ನಮ್ಮನಯ
ನಿಸ್ತ್ರೇಯ ಮಗನ ಜಳಕಕ್ಕೆ
ಎರಡಲೆ ಎರಡಡಿಕೆ ಎರಡೇ ಗಂಧದ ಬಟ್ಟೆ
ಎರಡೇ ಸುರವರದ ಕೋನೆ ಹಣ್ಣು
ಎರಡೇ ಸುರವರದ ಕೋನೆ ಹಣ್ಣು ತಕ್ಕೊಂಡು

ಮಾಡ್ಯಾರ ಗಂಗವ್ವನ ಪೂಜೇಯ ೪

ತಿಂಗಳ ಬೆಳಕೀಲಿ ನಾರಿಯರು ದೇವಗೊಡ ತುಂಬಿ
ಹುಣಸೆ ಹೂ ಮಾಲೆ ಉದರ್ಯಾವು
ಹುಣಸೆ ಹೂ ಮಾಲೆ ಉದರ್ಯಾವು
ಹುಣಸೆ ಹೂ ಮಾಲೆ ಉದರ್ಯಾವು ಗಂಗಮ್ಮ
ತುಂಬಿಕೊಡು ತಾಯಿ ನೀ ದಾನವ ನಮ್ಮನಯ
ಕನ್ನೆಯ ಮಗನ ಜಳಕಕ್ಕೆ ೫

## ೩. ಭೂಮಿ ಪೂಜೆ ಹಾಡು

ಹೆಡಗಲಿ ಗೊಬ್ಬರ ಬಯ್ಯೋ ಕೊಡುಗೆ ನೀರ ಒಯ್ಯೋ
ಹರಸಿ ಭೂಮಿಕೆವ್ವ ಎಡಮಾಡಿ ಏ ಸುವ್ವೀ
ಎಂಟ ಎತ್ತನಿಗೆ ಕುಂಟೆತ್ತ ಹೊಡಕಂದು ಬಿತ್ತಿ ಬಂದಿವ್ವ ಶಿವನೆ
ಮಳೆ ಇಲ್ಲ ಏ ಸುವ್ವೀ
ಬಿತ್ತೀ ಬಂದೆವು ಶಿವನೆ ಮಳೆ ಇಲ್ಲ.
ಬಂಗಿನ ಕಡೆಗೆ ಮುತ್ತಿನ ಮಾಡಿಕ್ಕೆ ಮಳೆ ಹೊಯ್ಯು
ಹರಗಿ ಬಂದ ಅಣ್ಣಯ್ಯ ಹವಳ ಮಂಚನೇರಿ
ಹರಹರನೆ ಶಿವನೆ ಮಳೆ ಇಲ್ಲ.
ಬಂಗಿನ ಕಡೆಗೆ ಹವಳದಂತೆ ಮಳೆಯ ಹೊಯ್ಯುತೆ ಏ ಸುವ್ವೀ
ಭೂಮಣ್ಣಿ ಹಬ್ಬಕ್ಕೆ ನಮ್ಮಿಬ್ಬರ ಕರಸಣ್ಣ
ನಾವಿಬ್ಬರು ಮಿಂದು ಮಡಿನುಟ್ಟ್ಯಾರತಿ ಬೆಳಗಿ.
ಬತ್ತಾಗಿ ಬೆಳಗಿ ಭೂಮಿಕವ್ವ ಏ ಸುವ್ವೀ
ಭೂಮಣ್ಣಿ ಹಬ್ಬಕ್ಕೆ ನಮ್ಮ ನಾಲ್ವರು ಕರಸಣ್ಣ
ನಾವು ನಾಲ್ವರು ಬಂದು ಮಡಿನುಟ್ಟು ಏ ಸುವ್ವೀ
ನಾವು ನಾಲ್ವರು ಬಂದು ಮಡಿನುಟ್ಟು ಆರತಿ ಬೆಳಗಿ
ಒತ್ತಾಗಿ ಬೆಳಗಿ ಭೂಮಿಕವ್ವ ಏ ಸುವ್ವೀ
ನಾವು ಅಕ್ಕತಂಗೇರು ಲೆಕ್ಕಕೇಳು ಮಂದಿ
ಒತ್ತಾಗಿ ಬೆಳೆಯ ಭೂಮಿಕವ್ವ, ಚಿತ್ತಾರದಡಿಗೆ ಕೆಳಗೀನೆ ಏ ಸುವ್ವೀ
ಉದ್ದೀನ ಎಲೆಯಾಗೆ ಭದ್ರಿರು ಕಣಕಪ್ಪ

ಒಡಿದು ಭದ್ರೆ ಭೂಮಿಕವ್ವ ಏ ಸುವ್ವೀ
ಬಿಳಿಜೋಳ ಕಡ್ಡೀಲೇ ಗಿಡಮುರಿದು
ಗುದ್ದಿಲೆ ಕಾವನಾಕ್ಕಿ ಕಡದರು ಮಾಳಿಗೆ ಕದನಾದೆ ಸುವ್ವೀ
ಕಡಿದರೆ ಮಾಳಿಗೆ ಕದನಾದೆ ಭೂಮ ಕವನ
ಕಡಿಜಾಣೆ ನೀ ಕುಂದ್ರೆ ಮಣಿಯಾದೆ ಏ ಸುವ್ವೀ
ಹಸಿರು ಕುಬ್ಬಸ ಒಯ್ಯೋ ಮನಿಯ ಅನ್ನ ಒಯ್ಯೋ
ಚರಗ ಮಗನ ಒಯ್ಯೋ ಬಯಕೆಯ ಚರಗ ಮಗನೇ ಒಯ್ಯೋ
ಬಯಕೆ ಭೂಮಿಕವ್ವ ಹಸಿರಾದವು ಗದ್ದೆ ಬಲಲಾಗ ಏ ಸುವ್ವೀ
ಹಸಿರ ಕುಬ್ಬಸ ಒಯ್ಯೋ ಹಾಲಬಾನ ಒಯ್ಯೋ ಸಣ ಮಗನ ಒಯ್ಯೋ
ಬಯಕೆ ಭೂಮಿಕವ್ವ ಹಸಿರಾದವು ಗದ್ದೆ ಬಲಲ್ಯಾಗ ಏ ಸುವ್ವೀ
ಹಸಿರಾದವು ಗದ್ದ ಬಲಲಾಗಿ ಊಟವ ಉಂಡದ ಕಂಡಾಳೆ
ಕೈವುದ ಶಿವ ದಂಡೆಯ ನೊಗವ ಹರತೆಯ ಏ ಸುವ್ವೀ
ದಂಡೆಯ ನೊಗವೇ ಹರತೆ ಕುಂಟೆಯ ಮೇಲೆ ಗಂಡನ ತೋಳೆಂದು
ವರಗ್ಯಾಳೆ ಏ ಸುವ್ವೀ

### ೪. ದೀಪಾವಳಿ ಹಬ್ಬದಹಾಡು ಬಸವಣ್ಣ ಕಾಲು ಪೂಜೆಯ ಹಾಡು

ಕಲ್ಲು ಕಡಲೆ ಮಾಡಿ ಹುಲ್ಲು ರಾಜನ ಮಾಡಿ
ಸಲ್ಲೀ ಬಸವಯ್ಯರ ವಚನವ, ಸೂವಯ್ಯ
ಸಲ್ಲೀ ಬಸವಯ್ಯ ವಚನವ ಓದಲುತ್ತೀವಿ.
ಲಾಲಿಸಿ ಕೇಳಿರಿ ಜನರೆಲ್ಲಾ ಸೂವಯ್ಯ
ನಮ್ಮ ಹಾಡ ಬಲ್ಲವರೇ ಬರಕ್ಕಳಿ ಸೂವಯ್ಯ
ಇಷ್ಟಂದ ಮಾತ ಕೇಳಾಂನೆ ತಮ್ಮಯ್ಯ
ತಾಯವ್ವನ ಕರದೇ ಬೆನೆಗೊಂಡೆ ಸೂವಯ್ಯ
ತಾಯವ್ವನ ಕರದೇ ಬೆನಗೊಂಡನೆಂದರೆ
ಹಾಲು ಬಾನನಿದ್ದಾರ ಉಣಲಿಕ್ಕೆ ಸೂವಯ್ಯ
ಉಂಡಾನ ಊಟವು ಗಂಗೆ ಹಸ್ತಿ ತೊಳೆದು
ಒಂದೇ ಮಂಚದಲೆ ವರಿಗ್ಯಾರೆ ಸೂವಯ್ಯ

ಒಂದೇ ಮಂಚದಲೆ ವರಿಗ್ಯಾಕೆ ತಮ್ಮಯ್ಯ
ಗಂಧ ದಿಳ್ಳವ ಎಲೆ ಮೇದ್ರೆ ಸೂವಯ್ಯ
ಮುತ್ತಿನ ಕಂದಿಲೆಯೇ ಬಲಗೈಯಲ್ಲಿ ತಕ್ಕಂದು
ರನ್ನದ ಗುದ್ಸಲಿಯ ಹೆಗಲೇರಿ ಸೂವಯ್ಯ
ಕನ್ನದ ಗುದ್ದುಲಿಯ ಹೆಗಲೇರೇನೆ ಸೂವಯ್ಯ
ಗುತ್ತಿ ಗುಡ್ಡಕ್ಕೆ ನೆಡದಾನೆ ಸೂವಯ್ಯ
ಗುತ್ತಿ ಗುಡ್ಡಕ್ಕೆ ನೆಡದಾನೆ ತಮ್ಮಯ್ಯ
ಅಚ್ಚ ಕವಲು ಗಿಡನ ಕಡದೆನ ತಮ್ಮಯ್ಯ
ಅಚ್ಚ ಕವಲಿಯ ಕಡಿದು ನಾರನೆತ್ತಿ ಸೂವಯ್ಯ
ಸೂರ್ಯನ ಬಿಸಿಲಿಗೆ ಒಗಿಸಾರೆ ತಮ್ಮಯ್ಯ
ಹುಂಡ ಎತ್ತಿಗೆ ಹಣೆಕಟ್ಟು ಹೂಡೆತ್ತಿಗೂ ಮುಖಚಾಲಿ
ಚಾಲಿಗೆ ದಂಡೆ ಉಡದಾರ ಸೂವಯ್ಯ
ಇಷ್ಟಿಂದ ಮಾತ ಹೇಳ್ಯಾನ ತಮ್ಮಯ್ಯ
ಗೆಣೆಕಾರರ ಮನೆಗೆ ಹೋಗಿ ಬರತಿನಿ ಸೂವಯ್ಯ
ಭಟ್ಟರ ಮನೆಗೋಗ ದಾರ್ಯಾಗೆ ಹಾಲದ ಕೊಡಬಂದ ಎದುರಿಗೆ ಸೂವಯ್ಯ
ಹಾಲದ ಕೊಡ ಬಂದ ಎದುರಿಗೆ ಈಗೊಳ್ಳೆದೆಂದು ನಡಬ್ಯಾರೆ ಸೂವಯ್ಯ
ಮತ್ತೆ ದಾರ್ಯಾಗೆ ತುಪ್ಪದ ಕೊಡ ಬಂದ ಎದುರಿಗೆ ಸೂವಯ್ಯ
ತುಪ್ಪದ ಕೊಡಬಂದ ಎದುರಿಗೆ ಅಂದೇಳಿ ಮತ್ತೊಳ್ಳೆದಂದೆ ನೆಡೆದಾರೆ ಸೂವಯ್ಯ
ಗುತ್ತಿ ಗುಡ್ಡದ ಮೇಲೆ ಎತ್ತಕಾಯಿ ಮಕ್ಕಳಿರಾ
ಎತ್ತ ಕಡೆ ಐತಿ ದೊಸಿಗರ ಅರಮನೆ ಸೂವಯ್ಯ
ಇಲ್ಲಿ ಎಡಕಾನ ಬಾಳೆಯ ಬಲಶಾಸಿನಾಗ ಸಂತಿಗೆಯ ಎಡನಡಿಗೆ ಸೂವಯ್ಯ
ನಾಡ ಸಂಪಿಗೆಯ ಎಡನಾಡಗಾಸಿ ಹೋದರೆ
ಅಲ್ಲಿ ಐತಿ ದೋಸಿಗರ ಅರಮನೆ ಸೂವಯ್ಯ
ಎಂದೂ ಬರದ ಮನುಷ್ಯ ಇಂದೆ ಬಂದಾನ.
ಕುಂಡ್ರಾಲು ಕೊಡಿ ಮಣೆಗಳ ಸೂವಯ್ಯ
ಕುಂಡ್ರಾಲು ಬರನಿಲ್ಲ ನಿಲ್ಲಾಲು ಬರನಿಲ್ಲ
ಬಸವನ ಪೂಜೆ ದಿನ ಹೇಳಿಸುವಯ್ಯ

ಬುಧವಾರ ಬೂತಿ ಬೆಸ್ತಾವಾರ, ಅಮವಾಸ್ಯೆ
ಬಸವನ ಪೂಜೆ ಶುಕ್ರವಾರ ಸೂವಯ್ಯ
ಇಷ್ಟಂದ ಮಾತ ಕೇಳ್ಯಾನ ತಮ್ಮಯ್ಯ
ತಿರುಗಿಬಂದಾನೆ ತಮ್ಮನಿಗೆ ಸೂವಯ್ಯ
ತಾಯವ್ವನ ಕರೆದ ಬುಧುವಾರ ಬೂರೆ, ಬೆಸ್ತವಾರ ಅಮವಾಸ್ಯೆ
ಶುಕ್ರವಾರ ಬಸವನ ಪೂಜೆ ಸೂವಯ್ಯ
ಇಷ್ಟಂದ ಮಾತ ಹೇಳ್ಯಾನೆ ತಮ್ಮಯ್ಯ ಮುತ್ತಿನ ಮಣಿ ಹಗ್ಗ
ಬಲಗೈಲಿ ಹಿಡದಾನ ಸೂವಯ್ಯ
ಮುತ್ತಿನ ಮಣಿ ಹಗ್ಗ ಬಲಗೈಯಲ್ಲಿ ತಕ್ಕಂದು
ಎತ್ತ ಮೈದೊಳಿಯಾಕ ಹೊರಟಾರೆ ಸೂವಯ್ಯ
ಗುತ್ತಿ ಹೊಳೆಯಾಗೆ ಮತ್ತೇರಿಗು ನೀರಾಟ
ಕನ್ನೆದೇವಿ ಹೆತ್ತ ಕುಮಾರಾಗ ಸೂವಯ್ಯ
ಕನ್ನೆದೇವಿ ಹೆತ್ತ ಕುಮಾರ ಚನ್ನಯ್ಯರಿಗೆ
ಎತ್ತ ಮೈದೊಳೆವ ಸಡಗಾರ ಸೂವಯ್ಯ
ಎತ್ತ ಮೈದೊಳೆವ ಮತ್ತಿಲ್ಲಿ ಬರುತಾನೆ
ಅಪಯ್ಯ ತಗಸೆ ಹೊಸ ಕೆರೆಸೂವಯ್ಯ
ಅಪಯ್ಯ ತಗಸೀದ ಹೊಸ ಕೆರೆ ಏರಿ ಮೇಲೆ
ಎತ್ತು ಮೈದೊಳಿದು ಬರುತ್ತಾನೆ ಸೂವೆಯ್ಯ
ಮೈದೊಳಿದು ಎತ್ತು ಬರುತ್ತಾವೆವೆಂದು ಗೋಮಸಾರಿಸಿದ್ದೆ
ಹರಿವಣ ಬಿಕಳಿಯ ಹಿಡಿದಿದ್ದೆ ಸೂವಯ್ಯ
ಹರಿವಣ ಬಿಕಳಿಯ ಹಿಡದಿದ್ದೆ ಅಣ್ಣಯ್ಯ
ಮೈದೊಳೆದ ಎತ್ತಿಗೆ ಓಕಳಿ ಸುಳಿದಿದ್ದೆ ಸೂವಯ್ಯ
ಯಾರು ಏಳಾದು ಮುನ್ನೆ ಕೋಳಿ ಕೂಗಾದು ಮುನ್ನೆ
ಮಾಳಿಗೆ ಕದವೇ ದಣಿಲಂದೇ ಸೂವಯ್ಯ
ಮಾಳಿಗೆ ಕದವೇ ದಣಿಲಂದೇ ನಮ್ಮನಿಯ ನಾರಿ ಎದ್ದು
ತೂರೆ ಕೊಟ್ಟೆ ಸುಡುತ್ತಾಳೆ ಸೂವಯ್ಯ
ಒಂದ ಸಿಬ್ಬಲ ಹಗ್ಗು, ಒಂದ ಸಿಬ್ಬಲ ಕಾಯಿ, ಮತ್ತೊಂದು ಸಿಬ್ಬಲ

ನೆನಿಗಡವೇ ಸೂವಯ್ಯ

ಮತ್ತೊಂದು ಸಿಬ್ಬಲ ನೆನಿಗಡವೇ ತಕ್ಕಂದು ಬಸವನ ಪೂಜೆಗೆ

ಅನಗೊಂಡ ಸೂವಯ್ಯ

ಹಕ್ಕಿ ಮುಟ್ಟಿದ ನೀರು, ಪಕ್ಷಿಮುಚ್ಚಿದ ನೀರು ಮತ್ತೆ ಹೋಗಿ

ಪನ್ನೀರು ಮಗ ತಂದೆ ಸೂವಯ್ಯ

ಮತ್ತೆ ಹೋಗಿ ಪನ್ನೀರು ಬೂರೆ ನೀರು

ಅಂಜಬೇಡಿ ಬಸವ ತಳದೀವ್ರ ಸೂವಯ್ಯ

ಸರದ ತೊರೆ ರೊಟ್ಟಿ ಆದ ಹಿಂಗಾರ

ಹಸಿ ಅಡಿಕೆ ಸುರದಾರೆ ಸುವಯ್ಯ

ಹಸಿ ಅಡಿಕೆ ಪಚ್ಚೇದು ತೆನಿಯ ಬಸವನ

ಕೊರಳಾಗೆ ಮೆರೆದಾವೆ ಸೂವಯ್ಯ

ಪಾದಕೊಡಿ ಬಸವ ಪಾದಕು ಶರಣೆಂದೆವು.

ಪಾದಕ್ಕೆ ಹೊಸ ಹೊನ್ನ ಇಡೆಸೇವು ಸೂವಯ್ಯ

ಪಾದಕ ಹೊಚ್ಚ ಹೊನ್ನ ಇಡಸೀನವು, ಮರತದ್ದು ಮೇಲೆ ನೀಡಿ ಬಸವಯ್ಯ

ಸುಖ ಬಾಳಿ ಎಂದು ನಮ್ಮನ್ನು ಹರಸಿ ಬಸವಯ್ಯ

ಉದ್ದೀನ ಕಾಳಹಾಗೆ ವರದಿಟ್ಟ ಬಸವನ ಕೋಡು

ಒಟೂರು ಸೀಮೆಯ ದೊರೆ ಬಂದ ಸೂವಯ್ಯ

ಒಟೂರು ಸೀಮೆಯ ದೊರೆ ಬಂದ

ಬಾನಾಡಿ ಎತ್ತಿ ಆರತಿಯ ಬಸವಯ್ಯಗೆ ಬೆಳಗಿರಿ ಸೂವಯ್ಯ

**ದೀಪಾವಳಿ ಹಬ್ಬದ ಹಾಡು**

ದೀಪಾವಳಿ ಎಂದರೆ ದೀಪಗಳ ಹಬ್ಬ, ದೀಪಾವಳಿ ಹಬ್ಬವೆಂದರೆ ಹಬ್ಬಗಳ ರಾಜ ರೈತರಿಗೆ ಪಟ್ಟಿ ಹಬ್ಬವಾಗಿದೆ. ಈ ಹಬ್ಬದಲ್ಲಿ ಗೋವುಗಳಿಗೆ ವಿಶೇಷ ಪೂಜೆ ಅಂಬಾಡಿಎಲೆ, ಪಚ್ಚೇತೆನೆ, ಹಣ್ಣು ಅಡಿಕೆ, ಸಿಂಗಾರ, ಚಂಡಿನಹೂ ಮುಂತಾದವುಗಳನ್ನು ಸೇರಿಸಿ ಮಾಲೆ ಹಾರದ ಸರ ಮಾಡುತ್ತಾರೆ. ಹಿಂದಿನ ದಿನವೇ

ಪೂಜೆಗೆ ಪೂರ್ವ ಸಿದ್ಧತೆ ಮಾಡಿಕೊಳ್ಳುತ್ತಾರೆ.

ನಕ್ಷತ್ರ ಅಡಗಿದ ಪುಷ್ಪಗಳರಳಿದ
ಕತ್ತಲೆ ಹರಿದು ಬೆಳಗಾದ ಜಾವಕ್ಕೆ
ಅಕ್ಕಂದಿರೇಳಿ ಪೂಜೆಗೆ....
ಉದಯದವೆದ್ದು ಹಳ್ಳಕ್ಕೆ ಎತ್ತುಗಳ
ಹೊಡೆದೊಯ್ದು ಮೈತೊಳೆದು ಕರೆತಂದ
ಗುತ್ತಿಯ ಹೊಳೆಯಲಿ ಎತ್ತು ಮೈ ತೊಳೆದೇವು
ಮುತ್ತಿನ ಸರಗಂಟೆ ಮರತೇವು ಅಪ್ಪಯ್ಯ
ಅಣ್ಣಯ್ಯನ ಕಳುಹಿ ತರಿಸೀರಿ...
ಗುತ್ತಿಯ ಹೊಳಿಗೆ ಹೋದಾನೆ ಅಣ್ಣಯ್ಯ
ಮುತ್ತಿನ ಸರಗಂಟೆ ತಂದಾನ
ದನಕರು ಎತ್ತುಗಳನ್ನೆಲ್ಲಾ ಮೀಯಿಸಿ
ಮುತ್ತಿನ್ನರಿವಾಣದಲ್ಲಿ ಬಪ್ಪುಳ್ಳ ಕೆಮ್ಮಣ್ಣು ತುಂಬೀ
ಚಿತ್ತೋಜಿ ಕಡೆದ ಮರಸಿದ್ದೆ ತಕ್ಕೊಂಡು
ಗೋವಿಗೆ ದಾಕು ಬಡಿದಾರು
ಬೇಡಿಕೆಮ್ಮಣ್ಣಿನಿಂದ ಸಿಂಗಾರಗೊಂಡ ಧನಕರುಗಳಿಗೆ
ಅತ್ತಿಯ ಎಲಯಾಲಿ ಹತ್ತುಕೊಳಗಕ್ಕೆ ರೊಟ್ಟಿ
ಅಚ್ಚ ಸಿಂಗಾರ ಎಲೆಯಡಿಕೆ ಪಚ್ಚೇತೆನೆ
ಒಪ್ಪಿತು ಗೋವಮ್ಮನ ಕೊರಳೀಗೆ

ಗೋಪೂಜೆ ಹಾಡು

ಮುತ್ತಿನ ಹರಿಗ್ವಾಡೆ ಮುತ್ತೀನ ಮುರಿಗ್ವಾಡೆ
ಮುತ್ತ ಕೆತ್ತರಿಸಿದಾ ಅರಮನೆ ಗೋವಮ್ಮಗೆ
ಮುತ್ತೀನಾರತೀಯ ಬೆಳಗೀರೆ
ಸೀತಾಳೆ ಚಪ್ಪರ ಶ್ರೀಗಂಧದುಪ್ಪರಿಗೆ
ರಾಮಲಕ್ಷ್ಮರ ಅರಮನೆ ಗೋವಮ್ಮಗೆ

ಹೂವಿನಾರತಿಯ ಬೆಳಗೀರೆ

ಗುತ್ತಿಗೂ ಇಲ್ಲಿಗೂ ಹೂವಾ ಥಂಗುರವ್ಹರಿಸಿ

ಮತ್ಯಾರು ಬೀದಗೀಲಿ ನಿಲದಗಿರಿ ನಮ್ಮನಯ

ಗೋವಿ ಸಿಂಗರಿಸಿ ಬರುತಾವೆ

ಗೋವುಗಳನ್ನು ಸಿಂಗರಿಸಿಕೊಂಡು ದಾರಿಯ ಮದ್ಯದಲ್ಲಿ ಸಾಗುತ್ತಿರುತ್ತವೆ.

ದಾರಿಬಿಟ್ಟು ಗದ್ದಗೆ ಹೋಗದಿರಲೆಂದು ಹಾಡುವ ಹಾಡು

ಬಾಗಿಲ ಮುಂದಕ್ಕೆ ಹತ್ತು ಖಂಡಗದ ಹೊಲ

ಮುಟ್ಟಿದೇ ಹೋಗೆ ಪಶುತಾಯಿ ನಿನ್ನಪಾದಕ್ಕೆ

ಮುತ್ತಿರಿಸಿ ಕೈಯ್ಯಾ ಮುಗಿದೇನು

ದಂಡೆ ಸೂಡಿದ ಹೂವು ಚಂದಾಗಿ ಬಂದಾರೆ

ಎಲ್ಲಾ ದೇವರಿಗೂ ಇಡಗಾಯಿ ಬಡೆಸುವೆನೆಂದು

ಹೊತ್ತಾನಪ್ಪಯ್ಯ ಹರಕೇಯ

ಗೋವುಗಳ ದಾರಿಯಲಿ ಸಾಗುತ್ತಿರುವಾಗಿನ ಹಾಡು

ಕಗ್ಗಲ್ಲು ಕಡಿಯಾದ

ನುಗ್ಗಲು ನುಚ್ಯಾದ

ಬಾಗೀಲ ತೋರಣವೇ

ಚಿಗುರಿದ ನಮ್ಮನೆಯ ಗೋವು

ಕೊಟ್ಟಿಗೆಯ ನಿಳಿವಾಗ

ಹೊಸ್ತಿಲದ ಮುಂದಕ್ಕೆ

ಹತ್ತು ತೆಂಗಿನ ಮರ ಚಿಪ್ಪು ಟಿಪ್ಪೋಡೆದು

ಫಲಬಂದು ನಮ್ಮದಯ ನೋವು

ಕೊಟ್ಟಿಗೆಯನಿಳಿವಾಗ

ಕಂಚುಗಾರರ ಕೇರಿ ಎಂಟು ನೂರಗಂಡಿ

ಕಂಚುಗಾರರ ಕೇರಿ ಒಳಗೆಲ್ಲಾ ನಮ್ಮ ಗೋವ

ನಿಂತು ನೋಡುವವರ ಪರಿ ನೋಡು

ಗೋವುಗಳು ಸಿಂಗರಿಸಿಕೊಂಡು ಸಾಗುವಾಗ ದೃಷ್ಟಿಯಾಗುವುದು ಬೇಡ ಎಂದು ಹಾಡುವ ಹಾಡು

ಹಂಡೆ ಹಚ್ಚಲು ಕಟ್ಟಿ ಹಿಂಡೀನಲ್ಲಿರುವೋದು

ಬಲ್ಲವರ ದೃಷ್ಟಿಗನದಲ್ಲಿ ಗೋವಳಿಗ
ಹೊತ್ತೊಳ್ಳಲ್ಲೆ ಗೋವ ಹೊಡೆತಾರೋ
ಕಾಳಿ ಕಚ್ಚಲ ಕಟ್ಟಿ, ಕಾಸಿಗೆ ಬಂದಿಹುದು
ಕಾನಲ್ಲ ನಾಡು ಗೋವಳಿಗ
ಹೊತ್ತುಂಚೆ ಗೋವು ಕೆರೆತಾರೋ
ಅಜ್ಜಿಯ ಮಾತಿಗೆ ಗೋವತ್ತಾಲಾದವು ನಾವಿತ್ತ ಬಂದೆವು
ಗುತ್ತಿಯ ಗುಡ್ಡ ಮರೆಯಾದ
ಬಸವಣ್ಣ ಮರೆಯಾದ ನಾವಿತ್ತ ಮುಖವಾದ
ಗ್ಯಾವೆಯ ಗುಡ್ಡ ಮರೆಯಾದ ನೆತ್ತಿಯ ಮೇಲಿದ್ದ
ಸೂರ್ಯ ಮರೆಯಾದ.

## ವೀಳ್ಯದ ಹಾಡು

ಗೋವಿನ ಸಗಣಿ ಕಾಲಲ್ಲಿ ತಕ್ಕಂದು ದೊಡ್ಡ ಮಾಳಿಗೊಳಗೆ ದೌವಡಾಸಿ
ದೊಡ್ಡ ಮಾಳಿಗೆಯೊಳಗೆ ದೌವಡಾಸಿ ಹೆತ್ತವ್ವ, ನೀನ್ನಬಿಗರು ಬರುತ್ತಾರೆ.
ದೊಡ್ಡ ಬೆರಳಿಗೆ ತಕ್ಕ ದೊಡ್ಡ ಉಂಗುರುದಾಕೆ, ದೊಡ್ಡೋಣಿಗಾಸೆ ಬರುತ್ತಾರೆ.
ಅಲದಾರ‍್ಯಾಗೆ ಆರು ಜನ ನೆಂಟರು ಆಲದೆಲೆಗಿಂತ ಮುದುಕರು
ಆಲದೆಲೆಯಾಂಗೆ ಮುದುಕರು ಬಂದೈದಾರೆ ಬಾಗಲುವುದಕೆ ಸಗುತೆಲ್ಲಾ
ಬಾಗಲವುದಕೆ ಸಗುತೆಲ್ಲಾ ಅಪ್ಪಯ್ಯ ದಂಟಗೋಲ ಕೊಟ್ಟೆ ಕರಕಳ್ಳಿ.
ನೆಂಟರು ಬರುತ್ತಾರೆಂದು ಮಂಟಪ ಸವರಿಸಿ ಎಂಟು ಮೂಲೆ ಗೆಂಟ ಹಾಸೆಹಾಕಿ
ಎಂಟು ಊಲಿಗೆಂಟ ಹಸೆ ಹಾಕಿ ಹೆತ್ತವ್ವ ನಿಮ್ಮ ನೆಂಟರು ಬರುತ್ತಾರೆ.
ಮನಿಯೆ ಮನಿಯಂದಿರಿ ಮನಿಯೆ ಮಂಟಪ ಸಾಲಗಲಿಗಲಿ ಎಂಬ ಗಿಳಿಪಿಂಡು
ಗುತ್ತಿ ಸೀಮೆಯಿಂದ ನೆಂಟರು ಬಂದಾರೆ ಅಪ್ಪಯ್ಯ ನಿಮ್ಮ ಸರಿಕರು
ಅಪ್ಪಯ್ಯ ನಿಮ್ಮ ಸರಿಕರು ಬಂದಾರೆ ಸಾಲೆ ಮುಂಚಿಡದೆ ಕರತನ್ನಿ
ಕರಿಯ ಕಂಬಳಿ ಹೊಂದಿಸಿ ಗದ್ದಿಗೆನಾಸಿ ಇತ್ತ ಕರಿಯರ ಹಿರಿಯರ
ಇತ್ತ ಕರೆಯದ ಹಿರಿಯರ ಹರಿವಣದಿಳ್ಳೇವ ನಡಿಯಲಿ.
ಹಲ್ಲಿಗೆ ಹರಿಯದಡಿಕೆ, ಕಲ್ಲಿಗೂ ಮುರಿಯದಡಿಕೆ ಎಲ್ಲೆ ತಂದಿರಿ ಬೀಗರೆ
ಎಲ್ಲಿ ತಂದಿರಿ ಬೀಗರೆ ಬಿಳಿಗೋಟು ನೆಲ್ಲೂರ ಜೀದ್ಯಾಗ ಬಿದ್ದಾ ಬಿಳಿ ಕಲ್ಲು

ಹೆಡೆಗೆಲಿ ಗೊಬ್ಬರ ಹಾಕಿ ಕೊಡೆನಾಗೆ ನೀರಹೊಯ್ದು ಬೆಳೆದ ರಥ ಬಳ್ಳಿ
ಬೆಳೆದ ರಥ ಬೆಳ್ಳಿ ನಾಗೊಳ್ಳಿ ಹರದಿ ನೀ ಮುಂದ ಬರಬೇಕು.
ಹರೆಯದ ಕೆಳಗೆ ಜೀರಿಗೆ ಮೂವಿನತೊಳಲೆ ಸಣ್ಣ ಮಕ್ಕಳ ಮರತಿದ್ದೆ.
ಅಕ್ಕಿ ಗೂಡಿಗೆ ವರಗಿ ನಿಂದೋಳ್ಯಾರೆ ಬೆತ್ತಕಾರಿನವರ ಹಿರಿಯಕ್ಕ.
ಮುತ್ತೈದೆ ಅಕ್ಕಿಯತಾರೆ ಚೆಬ್ಬಲದಾಗೆ
ಅಕ್ಕಮ್ಮ ತುಂಬಿದ ಚೆಬ್ಬಲ ಚಂದವಿಲ್ಲದೆ ಹೇಳಿ ನಿತ್ತಂತ ಜಾಗೆ ಜರುದಾಳೆ
ನಿತ್ತಂತೆ ಜಾಗೆ ಜರದು ತಾ ತಂದಾಳೆ, ದ್ಯಾವರಿಗೆ ಇದುರಾಗೆ
ಉಪ್ಪರಿಗೆ ಹೋಳಿಗೆ ವಪ್ಪಿರುವ ನೆಂಟರ ವಪ್ಪದಲ್ಲಿಗ ತಗತಲ್ಲಿ
ಇಳ್ಳೆವು ತಿದ್ದುವುಣ್ಣನ ಕಡಿಕುಸಲ ನೋಡಿರೆ, ಕಡಿರೆನಾ ಕಿವಿಗಿ ಬರಿಬೆಂಡು

## ಹಸೆ ಹಾಸುವ ಹಾಡು

ಅಟ್ಟಾ ಮೇಲಿರುವ ಕಟ್ಟೇನು ಚಾಪೆ ತಲ್ಲಿ
ಅಚ್ಚಿನ ಬೆಲ್ಲ ತಗತಲ್ಲಿ ಶೋಭಾನವೇ
ಅಚ್ಚಿನ ಬೆಲ್ಲ ತಗತಲ್ಲಿ ನಮನಿಯ
ಕೆಂಚೇರೆ ಒಂದು ತರಹದ ಹಸೆ ಹಾಕಿ ಶೋಭಾನವೇ.
ಗೋಡೆಯ ಮೇಲಿರುವ ಜೋಡಿ ಚಾಪೆ ತಲ್ಲಿ
ಜೋನಿಯ ಬೆಲ್ಲ ತಗತಲ್ಲಿ ಸೋಭಾನವೆ.
ಜೋನಿಯ ಬೆಲ್ಲ ತಗತಲ್ಲಿ ನಮನೀಯ.
ರಂಬೇರ ಒಂದು ತರದ ಹಸೆ ಹಾಕಿ ಶೋಭಾನವ
ಕಂಚಿ, ಕಂಚಿ, ಕೇರಿ, ಕಂಚಿ ಮೊದಲ ಕೇರಿ ಮಲ್ಲಕೇರಿ
ಕಂಚಿವಂತರ ಮಲಕಿನ ಸೀರೆ ಉಟ್ಟು
ಕಂಚೇರ ಒಂದು ತರದ ಹಸೆ ಹಾಕೆ ಶೋಭಾನ ಬನ್ನೀರೆ.
ಲಿಂಬಿ, ಲಿಂಬಿ ಕೇರಿ ಲಿಂಬಿ ಮೊದಲ ಕೇರಿ
ಲಿಂಗವಂತರ ಕೇರಿ ಮಲ್ಲಕೇರಿ ಶೋಭಾನವೆ
ಲಿಂಗವಂತರ ಕೇರಿ ಮಲಕಿನ ಸೀರೆ ಉಟ್ಟು.
ರಂಬೆರ ಒಂದು ತರಹದ ಹಸೆ ಹಾಕೆ ಶೋಭಾನವೆನ್ನೀರೆ.
ಆ ಕೈಲಿ ಆ ಗಂಟೇ ಮಾ ಕೈಯಲಿ ಮಡಿಯ ಗಂಟೆ.

ಮಡಿವಾಳನ ಮಡದಿ ಹಸೆ ಹಾಕೆ ನಡೆಮಾಡಿ ಶೋಭಾನವೆ

ನಿಸ್ತ್ರೀ ತಮ್ಮ ಅಳಿಯನ ಪಾದ ನೊಂದವೆಂದು ಬಣ್ಣ ಹಾಸಾಳೆ ತರತರ

ಬಣ್ಣದ ಹಸೆ ಹಾಸಾಳೆ ತರತರಕೆ ಶೋಭಾನವೆನ್ನೀರೆ.

ಹಂದರ ಚಪ್ಪರ ಹನ್ನೆರಡು ಗಾವ ವಾಗೆ.

ಕನ್ನೆ ಗೆದ್ದು ತಮ್ಮ ಬಂದಾರೆ

ಕನ್ನೆಯ ಗೆದ್ದು ತಮ್ಮ ಬಂದಾರೆ ಅಂದ ಹೇಳಿ

ಹೂವ ತುಂಬ್ಯಾರೆ ಎಡಬಲಕೆ ಶೋಭಾನವೆ.

**ಕೃಷಿಗೆ ಸಂಬಂಧಿಸಿದ ಕೆಲವು ಗಾದೆಗಳು:**

೧. ಅಂಗೈ ಹಾಗೆ ಹೊಲ ಮಾಡಿದರೆ ಮುಂಗೈ ತುಂಬ ತುಪ್ಪ.

೨. ಅಡಿಕೆಗೆ ಹೋದ ಮಾನ ಆಸ್ತಿಕೊಟ್ಟರು ಬಾರದು.

೩. ಅಡಿಕೆ ಮಾರಿ ಸಾಲಗಾರನಾದ, ಬಾಳೆಕಾಯಿ ಮಾರಿ ಧನಿಕನಾದ.

೪. ಅಸಲಿಲ್ಲದೆ ಬಡ್ಡಿ ಇಲ್ಲ ಮೊಸರಿಲ್ಲದೆ ಮಜ್ಜಿಗೆ ಇಲ್ಲ.

೫. ಅಕ್ಕಿ ಇದ್ದರೆ ಊಟ, ಮಕ್ಕಳಿದ್ದರೆ ಮನೆ.

೬. ಅಕ್ಕಿ ಕೊಟ್ಟು ಉಣ್ಣಲು ಅಕ್ಕನ ಮನೆಯೇ ಆಗಬೇಕೆ?

೭. ಅಡಿಕೆ ಕದ್ದರೂ ಕಳ್ಳ, ಆನೆ ಕದ್ದರೂ ಕಳ್ಳ.

೮. ಅಕಾಲಿಕ ಮಳೆಯಿಂದ ಮತ್ತು ಮತಿಹೀನ ಮಕ್ಕಳಿಂದ ಪ್ರಯೋಜನವಿಲ್ಲ.

೯. ಆದರೆ ಒಂದು ಮರ; ಹೋದರೆ ಒಂದು ಬೀಜ.

೧೦. ಆಡು ಮುಟ್ಟದ ಗಿಡವಿಲ್ಲ; ಗಾದೆ ಅಡದ ಜನರಿಲ್ಲ.

೧೧. ಊಟಕ್ಕೆ ಮೊದಲು ಉಪ್ಪಿನಕಾಯಿ; ಮಾತಿಗೆ ಮೊದಲು ಗಾದೆ.

೧೨. ಉಪ್ಪರಿಗೆಯ ಮನೆಯಿದ್ದರೂ ಉಪ್ಪಿಲ್ಲದೆ ಆಗದು.

೧೩. ಉಪ್ಪುತಿಂದವನು ನೀರು ಕುಡಿದಾನು.

೧೪. ಊಟ ಕೊಡುವ ಮನೆ ಹಾಳಾಗದು; ಗೊಬ್ಬರ ಕೊಡುವ ತೋಟ ಹಾಳಾಗದು.

೧೫. ಉತ್ತಮ ಬೀಜಕ್ಕೆ ಮೊಳಕೆಯನ್ನು ಪರೀಕ್ಷಿಸು; ಉತ್ತಮ ಬೆಳೆಗೆ ಕಳೆಕೀಳು.

೧೬. ಉಳುಮೆಯ ಕಾಲಕ್ಕೆ ಯಾತ್ರೆ ಮಾಡಿದರೆ; ಕಜಾವಿನ ಕಾಲಕ್ಕೆ ಕತ್ತಿ ಹುಡಕಬೇಕಾಗಿಲ್ಲ.

೧೭. ಉಳುವವನು ಪ್ರಪಂಚದ ಗಾಲಿಯ ಕೀಲು.

೧೮. ಉಪವಾಸ ಮಾಡುವುದೊಂದೇ ಭಕ್ತಿಯಲ್ಲ; ಅಗೆಯುವುದೊಂದೆ ಬೇಸಾಯವಲ್ಲ.

೧೯. ಎಣ್ಣೆ ಹಾಕಿದರೆ ಕಣ್ಣಿಗೆ ಗುಣ; ಮಣ್ಣು ಹಾಕಿದರೆ ಮರಕ್ಕೆ ಗುಣ.

೨೦. ಉತ್ತನ್ನು ನಂಬಿ ಬೀಜಹಾಕಬಾರದು; ನೆಂಟರನ್ನು ನಂಬಿ ಬದುಕಬಾರದು.

೨೧. ಎತ್ತುಗಳಿಲ್ಲದ ಬೇಸಾಯ ಸರಂಜಾಮುಗಳಿಲ್ಲದ ಪ್ರಯಾಣದಂತೆ.

೨೨. ಎರಡು ಗ್ರಾಮಗಳಲ್ಲಿ ಕೃಷಿ ಮಾಡುವುದು; ಇಬ್ಬರು ಹೆಂಡತಿಯನ್ನು ಇಟ್ಟುಕೊಂಡಂತೆಯೇ

೨೩. ಒಣಗಿದ್ದರ ಜೊತೆ; ಹಸಿಯು ಸುಟ್ಟುಹೋಯಿತು.

೨೪. ಒಂದು ಕರುವಾಯು ಕೊಂದರೆ; ಒಂಬತ್ತು ತೆಂಗು ನೆಟ್ಟ ಫಲ.

೨೫. ಒಣಭೂಮಿಯನ್ನು ವಿದವೆ ಹೆಣ್ಣನ್ನು ನಿರ್ಲಕ್ಷಿಸಬಾರದು.

೨೬. ಒಂದು ಅಗೆತ ಹತ್ತು ಉಳುಮೆಗೆ ಸಮ.

೨೭. ಒಣಭೂಮಿಗೆ ಹಟ್ಟಿಗೊಬ್ಬರ; ಒದ್ದೆ ಭೂಮಿಗೆ ಹಸುರೆತಿಗೊಬ್ಬರ.

೨೮. ಕಡಲೆ ಇದ್ದವನಿಗೆ ಹಲ್ಲಿಲ್ಲ; ಹಲ್ಲಿದ್ದವನಿಗೆ ಕಡಲೆ ಇಲ್ಲ.

೨೯. ಕಳೆ ಕೀಳದಿದ್ದ ಗದ್ದೆಯೂ; ದೇವರಿಲ್ಲದ ಗುಡಿಯೂ ಒಂದೇ.

೩೦. ಕಳೆಗಳನ್ನು ನೋಡಿ; ಫಸಲನ್ನು ನಿರೀಕ್ಷಿಸು.

೩೧. ಕಳೆ ಕಿತ್ತ ಗದ್ದೆಯೂ ಮಳೆ ಬಿದ್ದ ಗದ್ದೆಯೂ ಉತ್ತಮವಾಗಿ ಕಾಣಿಸಿಕೊಳ್ಳುತ್ತದೆ.

೩೨. ಕಾಡೆಲ್ಲ ಹುಡುಕಿ ಸೌದೆ ಇಲ್ಲ ಎಂದ ಹಾಗೆ.

೩೩. ಕಾಲದಲ್ಲಿ ಬಿತ್ತಿದ ಬೆಳೆ ಮುದುಕರ ಮಕ್ಕಳಂತೆ.

೩೪. ಕುಳಿತು ಉಣ್ಣುವವನಿಗೆ; ಕೊಪ್ಪರಿಗೆ ಹಣವಿದ್ದರೂ ಸಾಲದು.

೩೫. ಕೃತ್ತಿಕೆಯ ಮಳೆಯು ಕಿರುಬನ ಹಿಡಿತದಂತೆ.

೩೬. ಕೃಷಿಯು ಸ್ವಚ್ಛವಾದುದು ಸ್ತುತ್ಯವಾದುದು. ಕೃಷಿಯೇ ಎಲ್ಲಾ ಜೀವಿಗಳಿಗೆ ಆಧಾರ.

೩೭. ಕೃಷಿ ಇಲ್ಲದ ಮಾತು ಕಳೆ ಬೆಳೆದ ತೋಟಗಂತೆ.

೩೮. ಕೈ ಕೆಸರಾದರೆ ಬಾಯಿ ಮೊಸರು.

೩೯. ಕೊಟ್ಟಸಾಲ ಕೇಳದೆ ಹೋಯಿತು; ಮಾಡಿಬ ಬೆಳೆ ಕೊಯ್ಯದೆ ಹೋಯಿತು.

೪೦. ಕೋಣನ ಬೆನ್ನಿಗೆ ಮಳೆ ಬಿದ್ದ ಹಾಗೆ.

೪೧. ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು.

೪೨. ಕರ್ಜೂರ ಹಣ್ಣಾಗುವಾಗ; ಕಾಗೆಗೆ ಬಾಯಿ ಹುಣ್ಣು.

೪೩. ಗದ್ದೆಯ ಬದಲೇ ರೈತನ ತಲೆದಿಂಬು; ಹುಲ್ಲೇ ಹಾಸಿಗೆ.

೪೪. ಗಾಳಿ ಇಲ್ಲದೆ ಎಲೆ ಅಲುಗಾಡದು; ಬೆಂಕಿ ಇಲ್ಲದೆ ಹೊಗೆ ಬಾರದು.

೪೫. ಗುಣ ಇಲ್ಲದ ಹೆಣ್ಣು ರುಚಿಯಿಲ್ಲದ ಹಣ್ಣು.

೪೬. ಜಾಗ ನೋಡಿ ಬಿತ್ತಬೇಕು; ಗುಣ ನೋಡಿ ಹೆಣ್ಣು ಕೊಡಬೇಕು.

೪೭. ಪ್ರಬಲರ ಪಾರಿತೋಷಕಗಳಿಗಿಂತ; ಭೂಮಿಯ ಕಾಣಿಕೆಗಳೇ ಮೇಲು.

೪೮. ಬಡವನಾಗಿದ್ದರೆ ಬಾಳೆ ನೆಡು; ಬಾಳೆ ನೆಡುವುದಿದ್ದರೆ ಹಾಳವಾಗಿ ನೆಡು.

೪೯. ಬಡವನು ಉಳುಮೆಯಲ್ಲಿ ನಂಬಿಕೆ ಇಡುತ್ತಾನೆ; ಶ್ರೀಮಂತನು ಗೊಬ್ಬರದಲ್ಲಿ ನಂಬಿಕೆಯಿಡುತ್ತಾನೆ.

೫೦. ಬಾವಿಯನ್ನು ಸುಸ್ಥಿತಿಯಲ್ಲಿಟ್ಟರೆ; ಬಾವಿಯು ಹೊಟ್ಟೆಯನ್ನು ಸುಸ್ಥಿತಿಯಲ್ಲಿಡುತ್ತದೆ.

೫೧. ಬಾವಿಯಲ್ಲಿರುವ ಕಪ್ಪೆ ನೀರು ಕುಡಿಯದೇ ಇರುವುದೇ.

೫೨. ಬಾವಿ ತೋಡದೆ ನೀರು ಸಿಗದು; ಪ್ರಯತ್ನ ಮಾಡದೇ ಫಲ ಸಿಗದು.

೫೩. ಬಿತ್ತದೆ ಬೆಳೆಯಾಗದು; ಉಡದೆ ಕೊಳೆಯಾಗದು.

೫೪. ಬಿತ್ತನೆ ಕಾಲದಲ್ಲಿ ವಿರಾಮವಿಲ್ಲ; ಮರಣದ ನಂತರ ಭಯವಿಲ್ಲ.

೫೫. ಬಿತ್ತನೆಗೆ ಮೊದಲು ಬೀಜವನ್ನು ಪರೀಕ್ಷಿಸು; ಸವಾರಿಗೆ ಮೊದಲು ಕುದುರೆಯನ್ನು ಪರೀಕ್ಷಿಸು.

೫೬. ಬೋಜಕ್ಕಿಲ್ಲದ ಕುಂಬಳಕಾಯಿ ಏಕೆ? ಬಾಯಾರಿಕೆಗಿಲ್ಲದ ಮಜ್ಜಿಗೆ ಯಾಕೆ?

೫೭. ಬೇಸಾಯಗಾರನು ಬಡವನಾಗಿದ್ದರೆ; ಜಮೀನು ಬಡವಾಗುವುದು.

೫೮. ಬೆಳೆಯ ಗುಣ ಮೊಳಕೆಯಲ್ಲೇ ಕಂಡುಬರುತ್ತದೆ.

೫೯. ಬೆಂಕಿ ಇದ್ದಲ್ಲಿ ಹೊಗೆ ಇದೆ; ಕೆಸರಿದ್ದಲ್ಲಿ ನೀರಿದೆ.

೬೦. ಬೀಜವನ್ನು ಅರಿತವನು; ಬೇಸಾಯವನ್ನು ಅರಿತಿರುತ್ತಾನೆ.

೬೧. ಮಳೆ ಇಲ್ಲದೆ ಬೆಳೆ ಇಲ್ಲ ತಾಯಿ ಇಲ್ಲದ ಮಗ ಇಲ್ಲ.

೬೨. ಮಳೆ ಇಲ್ಲದೆ ಬೆಳೆ ಇಲ್ಲ ನೀರಿಲ್ಲದೆ ಹೊಳೆ ಇಲ್ಲ.

೬೩. ಮಣ್ಣಿಗಾಗಿ ಕೌರವ ಸತ್ತ; ಹೆಣ್ಣಿಗಾಗಿ ರಾವಣ ಸತ್ತ.

೬೪. ಮಳೆಗೆ ಹೆದರಿ ಹೊಳೆಗೆ ಹಾರಿದಂತೆ.

೬೫. ಮಳೆಗಾಲದ ಬಿಸಿಲನ್ನು ಗಂಡನ ನಂಬಿಗೆಯನ್ನು ನಂಬಬಾರದು.

೬೬. ಮರಕ್ಕೆ ಮುಪ್ಪು ಬಂದರೂ; ಹಣ್ಣು ಮುಪ್ಪಾಗುವುದಿಲ್ಲ.

೬೭. ಮನೆಯಲ್ಲಿ ಕಲಹಗಳಿದ್ದರೆ ಹೊಲವು ಕಸಕಡ್ಡಿ ಮುಳ್ಳುಗಳಿಂದ ಕೂಡಿರುತ್ತದೆ.

೬೮. ಮರಳು ಮಣ್ಣು, ಹಸಿದ ಮಣ್ಣು.

೬೯. ಮಾತು ಮನೆವಾರ್ತೆಗೆ ಕೇಡು, ತೂತು ಮಡಿಕೆಗೆ ಕೇಡು.

೭೦. ಮೀನಿಗೆ ಈಜಲು ಕಲಿಸಬೇಕೆ?

೭೧. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು.

೭೨. ಮುಂಗಾರು ಮಳೆಗೆ ಸಿಕ್ಕಿಕೊಳ್ಳಬೇಡ; ತರ್ಕಿಸುವವರಲ್ಲಿ ಸಿಲುಕಿಕೊಳ್ಳಬೇಡ.

೭೩. ಮುಂಜಾನೆ ಬಂದ ಮಳೆ ಮತ್ತು ಸಂಜೆ ಬಂದ ನೆಂಟರು ಅಂಟಿಕೊಳ್ಳುತ್ತಾರೆ.

೭೪. ಮಾತು ಸಕ್ಕರೆಯ ಹಾಗೆ, ಕೆಲಸ ಕತ್ತಿಯ ಹಾಗೆ.

೭೫. ತಾಯಿ ಇದ್ದರೆ, ತವರು ಮನೆ, ನೀರಿದ್ದರೆ ಕೆರೆಬಾವಿ.

೭೬. ತಾರತಮ್ಯ ತೋರಿಸದೆ ಇರುವುದು ತಾಯಿ ಮತ್ತು ಭೂಮಿಯ ಸ್ವಭಾವ.

೭೭. ದುಡಿಯದೇ ಉಣ್ಣಬಾರದು; ಉಣ್ಣದೆ ಮಲಗಬಾರದು.

೭೮. ನೀರು ಕಡೆದರೆ ಬೆಣ್ಣೆಬಾರದು, ಮರಳು ಹಿಂಡಿದರೆ ಎಣ್ಣೆಬಾರದು.

೭೯. ನೀರು ಸೇರುವುದು ಸಮುದ್ರವನ್ನೇ, ಹಣ ಸೇರುವುದು ಇದ್ದವನನ್ನೇ.

೮೦. ನೀರಿಲ್ಲದೆ ಜಮೀನು ಆಗದು, ಗುಣ ಇಲ್ಲದೆ ಮನುಷ್ಯ ಆಗದು.

೮೧. ನೀರನ್ನು ಕಳ್ಳನನ್ನು ಸೆರೆಹಿಡಿದಿಟ್ಟಿರಬೇಕು.

೮೨. ನೀರಿಲ್ಲದ ಬೆಳೆ ಎಣ್ಣೆ ಹಾಕದ ತಲೆಯಂತೆ.

೮೩. ನೆಂಟರು ದೂರವಿರಬೇಕು, ನೀರು ಹತ್ತಿರವಿರಬೇಕು.

೮೪. ರಾಗಿ ತಿಂದವನಿಗೆ ರೋಗವಿಲ್ಲ.

೮೫. ರಸಿಕತೆಯಿಲ್ಲದ ಬಾಳು, ಒಸರಿಲ್ಲದ ಬಾವಿ.

೮೬. ರಸವಿಲ್ಲದ ಕಟ್ಟು, ಕಸಕ್ಕೆ ಸಮಾನ.

೮೭. ರೋಗಿ ಬಯಸಿದ್ದು ಹಾಲು, ವೈದ್ಯ ಕೊಟ್ಟಿದ್ದು ಹಾಲು.

೮೮. ಸತ್ತ ಎಮ್ಮೆಗೆ ಹತ್ತು ಸೇರು ಹಾಲು.

೮೯. ವ್ಯಾಪಾರದ ಲಾಭಕ್ಕಿಂತ, ಸಣ್ಣ ಗದ್ದೆಯ ವ್ಯವಸಾಯವೇ ಉತ್ತಮ.

೯೦. ಸಕಾಲಕ್ಕೆ ಬಿತ್ತಿದ ಬೆಳೆ, ಮೈತುಂಬಿದ ಹೆಣ್ಣಿನಂತೆ.

೯೧. ಸ್ವಂತ ಗ್ರಾಮದ ಹೆಣ್ಣನ್ನು, ಪಕ್ಕದ ಗ್ರಾಮದ ಜಮೀನನ್ನು ಆರಿಸಿಕೊಳ್ಳಬಾರದು.

೯೨. ಹದವಾದ ತೇವ ತಾಯಿಯ ಮಮತೆಯಂತೆ ಪ್ರತಿಕ್ರಿಯೆಸುತ್ತದೆ.

೯೩. ಹಣ್ಣೆಲೆ ಉದಿರಿದಾಗ ಚಿಗುರೆಲೆ ನಕ್ಕಹಾಗೆ.

೯೪. ಹೆಗಲ ಮೇಲೆ ಕೊಡಲಿ ಇಟ್ಟು ಹುಡುಕುವವನ ಹಾಗೆ.

೯೫. ಹಟ್ಟಿಯಲ್ಲಿ ಹತ್ತು ಎಮ್ಮೆ, ಕರೆಯಲಿಕ್ಕೆ ಒಂದು ಎಮ್ಮೆ.

೯೬. ಹಣ್ಣಿಲ್ಲದ ಮರಕ್ಕೆ, ಕಣ್ಣಿಲ್ಲದ ಗಿಳಿ ಹೋದ ಹಾಗೆ.

೯೭. ಹಸಿವಿಲ್ಲದವನಿಗೆ ರಸಬಾಳೆ ರುಚಿಸೀತೆ

೯೮. ಹನಿಗೂಡಿದರೆ ಹಳ್ಳ; ತೆನೆಗೂಡಿದರೆ ರಾಶಿ.

೯೯. ಹಾಗಲದ ಹಣ್ಣಾದರೇನು? ಸೊಪ್ಪಾದರೇನು?

೧೦೦. ಹೂಡದೆ ಗದ್ದೆ ಹಾಳಾಯಿತು; ನೋಡದೆ ಮನೆ ಹಾಳಾಯಿತು.

೧೦೧ ಹೊಟ್ಟೆ ತುಂಬಿದ ಮೇಲೆ ಉಣಬಾರದು; ಮಳೆಬಿದ್ದ ಮೇಲೆ ಮರದಡಿ ನಿಲ್ಲಬಾರದು.

**ಒಗಟುಗಳು**

ಉಂಡುಬಿಟ್ಟ ಆಡಿಬಿಟ್ಟ=ಎದೆಹಾಲು, ತೊಟ್ಟಿಲು

ಒಳ್ಳೆಹಕ್ಕಿ ಮುಳ್ಳಿಗೆ ಮೊಟ್ಟೆ ಹಾಕ್ತು=ನಿಂಬೆಹಣ್ಣು

ಅಟ್ಟಕ್ಕೆ ಆರು ಕಣ್ಣು=ಕೊಳಲು

ಮುದುಕಿಗೆ ಮೂರು ಕಣ್ಣು=ತೆಂಗಿನಕಾಯಿ

ಗೌಡರ ಕೆಂದೆತ್ತಿಗೆ ಒಂದೇ ಕಣ್ಣು=ಅಡಿಕೆ

ಅಂಗಣ್ಣ ಮಂಗಣ್ಣ ಅಂಗಿ ತೆಗೆದು ನುಂಗಣ್ಣ=ಬಾಳೆಹಣ್ಣು

ಸುಗ್ಗಿಯಾಗೆ ಹೋಗ್ಯಾನು ಅಂದ್ರೆ ಅರವಿ ಇರಲ್ಲಮಳೆಗಾಲದಾಗ ಹೋಗ್ಯಾನ ಅಂದ್ರೆ ಮಕ್ಕಳು ಬಾಳ=ಅಮಚೆಮರ

ಒಬ್ಬನು ಒಕ್ಕಣ್ಣ ಮತ್ತೊಬ್ಬ ಮುಕ್ಕಣ್ಣ=ಅಡಿಕೆ ತೆಂಗಿನಕಾಯಿ

ಕೆರ್‍ಯಾಗೆ ಏಳು ಎಮ್ಮೆ ಎರಿಯಾಗೆ ಹತ್ತೆಮ್ಮೆ ಒಟ್ಟು ಎಷ್ಟು ಎಮ್ಮೆ=ಒಂದು ಎಮ್ಮೆ

ಉದ್ದ ಸಾವನ ಉರಿಮುಕುಳಿಯವನೆ, ಸುದ್ದಿ ಹೇಳು ಸೂಳೆಮಗನೆ=ಮೆಣಸಿನ ಕಾಯಿ

ಹೊಟ್ಟೆ ಮೇಲೆ ಹೊಟ್ಟೆ ತೂತಕ್ಕೆ ಒಂದುಗೂಟ = ಬೀಸುವ ಕಲ್ಲು

ಬಿಳಿ ಹುಡುಗಿ ಕರಿಟೋಪಿ = ಬೆಂಕಿಕಡ್ಡಿ

ಬಾಡು ತುದ್ರೆ ನೀರ್ ಕಂಡ ಜಾಗದ ನಿಲ್ಲು = ಕುದುರೆ ಮೆಟ್ಟು

ಕೆಂದು ಕುದುರೆ ಮೀರಾಗೆ ಟೆಬಕ ಕೆಂಡ, ಹೆಂಚು ಒಬ್ಬಣ್ಣ ಹತ್ತಾನೆ, ಒಬ್ಬಣ್ಣ ಇಳಿತಾನೆ = ಟಿಬ್ಲರೊಟ್ಟಿ.

ಬಾಗಿಲಿಗೆ ಬರುತ್ತಾಳೆ ಬಸಿರಾಗುತ್ತಾಳೆ = ರೊಟ್ಟಿ

ಊರು ತಿರುಗುತ್ತಾನೆ ಮೂಲೇಲಿ ಕೂರುತ್ತೇನೆ = ಚಪ್ಪಲಿ, ಊರುಗೋಲು

ಅಂಕು ಡೊಂಕು ಶಂಖುಪಾದ ಮೂರು ಮುಕಳಿಗೆ ಹತ್ತು ಕಾಲು, ನೇಗಿಲು=ಎತ್ತು ರೈತ

ಅಟ್ಟದ ಮೇಲೆ ಪುಟ್ಟಗೌರಿ=ಕುಂಕುಮ

ಬಿಳಿಹುಲ್ಲಾಗೆ ಹೊರಳಾಡಿಸಿದ್ದೆ=ಹಲಸಿನ ಹಣ್ಣು

ಬಿಳಿ ಮಕ್ಕಳನ್ನು ಹೆತ್ತಿದ್ದೆ=ತೊಳೆ ಬೀಜ.

ಬಾದಿ ಬದಿಯಾಗೆ ಬಿದ್ದಿದ್ದೆ=ಹಲಸಿನ ಮೂಡ

ಹಾದ್ಯಾಗ ಹೋಗಾಗ ಧರೆ ಕುಣಿಯಾಗ ಕೈಹಾಕ=ಎಲೆ ಅಡಿಕಿ, ಚೆಂಟಿ

ಬಳಿ ಬಯಲಾಗೆ ಕರಿನಾಲೆ=ಬರವಣಿಗೆ

ಹಗ್ಗ ಮೇಯಿತ್ತು, ಕೋಣ ಬಿದ್ದ ಕಂತು=ಬಳ್ಳಿ ಕುಂಬಳಕಾಯಿ

## ವಕ್ತೃವಿವರ

| ಊರು | ಹೆಸರು | (ಸೊರಬ) ವಯಸ್ಸು |
|---|---|---|
| ೧. ಚಂದ್ರಗುತ್ತಿ | ಶ್ರೀಮತಿ ರೇಣುಕಮ್ಮ ಶಿವಪ್ಪ | ೬೦. |
| ೨. ನೆಲ್ಲೂರು | ಸುಳ್ಳೂರು ಹನುಮಂತಪ್ಪ | ೪೫ |
| ೩. ಎಚ್ಚೆ | ಶಿವನಾಯಕನ ಕೆರಿಯಪ್ಪ | ೪೫ |
| ೪. ದೊಡ್ಡೇರಿ | ಆಸ್ಪತ್ರೆ ಕನ್ನಪ್ಪ | ೪೦ |
| ೫. ಕ್ಯಾಸನೂರು | ಪರಮೇಶ್ವರ | ೪೫ |
| ೬. ಕುಪ್ಪಗಡ್ಡೆ | ಪ್ರಕಾಶ್ ಎಚ್.ಎನ್. | ೩೫ |
| ೭. ತೆಕ್ಕೂರ್ | ಗಿರಿಯಪ್ಪ ಮಾಸ್ತರ್ | ೫೫ |
| ೮. ಇಡಗೋಡಂ | ಸುರೇಶ್ ಗ್ರಾ.ಪಂ. ಅಧ್ಯಕ್ಷರು | ೪೦ |
| ೯. ಮಾವಲಿ | ರಾಜಪ್ಪಮೇಷ್ಟ್ರು | ೩೫ |
| ೧೦. ಗುಂಜನೂರು | ಪಕ್ಕೀರಪ್ಪ | ೨೫ |
| ೧೧. ಸೊರಬ | ಚಂದ್ರಪ್ಪ | ೩೫ |
| ೧೨. ಬಿದಿರಿಗೇರಿ | ಕೆರಿಯಪ್ಪ | ೪೫ |
| ೧೩. ಸೊರಬ | ಯೋಗೇಶ್ | ೪೦ |
| ೧೪. ಕುಗ್ವೆ | ಶಿವಾನಂದ | ೪೫ |
| ೧೫. ಕುಗ್ವೆ | ಈಶ್ವರನಾಯಕ | ೪೫ |
| ೧೬. ಕುಗ್ವೆ | ಸಣ್ಣಮಂಜಪ್ಪ | ೪೦ |
| ೧೭. ಅದರಂತೆ | ದುರಗಪ್ಪ | ೫೦ |
| ೧೮. ತಡಗಳವೇ | ಮಾದೇವಪ್ಪ | ೫೨ |
| ೧೯. ಮತ್ತೂರು | ಮಹಾದೇವಪ್ಪ | ೪೦ |
| ೨೦. ಸೈದೂರು | ಬೂದಿಗುಡ್ಡೆಗಣಪತಿ | ೫೦ |
| ೨೧. ಪಡುವಗೋಡ್ | ಶಿವರಾಮಪ್ಪ | ೪೦ |

| | | |
|---|---|---|
| ೨೨. ಬಲೇಗಾರ | ದೊಡ್ಮನಿ ಕನ್ನಪ್ಪ | ೫೫ |
| ೨೩. ಬರದವಳ್ಳಿ | ಕತ್ತಲೆಬಂಗಾರನಾಯಕ | ೮೦ |
| ೨೪. ಕಾಗೋಡ್ | ಅಣ್ಣಪ್ಪ | ೫೦ |
| ೨೫. ಕಾಗೋಡ್ | ಪುಟ್ಟಪ್ಪ | ೫೫ |
| ೨೬. ಯಲಗಹಳ್ಳಿ | ರಾಮಚಂದ್ರಪ್ಪ | ೬೫ |
| ೨೭. ಕಲಸಿ | ಚಂದ್ರಪ್ಪ | ೫೫ |
| ೨೮. ಮರಸ | ಮರಿಯಪ್ಪ | ೫೦ |
| ೨೯. ಸುರನಗದ್ದೆ | ವಾನೇಕೆರಿಯಪ್ಪ | ೬೦ |
| ೩೦. ಚಿಕ್ಕನಲ್ಲೂರು | ಸಿ.ಬಿ.ನಾರಾಯಣಪ್ಪ | ೪೨ |
| ೩೧. ಗಾಳೀಪುರ | ಶಿವಾನಂದ | ೪೨ |
| ೩೨. ಇಂಡುವಳ್ಳಿ | ಕಮಲಾಕರ | ೪೨ |
| ೩೩. ಶಿರವಂತೆ | ಚಂದ್ರಶೇಖರ್ ಎನ್. | ೪೦ |
| ೩೪. ಲಂಡಿಗೇರಿ | ಶಿವಾಜಿ.ಎಲ್.ಇ. | ೪೩ |
| ೩೫. ಕೆಳದಿ | ದ್ಯಾವಪ್ಪ | ೪೩ |
| ೩೬. ಮಾಸೂರು | ಗುರುಬಸಪ್ಪ | ೫೦ |
| ೩೭. ನೇರಲಗಿ | ಗಣೇಶ | ೪೩ |
| ೩೮. ಮಾಲ್ವೆ | ದ್ಯಾವಪ್ಪರೊಡ್ಡಿ | |
| ೩೯. ಮೆಳವರಗಿ | ಮಂಜಪ್ಪ ಮಗೆಕೊಪ್ಪ | ೪೬ |
| ೪೦. ಮಂಡಗಳಲೆ | ಹುಚ್ಚಪ್ಪ ಎನ್. | ೫೨ |
| ೪೧. ಯಲಕುಂದ್ಲಿ | ಬಂಗಾರಪ್ಪ ಕೊಂಡ್ಲಿ | ೪೩ |
| ೪೨. ಮನೆಘಟ್ಟ | ಲಕ್ಷ್ಮಣಪ್ಪ ಎಂ.ಜಿ. | ೫೭ |
| ೪೩. ಹಿರೇನಲ್ಲೂರು | ಬರಿಸಿನ ಕನ್ನಪ್ಪ | ೫೦ |



ಕಣಗೂಡಿಸುವ ಮಹಿಳೆಯರು.



ದೀವರ ಮನೆಗೆ ಹೊಂದಿಕೊಂಡಂತೆ ದನದ ಕೊಟ್ಟಿಗೆ.



ಎತ್ತುಗಳಿಂದ ಹುಲ್ಲು ತುಳಿಸುವುದು.



ಬೂರೆಹಬ್ಬ,ತನೀರುಪೂಜೆ ದೀಪಾವಳಿಯ ಎರಡು ದಿನದ ಹಿಂದಿನ ಹ



ಭತ್ತ ತೂರುವ ರೈತರು



ಭತ್ತಬಡಿಯುವುದು.



ಗದ್ದೆ ಕೊಯ್ಲು ಮಹಿಳೆಯರು.



ಬೆಳೆದು ನಿಂತ ಭತ್ತದ ಪೈರು.



ಆದ್ರಿಮಳೆಹಬ್ಬ, ಬಿಂಗಿಕುಣಿತ.



ದೀಪಾವಳಿ ಹಬ್ಬದಲ್ಲಿ ಹೋರಿ ಬೆದರಿಸುವುದು.



ಕೃಷಿಉಪಕರಣಗಳಿಗೆ ದೀವರ ಭಕ್ತಿಪೂರ್ವ ನಮನಗಳು.



ಭೂಮಿಹುಣ್ಣಿಮೆ ಹಬ್ಬದಲ್ಲಿ ದೀವರ ಮಹಿಳೆಯರ ಭಕ್ತಿಪೂರ್ವಕ ನಮನಗಳು.



ಭೂಮಣ್ಣಿ ಬುಟ್ಟಿಚಿತ್ತಾರ, ದೀಪಾವಳಿ ದಿನ ಹಗ್ಗ ವಂಡೆಯನ್ನು ಎತ್ತುಗಳಿಗೆ ಮಾಡುತ್ತಾರೆ.



ಭೂಮಿಹುಣ್ಣಿಮೆ ಹಬ್ಬದ ಪೂಜೆ.



ಗೋಪೂಜೆ. ಮಲೆನಾಡಿನ ಗಿಡ್ಡವನ್ನು ಒಳಗೆ ಕರೆದುಕೊಂಡು ಹೋಗುವುದು.



ಬಿಂಗಿಯನ್ನು ಕುಮಾರರಾಮನ ದೇವಸ್ಥಾನದ

[illegible]



ಕೊಯ್ಲಿಗೆ ಬೆಳೆದು ನಿಂತ ಭತ್ತದ ಪೈರು.



ದೀವರ ಮನೆ.



ತೊಂಡೆಬಳ್ಳಿ ಚಪ್ಪರ



ಸುಗ್ಗಿ ಮಾಡುವ ರೈತರ ಊಟದ ಸಮಯ.



ಕೃಷಿಜನರೊಂದಿಗೆ ಸಂದರ್ಶಕ.

ಹೊರೆ ಹೊತ್ತ ಮಹಿಳೆಯರು.



ಭತ್ತದ ಪೈರನ್ನು ಕೊಯ್ಯುವ ಮಹಿಳೆ



